ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕೊಂಡಜ್ಜಿ ಬಸಪ್ಪ

ಡಾ. ಸಾ.ಶಿ. ಮರುಳಯ್ಯ

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**KONDAJJI BASAPPA**

Eminent Parlimentarian Series
Written by **Dr. SA.SHI. MARULAIAH,**
**Published** by
Karnataka Legislature Library Committee
Vidhana Soudha, Bangalore-560001.
Page: 285 + xiii Price: 20-00 Rs.

First Edition: 2009 Copies: 2000
**Printed & Designed by**
Government Press, Bangalore.

**ಕೊಂಡಜ್ಜಿ ಬಸಪ್ಪ**

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಡಾ. ಸಾ.ಶಿ. ಮರುಳಯ್ಯ**
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು-560 001.
ಪುಟ: 285 + xiii ಬೆಲೆ: 20/- ರೂ.

ಮೊದಲ ಮುದ್ರಣ: 2009 ಪ್ರತಿಗಳು: 2.000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2008-2009

---

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಜಗದೀಶ ಶೆಟ್ಟರ್**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಕೆ. ಲಕ್ಷ್ಮೀನಾರಾಯಣ**

ವಿಧಾನಸಭಾ ಸದಸ್ಯರು

**ಶ್ರೀ ಎಸ್.ವಿ. ರಾಮಚಂದ್ರ**

ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರೀಸ್**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಡಾ॥ ಚಂದ್ರಶೇಖರ ಬಿ.ಕಂಬಾರ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2004–2005

ಅಧ್ಯಕ್ಷರು

**ಶ್ರೀ ವಿ.ಆರ್. ಸುದರ್ಶನ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೃಷ್ಣ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಜಿ.ಎಸ್. ಗಡ್ಡದೇವರ ಮಠ**

ವಿಧಾನಸಭಾ ಸದಸ್ಯರು

**ಶ್ರೀ ಕಳಕಪ್ಪ ಬಂಡಿ**

ವಿಧಾನಸಭಾ ಸದಸ್ಯರು

**ಶ್ರೀ ಆರ್. ಧ್ರುವನಾರಾಯಣ್**

ವಿಧಾನಸಭಾ ಸದಸ್ಯರು

**ಡಾ: ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನಸಭಾ ಸದಸ್ಯರು

**ಡಾ: ವಿ.ಎಸ್. ಆಚಾರ್ಯ**

ವಿಧಾನ ಪರಿಷತ್ ಸದಸ್ಯರು

**ಡಾ: ಎಲ್. ಹನುಮಂತಯ್ಯ**

ವಿಧಾನ ಪರಿಷತ್ ಸದಸ್ಯರು

**ಡಾ: ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ - ಸಂಪಾದಕ ವರ್ಗ

---

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |
| ಅನಸೂಯ ಎನ್.ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೆಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

17 ನವೆಂಬರ್ 2009

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ. ಸಾ.ಶಿ. ಮರುಳಯ್ಯ** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ **ಕೊಂಡಜ್ಜಿ ಬಸಪ್ಪ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

"I believe a man should be proud of the city in which he lives, and that he should so live that city will be proud that he lives in it"

- Abraham Lincolin.

ನಾನಿಂಥಾ ಊರಿನವನು ಎಂಬ ಹೆಮ್ಮೆ ವ್ಯಕ್ತಿಯಿದು, ನನ್ನ ಮಡಿಲಲ್ಲಿ ಇಂಥವನು ಬದುಕಿ ಬೆಳಕಾದಲ್ಲೊ ಎಂಬ ಹಿಗ್ಗು ಆ ಊರಿನದು!

ಅಮೆರಿಕದ ಹದಿನಾರನೆಯ ಅಧ್ಯಕ್ಷ ಅಬ್ರಹಾಂ ಲಿಂಕರ್ನ ಈ ನುಡಿಮುತ್ತುಗಳಿಗೆ ಹಿಡಿದ ಕನ್ನಡಿ ನಮ್ಮೆಲ್ಲರ ಅಭಿಮಾನದ ಮೂರ್ತಿ ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪನವರು ಪ್ರತ್ಯಕ್ಷ ಪ್ರಮಾಣಭೂತರಾಗಿದ್ದಾರೆ. ಶ್ರೀಯುತರು ತಮಗೆ ಜನ್ಮವಿತ್ತ ಕೊಂಡಜ್ಜಿ ಗ್ರಾಮಕ್ಕೆ, ಬದುಕು ಕೊಟ್ಟ ನೆಲ ಕನ್ನಡ ನಾಡಿಗೆ, ಬೆಳಕು ನೀಡಿದ ರಾಷ್ಟ್ರ ಭಾರತಕ್ಕೆ ಕೀರ್ತಿ ತಂದ ಹೆಮ್ಮೆಯ ಪುತ್ರರೆನಿಸಿದ್ದಾರೆ. ಅವರ ಜನನದಿಂದ ವ್ಯಷ್ಟಿ ಸಮಷ್ಟಿಗಳೆರಡೂ ಪರಸ್ಪರ ಧನ್ಯತೆಯನ್ನು ಧಾರಣಗೈದು ಕೊಂಡಿದೆ.

ಕೊಂಡಜ್ಜಿಯವರು ಮಾನವೀಯತೆಯನ್ನು ಗರ್ಭೀಕರಿಸಿಕೊಂಡ ಮಹಾಮಾನವತಾವಾದಿ ದೀನರಿಗೆ ದಯೆಯಾಗಿ ದಲಿತರಿಗೆ ತಾಯಾಗಿ, ಹಸಿದು ಬಂದವರಿಗೆ ಅನ್ನದಾದವರು; ನೆರಳಿಲ್ಲದವರಿಗೆ ಸೂರು ಆದವರು!

ಕೊಂಡಜ್ಜಿ ಬಸಪ್ಪನವರ ರಾಜಕೀಯ ಪ್ರವೇಶ ಕೇವಲ ಆಕಸ್ಮಿಕ ಬಂಧು-ಮಿತ್ರರ ಪ್ರೋತ್ಸಾಹ, ಜನತಾ ಜನಾರ್ಧನನ ಒತ್ತಾಸೆ - ಇವು ಕಾರಣಗಳು. ಶ್ರೀಯುತರು ಎಲ್ಲರ ತಲೆಗೂ ಹೂವ ತಂದರು ಹುಲ್ಲು ತರಲಿಲ್ಲ! ರಾಜಕೀಯದ ಕೆಸರಿನಲ್ಲಿ ಆತ್ಮಸೌಂದರ್ಯದ ತಾವರೆಯಾಗಿ ಅರಳಿದರು.

ಅಧಿಕಾರ ಬರುತ್ತೆ ಹೋಗುತ್ತೆ. ಬಂದಾಗ ಹಿಗ್ಗಲಿಲ್ಲ, ಹೋದಾಗ ಕುಗ್ಗಿಲ್ಲ. ತಮ್ಮ ಬದುಕಿನಲ್ಲಿ ಈ ಸಮತೋಲನವನ್ನು ಕಾಯ್ದುಕೊಂಡು ಬಂದದ್ದರಿಂದ ಶ್ರೀಯುತರು 'ರಾಜರ್ಷಿ' ಎಂಬ ಗೌರವಕ್ಕೆ ಪಾತ್ರರಾದರು.

ಕೊಂಡಜ್ಜಿಯವರು ಸಮಾಜಕ್ಕೆ ತನ್ಮೂಲಕ ರಾಜ್ಯ-ರಾಷ್ಟ್ರಗಳಿಗೆ ಕೊಟ್ಟ ಕೊಡುಗೆ ಅಪಾರ: ಮುಖ್ಯವಾಗಿ, 'ಇಲದಲದವರಿಗೆ ಬೆಲ್ಲವಾದದ್ದು. ಅಂದರೆ ವರ್ಗಭೇದ, ವರ್ಣಭೇದ, ಲಿಂಗಭೇದವಿಲ್ಲದೆ ಎಲ್ಲ ಬಡಜನರ ಏಳಿಗೆಗಾಗಿ ಯೋಜನೆಗಳನ್ನು ರೂಪಿಸಿದ್ದು;

ತಮ್ಮ ಅಧಿಕಾರಾವಧಿಯಲ್ಲಿ ಗ್ರಾಮಾಭಿವೃದ್ಧಿಗಾಗಿ ಕರ್ನಾಟಕಾದ್ಯಂತ ಕ್ಷೇತ್ರಕಾರ್ಯಮಾಡಿ 'ಪಂಚಾಯತ್ ರಾಜ್' ವರದಿಯನ್ನು ವಿಶಿಷ್ಟ ಸ್ವರೂಪದಲ್ಲಿ ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದ್ದು; ತರುಣ ರಾಜಕಾರಣ ಪಟುಗಳಿಗೆ ಉದಾತ್ತ ಮುತ್ಸದ್ಧಿತನದ ಪಾಠ ಕಲಿಸಿದ್ದು; ಎಲ್ಲಕ್ಕೂ ಮಿಗಿಲಾಗಿ ಕರ್ನಾಟಕದಲ್ಲಿ ಸ್ಕೌಟ್ಸ್ ಅಂಡ್ ಗೈಡ್ಸ್ ಮಹಾಸಂಸ್ಥೆಯು ಪ್ರಗತಿ ಪ್ರಸ್ಥಾನಕ್ಕೆ ಕಾರಣರಾದದ್ದೂ. ತಮ್ಮ ಕಡೆಯ ಉಸಿರಿರುವವರೆಗೂ 'ನಿಜದ ಸ್ಕೌಟ್' ಆಗಿ ಸೇವೆ ಸಲ್ಲಿಸಿ, ಆದರ್ಶ ಸೃಷ್ಟಿಸಿದ್ದು ಮತ್ತು ಯುವ ಶಕ್ತಿಗೆ ಶ್ರೀಶಕ್ತಿಯಾಗಿ ಕಸುವು, ಕಾಂತಿ ತುಂಬಿದ್ದು.

ಇಂತಹ ಓರ್ವ ಪ್ರತಿಭಾವಂತ ಸಂಸದೀಯ ಪಟುವನ್ನು ಕುರಿತು ಕಿರು ಹೊತ್ತಿಗೆ ರಚಿಸುವ ಅವಕಾಶ ದೊರೆತದ್ದು ನನ್ನ ಭಾಗ್ಯ ವಿಶೇಷ. ಜೊತೆಗೆ ಅಮಿತ ಆನಂದವೂ ಅಹುದು. ಏಕೆಂದರೆ ಕೃತಿಯನ್ನು ಸಿದ್ಧಪಡಿಸಿಕೊಟ್ಟು ಮೂರು ವರ್ಷಗಳಾದರೂ, ಒಂದೆರಡು ಸರಕಾರಗಳು ಬಂದು ಹೋದರೂ ನನ್ನ ಈ ಕೃತಿ ಬೆಳಕು ಕಾಣಲೇ ಇಲ್ಲ. ಇಂದಿನ ಡಾ. ಯಡಿಯೂರಪ್ಪ ಸರ್ಕಾರದಿಂದ ಪ್ರಕಾಶಗೊಳ್ಳುತ್ತಿರುವುದರಿಂದ ಹರ್ಷಿತನಾಗಿ ಕರ್ನಾಟಕ ಸರ್ಕಾರಕ್ಕೆ, ಸರ್ಕಾರದ ವಿಧಾನ ಮಂಡಲದ ಪ್ರಧಾನ ಕಾರ್ಯದರ್ಶಿಯವರಿಗೆ ನನ್ನ ಧನ್ಯವಾದಗಳು. ಈ ನನ್ನ ಕನಸಿನ ಕೂಸನ್ನು ಪೋಷಿಸಿ ಬೆಳೆಸಿದವರು ನನ್ನ ವಿದ್ಯಾರ್ಥಿ ಮಿತ್ರರೂ, ದಿವಂಗತ ಕೊಂಡಜ್ಜಿ ಬಸಪ್ಪನವರ ಸುಪುತ್ರರೂ ಇಂದು ಕರ್ನಾಟಕ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯನ್ನು ರಾಜ್ಯ ಮುಖ್ಯ ಆಯುಕ್ತರೂ ಆದ ಕೊಂಡಜ್ಜಿ ಬಿ. ಷಣ್ಮುಖಪ್ಪ ಮತ್ತು ಶ್ರೀ ಕೊಂಡಜ್ಜಿ ಬಿ. ಮೋಹನ್ ರವರಿಗೂ, ನನ್ನ ಕ್ಷೇತ್ರಕಾರ್ಯದಲ್ಲಿ ನನಗೆ ಪೂರ್ಣ ನೆರವು ನೀಡಿದ ಶ್ರೀ ಕೆ.ಎಸ್. ಮಲ್ಲಿಕಾರ್ಜುನಯ್ಯ ಮತ್ತು ಡಾ. ಮಲ್ಲಿಕಾರ್ಜುನ್ ಇವರುಗಳಿಗೆ ನನ್ನ ಗೌರವದ ನಮನಗಳು.

'ರಾಗಿಣಿ' ಬೆಂಗಳೂರು
14 ಡಿಸೆಂಬರ್ 2008

**ಡಾ. ಸಾ.ಶಿ. ಮರುಳಯ್ಯ**
'ರಾಗಿಣಿ'
# 3, ಸರ್ವಿಸ್ ರಸ್ತೆ,
ಹಂಪಿನಗರ, ಬೆಂಗಳೂರು – 560104
ದೂರವಾಣಿ: 23300622, 23147827
ಜಂಗಮವಾಣಿ: 9945917586

# ಪರಿವಿಡಿ

## ಭಾಗ – ೩
## ಸಂಸತ್ತಿನಲ್ಲಿ ಕೊಂಡಜ್ಜಿ ಬಸಪ್ಪ



## ಭಾಗ –೪



## ಭಾಗ–೫

ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ
ಇವನಮ್ಮವ ಇವನಮ್ಮವ ಇವ ನಮ್ಮವನೆಂದಿನಿಸಯ್ಯ
ಕೂಡಲಸಂಗಮದೇವಾ ನಿಮ್ಮಮನೆವಮಗನೆನಿಸಯ್ಯ

**– ಬಸವಣ್ಣ**

# ಶ್ರೀ ಕೊಂಡಜ್ಜಿ ಬಸಪ್ಪ
# ಇತಿವೃತ್ತ

## ಜನನ ಮತ್ತು ಬಾಲ್ಯ

ಕೊಂಡಜ್ಜಿ ದಾವಣಗೆರೆ ಜಿಲ್ಲೆಯ (ದಾವಣಗೆರೆ ಜಿಲ್ಲೆಯಾಗುವ ಮೊದಲು ಅದು ಚಿತ್ರದುರ್ಗ ಜಿಲ್ಲೆಗೆ ಸೇರಿತ್ತು) ಒಂದು ಪುಟ್ಟ ಹಳ್ಳಿ. ದಾವಣಗೆರೆಯಿಂದ ೧೪ ಕಿ.ಮೀ. ದೂರದಲ್ಲಿದೆ. ಊರಿನ ಪೂರ್ವಕ್ಕೆ ಮೂರು ಸಾವಿರ ಎಕರೆ ಗುಡ್ಡಪ್ರದೇಶ, ಪಶ್ಚಿಮಕ್ಕೆ ತುಂಗಭದ್ರಾ ನದಿ, ಉಳಿದಂತೆ ಬಯಲು ಪ್ರದೇಶ. ಊರಿನ ಸನಿಹದಲ್ಲೇ ಒಂದು ದೊಡ್ಡ ಕೆರೆ. ಈಗ ಇದು ಭದ್ರಾನಾಲೆಯ ನೀರಿನಿಂದ ಸದಾ ತುಂಬಿರುತ್ತದೆ. ಕಡಿಮೆ ಜನಸಂಖ್ಯೆಯುಳ್ಳ ಹಳ್ಳಿಯಾದರೂ ಕೊಂಡಜ್ಜಿ ಅಚ್ಚುಕಟ್ಟಾಗಿದೆ. ಇಂದು ಒಂದು ಪ್ರೇಕ್ಷಣೀಯ ಸ್ಥಳವೂ ಆಗಿದೆ. ಇದಕ್ಕೆ ಕಾರಣಕರ್ತರು ಶ್ರೀ ಬಸಪ್ಪನವರು ಎಂದರೆ ತಪ್ಪಾಗದು. ಕೊಂಡಜ್ಜಿಗೆ ಸ್ಥಳಪುರಾಣವಾಗಲಿ, ಐತಿಹ್ಯವಾಗಲಿ, ಇತಿಹಾಸವಾಗಲಿ ಇದ್ದಂತಿಲ್ಲ. ಆದರೆ ಬಸಪ್ಪನವರಿಂದ ಅದಕ್ಕೆ ಐತಿಹಾಸಿಕ ಮಹತ್ವ ದೊರೆತಿದೆ. ಯಾರ ಗಮನಕ್ಕೂ ಅಷ್ಟಾಗಿ ಬಾರದಿದ್ದ ಕೊಂಡಜ್ಜಿ ಎಂಬ ಕುಗ್ರಾಮ ಇಂದು ಬಸಪ್ಪನವರಿಂದಾಗಿ ಸುಗ್ರಾಮವಾಗಿ ಪ್ರಸಿದ್ಧಿ ಪಡೆದಿದೆ. ಬಸಪ್ಪನವರೂ ಆ ಊರಿನ ಹೆಸರಿನ ಮೂಲಕವೆ ಪ್ರಸಿದ್ಧರಾಗಿದ್ದಾರೆ. ಇದು ಸಹಜ. 'ನಾನಿಂಥ ಊರಿನವನು ಎಂಬ ಹೆಮ್ಮೆ ವ್ಯಕ್ತಿಯದಾದರೆ, ನನ್ನ ಮಡಿಲಲ್ಲಿ ಅಂಥವನು ಬಾಳಿ ಬದುಕಿದ್ದಾನಲ್ಲಾ ಎಂಬ ಹಿಗ್ಗು ಊರಿನದು' ಎಂಬುದಾಗಿ ಉತ್ತರ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಹದಿನಾರನೆಯ ಅಧ್ಯಕ್ಷ ಅಬ್ರಹಾಂ ಲಿಂಕನ್ ಹೇಳುತ್ತಾನೆ. ಈ ಮಾತಿನ ಸತ್ಯತೆಯನ್ನು ಕೊಂಡಜ್ಜಿ ಮತ್ತು ಬಸಪ್ಪ ಇವರಲ್ಲಿ ಕಾಣುತ್ತೇವೆ. ಬಸಪ್ಪನವರ ಹೆಸರಿನ ಜೊತೆಯಲ್ಲಿ ಕೊಂಡಜ್ಜಿ ಕೊಂಡಿ ಹಾಕಿಕೊಂಡಿರುವುದರಿಂದ ಬಸಪ್ಪನವರು 'ಕೊಂಡಜ್ಜಿ ಬಸಪ್ಪ' ಎಂದೇ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಅಷ್ಟೇ ಅಲ್ಲ; 'ಕೊಂಡಜ್ಜಿ' ಎಂದರಷ್ಟೇ ಸಾಕು. 'ಬಸಪ್ಪ' ಎಂದೇ ರೂಢಿಗೆ ಬಂದು ಹೋಗಿದೆ. ವ್ಯಕ್ತಿಗೂ ಹುಟ್ಟೂರಿಗೂ ಅಂತಹ ಅವಿನಾಭಾವ ಸಂಬಂಧ ಇದೆ.

ಕೊಂಡಜ್ಜಿಯವರ ತಂದೆಯವರು ನಿಂಗಪ್ಪನವರು, ತಾಯಿ ಹಾಲಮ್ಮನವರು. ಇವರ ಪೂರ್ವಜರು ಕೆಂಚನಹಳ್ಳಿಯವರೆಂದು ತಿಳಿಯುತ್ತದೆ. ಆದರೆ 'ಕೊಂಡಜ್ಜಿ' ಯವರ ತಾತ, ಅಂದರೆ ನಿಂಗಪ್ಪನವರ ತಂದೆ ಭೀಮಪ್ಪನವರು ಕೆಂಚನಹಳ್ಳಿಯಿಂದ ಕೊಂಡಜ್ಜಿಗೆ ಬಂದು ನೆಲೆಸಿದರಂತೆ. ಭೀಮಪ್ಪನವರಿಗೆ ಐದು ಗಂಡು, ಮೂರು ಹೆಣ್ಣು ಒಟ್ಟು ಎಂಟು ಮಕ್ಕಳು. ಇವರಲ್ಲಿ ನಿಂಗಪ್ಪನವರೇ ಹಿರಿಯರು. ನಿಂಗಪ್ಪನವರಿಗೆ ಮುನಿಯಪ್ಪ, ಮಲ್ಲಿಕಾರ್ಜುನಪ್ಪ, ಬಸಪ್ಪ, ವಿರೂಪಾಕ್ಷಪ್ಪ ಮತ್ತು ಸಿದ್ಧಲಿಂಗಮ್ಮ ಎಂದು ಐವರು ಮಕ್ಕಳು. ಶ್ರೀ ಬಸಪ್ಪನವರು ಗಂಡು ಮಕ್ಕಳಲ್ಲಿ ಮೂರನೆಯವರು. ಈ ಐವರೂ ತಮ್ಮ ತಾಯಿ ಹಾಲಮ್ಮನವರ ತವರೂರಾದ ಕಕ್ಕರಗೊಳ್ಳದಲ್ಲಿ ಹುಟ್ಟಿದವರು. ತಮಾಷೆ ಎಂದರೆ ವಂಶದ ಪೂರ್ವಜರದು ಕೆಂಚನಹಳ್ಳಿ, ಹುಟ್ಟಿದ ಊರು ತಾಯಿಯ ತವರು ಕಕ್ಕರಗೊಳ್ಳ,

ಬೆಳೆದು ಬಾಲ್ಯಕಳೆದ ಊರು ತಂದೆಯವರ ಕೊಂಡಜ್ಜಿ—ಈ ಮೂರೂ ಊರುಗಳಿಗೆ ಇಂಗ್ಲಿಷ್‌ನಲ್ಲಿ 'ಕೆ' ಎಂದೇ ಇನಿಷಿಯಲ್. ಬಸಪ್ಪನವರಿಗೆ ಕೆ. ಬಸಪ್ಪ ಎಂದಿದ್ದರೆ ತಪ್ಪೇನು ಆಗುತ್ತಿರಲಿಲ್ಲ. ಆದರೆ ಹಿಂದೆಯೇ ಪ್ರಸ್ತಾಪಿಸಿದಂತೆ ಬಸಪ್ಪನವರು ಕೊಂಡಜ್ಜಿ ಬಸಪ್ಪ ಎಂದೇ ಖ್ಯಾತರಾದರು.

**ಶಿಕ್ಷಣ :**

ಕೊಂಡಜ್ಜಿ ಬಸಪ್ಪನವರ ಜನನದ ದಿನ ಶಾಲೆಯ ದಾಖಲೆಯ ಪ್ರಕಾರ ೧೧ ಡಿಸೆಂಬರ್ ೧೯೧೫. ಆದರೆ ಅವರ ತಾಯಿಯವರ ಪ್ರಕಾರ ಬೇರೆ. ಆದ್ದರಿಂದ ಕೊಂಡಜ್ಜಿಯವರ ಜನ್ಮದಿನ ನಿಶ್ಚಿತವಾಗಿ ತಿಳಿದುಬಂದಿಲ್ಲ. ಸಿಕ್ಕಿರುವ ದಿನಾಂಕವನ್ನೇ ಪ್ರಮಾಣವೆಂದು ಎಲ್ಲೆಡೆಯೂ ಸ್ವೀಕರಿಸಲಾಗಿದೆ.

ಬಾಲಕ ಬಸಪ್ಪನ ಬಾಲ್ಯ ಕೊಂಡಜ್ಜಿಯಲ್ಲೇ ಕಳೆಯಿತು. ಪ್ರಾಥಮಿಕ ಶಿಕ್ಷಣವೂ ಅದೇ ಹಳ್ಳಿಯಲ್ಲಿ ಆಗಿ ಮುಗಿಯಿತು. ಪ್ರೌಢಶಾಲಾ ಶಿಕ್ಷಣಕ್ಕೆ ಅಲ್ಲಿ ವ್ಯವಸ್ಥೆ ಇರಲಿಲ್ಲ. ದಾವಣಗೆರೆಗೆ ಹೋಗಬೇಕಾಗಿತ್ತು. ಆದರೆ ಆರ್ಥಿಕ ತೊಂದರೆಯಿಂದಾಗಿ ಶಿಕ್ಷಣ ಮುಂದುವರಿಯುವ ಸಂಭವ ಇರಲಿಲ್ಲ. ದೈವ ಈಚಘಟ್ಟದ ಬಸಪ್ಪ ಮತ್ತು ಹನುಮನಹಳ್ಳಿಯ ಪಟೇಲ್ ಮಹಾದೇವಪ್ಪ ಇವರ ರೂಪದಲ್ಲಿ ಬಂದು ಸಹಾಯ ಮಾಡಿತು. ಬಾಲಕ ಬಸಪ್ಪ ದಾವಣಗೆರೆಯ ಸರ್ಕಾರಿ ಪ್ರೌಢಶಾಲೆಗೆ ಸೇರಿ, ಶಿಕ್ಷಣ ಮುಂದುವರಿಸಿದ. ೧೯೩೪ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆ ಪಾಸು ಮಾಡಿದ. ಮತ್ತೆ ಕಾಲೇಜು ಶಿಕ್ಷಣಕ್ಕೂ ಹಣದ ಅಭಾವ ಕಾಣಿಸಿಕೊಂಡು ಓದು ಮುಂದುವರಿಯದಾಯಿತು. ಯಾವುದಾದರೂ ಒಂದು ನೌಕರಿ ಹಿಡಿಯುವುದೆಂದು ಮನೆಯ ಕಡೆಯಿಂದ ಸೂಚನೆ ಬಂತು. ಆ ಸಂದರ್ಭದಲ್ಲೂ ಡಾಕ್ಟರ್ ಮಹಂತಯ್ಯ ಎಂಬುವರ ನೆರವು ದೊರೆಯಿತು. ಆ ಕಾಲದಲ್ಲಿ ಕಾಲೇಜು ಶಿಕ್ಷಣ ವ್ಯವಸ್ಥೆ ಇದ್ದುದು ಕೇವಲ ಬೆಂಗಳೂರು ಮತ್ತು ಮೈಸೂರು ಎರಡೇ ಕಡೆ. ಬಾಲಕ ಬಸಪ್ಪ ಬೆಂಗಳೂರು ಇಂಟರ್ ಮೀಡಿಯೇಟ್ ಕಾಲೇಜು ಸೇರಿದ. ದಾವಣಗೆರೆಯ ಡಿ.ಎಚ್. ಚಂದ್ರಶೇಖರಯ್ಯನವರು ವಿದ್ಯಾರ್ಥಿವೇತನ ಕೊಡಿಸಿ ಪ್ರೋತ್ಸಾಹಿಸಿದರು. ಬೆಂಗಳೂರಿನ ಜಯದೇವ ವಿದ್ಯಾರ್ಥಿ ನಿಲಯದಲ್ಲಿದ್ದ ವೀರಶೈವ ವಿದ್ಯಾವರ್ಧಕ ನಿಧಿ (ಈಗ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ ಎಂದಾಗಿದೆ) ಸಾಲದ ರೂಪದ ವೇತನ ಕೊಟ್ಟಿತು. ದಾವಣಗೆರೆಯ 'ವೀರಶೈವ ವಿದ್ಯಾವರ್ಧಕ ಸಂಘ' ಸಹಕಾರ ನೀಡಿತು. ಬಸಪ್ಪ ೧೯೩೬ರಲ್ಲಿ ಇಂಟರ್ ಮೀಡಿಯೇಟ್ ಕಾಲೇಜು ಪರೀಕ್ಷೆಯಲ್ಲಿ ತೇರ್ಗಡೆಯಾಗಿ, ಅದೇ ವರ್ಷ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮೊದಲನೆ ಬಿ.ಎಸ್‌ಸಿ. ಡಿಗ್ರಿ ತರಗತಿಗೆ ಸೇರಿದರು. ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರಗಳನ್ನು ತಮ್ಮ ಐಚ್ಛಿಕ ವಿಷಯಗಳನ್ನಾಗಿ ಆರಿಸಿಕೊಂಡು ತಮ್ಮ ಶಿಕ್ಷಣ ಮುಂದುವರಿಸಿದರು. ೧೯೩೮ರಲ್ಲಿ ಯಶಸ್ವಿಯಾಗಿ ಡಿಗ್ರಿ ಮುಗಿಸಿ, ಬಿ.ಎಸ್‌ಸಿ. ಪದವಿ ಪಡೆದರು. ಡಿಗ್ರಿ ಪಡೆದ ವರ್ಷವೇ ವಿವಾಹವೂ ಕೂಡಿಬಂತು. ಕಂದಗಲ್ ಗ್ರಾಮದ ಪಟೇಲ್ ಚನ್ನಬಸಪ್ಪನವರ ಸುಪುತ್ರಿ ಶ್ರೀಮತಿ ಸರ್ವಮಂಗಳಮ್ಮನವರೊಡನೆ ಕೊಂಡಜ್ಜಿ ಬಸಪ್ಪನವರ ವಿವಾಹ ನೆರವೇರಿತು. ಪದವೀಧರ ಬಸಪ್ಪನವರು ಕಾನೂನು ಶಿಕ್ಷಣ ಪಡೆಯಲು ಪೂನಾಕ್ಕೆ ಹೋಗಿ ೧೯೪೦ರಲ್ಲಿ ಎಲ್‌ಎಲ್.ಬಿ. ಪದವೀಧರರಾಗಿ ಕರ್ನಾಟಕಕ್ಕೆ ಹಿಂತಿರುಗಿದರು.

ಅವರ ಕಾನೂನು ಶಿಕ್ಷಣಕ್ಕೆ ಅವರ ಮಾವನವರು ನೆರವಾದದ್ದುಂಟು. ಒಟ್ಟಿನಲ್ಲಿ, ಕೊಂಡಜ್ಜಿ ಬಸಪ್ಪನವರು ಬಿ.ಎಸ್‌ಸಿ., ಎಲ್‌ಎಲ್.ಬಿ. ಪದವೀಧರರಾಗಿ ತಮ್ಮ ಶಿಕ್ಷಣ ಘಟ್ಟವನ್ನು ಮುಟ್ಟಿದರು.

**ವಕೀಲರಾಗಿದ್ದರು :**

ಕಾನೂನು ಶಿಕ್ಷಣ ಪೂರೈಸಿದ ಮೇಲೆ ಕೊಂಡಜ್ಜಿಯವರಿಗೆ ವಕೀಲರಾಗುವ ಮನಸ್ಸಾಯಿತು. ಶಿವಮೊಗ್ಗೆಯಲ್ಲಿ ಹೆಸರಾಂತ ವಕೀಲರಾಗಿದ್ದ ಶ್ರೀ ಬೆಳಗುತ್ತಿ ಎಚ್. ಲಿಂಗಪ್ಪನವರ ಬಳಿ ಒಂದು ವರ್ಷ ಕಾಲ ವಕೀಲಿ ತರಬೇತಿ ಪಡೆದು, ಜನವರಿ ೧೯೪೨ರಲ್ಲಿ ದಾವಣಗೆರೆಯಲ್ಲಿ ಸ್ವತಂತ್ರ ವಕೀಲ ವೃತ್ತಿಯನ್ನು ಆರಂಭಿಸಿದರು. ಆರಂಭದ ಸಂಪಾದನೆ ತೃಪ್ತಿಕರವಾಗಿರಲಿಲ್ಲ. ಆದರೆ ಕ್ರಮೇಣ ಚೆನ್ನಾಯಿತು. ನ್ಯಾಯಬದ್ಧವಾದ ಹಲವು ದೊಡ್ಡ ದೊಡ್ಡ ಮೊಕದ್ದಮೆಗಳಲ್ಲಿ ಕೊಂಡಜ್ಜಿಯವರು ಜಯಗಳಿಸಿ ಖ್ಯಾತರಾದರು. ವೃತ್ತಿ ತೃಪ್ತಿ ತಂದಿತು. ಆದರೆ ಶ್ರೀಯುತರು ತಾವು ಬೆಳೆಯುವ ಜೊತೆಯಲ್ಲಿ ಅರ್ಹತೆ ಇರುವ ಇತರರನ್ನೂ ಬೆಳೆಸಬೇಕೆಂಬ ಮನೋ ಧರ್ಮದವರಾದ್ದರಿಂದ ಅನೇಕ ಎಳೆಯ ವಕೀಲರುಗಳಿಗೆ ತಮ್ಮ ಕಚೇರಿಯಲ್ಲಿ ಆಶ್ರಯವಿತ್ತು ಪ್ರೋತ್ಸಾಹಿಸಿದರು. ಅವರ ಔದಾರ್ಯದ ಫಲ ಪಡೆದ ಹೆಸರಾಂತ ವಕೀಲರುಗಳನೇಕರು ಕೊಂಡಜ್ಜಿಯವರನ್ನು ಮುಕ್ತಕಂಠದಿಂದ ಹೊಗಳಿದ್ದುಂಟು. ಅಂತಹ ಜನಾನುರಾಗಿಯೂ ಉದಾರ ಮನಸ್ಕರೂ ಆದ ಕೊಂಡಜ್ಜಿಯವರು ಯುವ ಜನತೆಯನ್ನು ವಿಶೇಷವಾಗಿ ಪ್ರೋತ್ಸಾಹಿಸಿ, ಅವರಲ್ಲಿ ಆತ್ಮವಿಶ್ವಾಸ ಬೆಳೆಯುವಂತೆ ಮಾಡುತ್ತಿದ್ದರು. ತಮ್ಮನ್ನು ನಂಬಿದವರು ಬೆಳೆದರೆ ತಾವೇ ಬೆಳೆದಂತೆ ಎಂಬ ಸದ್ಭಾವನೆ ಅವರದಾಗಿತ್ತು.

ವರಮಾನ ಹೆಚ್ಚಿದಂತೆ ಕೊಂಡಜ್ಜಿಯವರ ಮನೆಯೂ ದೊಡ್ಡದಾಯಿತು. ಕುಟುಂಬವೂ ದೊಡ್ಡದಾಯಿತು. ಅವರದು ಹಡಗಿನಂತಹ ಸಂಸಾರ. ರಾಜಶೇಖರ, ಷಣ್ಮುಖಪ್ಪ, ಗುರುಮೂರ್ತಿ, ವಿಜಯಕುಮಾರ್, ಲಿಂಗರಾಜ್, ರವೀಂದ್ರನಾಥ್, ಮೋಹನಕುಮಾರ್ ಎಂಬ ಏಳು ಗಂಡುಮಕ್ಕಳು, ಕೆ. ಬಿ. ಮಂಜುಳಾ ಎಂಬ ಓರ್ವ ಮಗಳು. ಒಟ್ಟು ಎಂಟು ಮಕ್ಕಳಿಂದ ಕೂಡಿದ ತುಂಬು ಸಂಸಾರ. ಸಂಸಾರದ ಸಂಪೂರ್ಣ ನಿರ್ವಹಣೆಯು ಶ್ರೀಮತಿ ಸರ್ವಮಂಗಳಮ್ಮನವರದಾದ್ದರಿಂದ ಕೊಂಡಜ್ಜಿಯವರಿಗೆ ತಮ್ಮ ವೃತ್ತಿಯ ಕಡೆ ತಮ್ಮನ್ನು ತೊಡಗಿಸಿಕೊಳ್ಳಲು ಅನುಕೂಲವಾಯಿತು. ಅವರಿವರು ಅಭಿಮಾನಿಗಳ ಪ್ರೋತ್ಸಾಹದಿಂದ ರಾಜಕೀಯ ರಂಗವೂ ಶ್ರೀಯುತರನ್ನು ಆಕರ್ಷಿಸಿತು.

**ರಾಜಕೀಯಕ್ಕೆ ಪಾದಾರ್ಪಣೆ :**

ಅದು ಬ್ರಿಟಿಷರ ದಬ್ಬಾಳಿಕೆಯ ಕಾಲ. ಅವರು ಪೂರ್ಣಾಧಿಕಾರವನ್ನು ತಮ್ಮಲ್ಲಿಟ್ಟುಕೊಂಡು ಆಡಳಿತವನ್ನು ನಿಬಂಧನೆಯ ಮೇರೆಗೆ ಸ್ಥಳೀಯ ರಾಜರುಗಳಿಗೆ ವಹಿಸಿಕೊಟ್ಟಿದ್ದರು. ಅಂಥವುಗಳಲ್ಲಿ ಮೈಸೂರು ಸಂಸ್ಥಾನವೂ ಒಂದು. ಸ್ಥಳೀಯ ಸಂಸ್ಥೆಗಳ ರಚನೆ ೧೯೧೭ರಲ್ಲಾಯಿತು. ೧೮.೭.೧೯೧೮ರಲ್ಲಿ ಒಂದು ರಾಜಾಜ್ಞೆ ಹೊರಡಿಸಿ ರಾಜ್ಯಾಡಳಿತ ಮತ್ತು ಜನಹಿತ ಅಭಿವೃದ್ಧಿ ಕಾರ್ಯಗಳನ್ನು ಶಾಸಕಾಂಗದಿಂದ ಬೇರ್ಪಡಿಸಿ, ಸ್ಥಳೀಯ ಸಂಸ್ಥೆಗಳಿಗಿತ್ತರು. ಇದರಿಂದ 'ಪ್ರಜಾಪ್ರತಿನಿಧಿ ಸಭೆ'

ಕಾರ್ಯೋನ್ಮುಖವಾಯಿತು. ಸ್ಥಳೀಯ ಸಂಸ್ಥೆಗಳು ಜಾಗ್ರತವಾಗಿ ಜಿಲ್ಲಾ ಬೋರ್ಡ್ ಗಳಿಗೆ ರಸ್ತೆ ನಿರ್ಮಾಣ, ವೈದ್ಯಕೀಯ ವ್ಯವಸ್ಥೆ, ಶಿಕ್ಷಣ ಕಾರ್ಯ ಮೊದಲಾದ ಹೊಣೆಗಾರಿಕೆ ಹೊಂದಿದವು. ಅಂತಹ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ ಕೊಂಡಜ್ಜಿಯವರ ಮಾವಂದಿರಾದ ಕಂದಗಲ್ ಪಟೇಲ್ ಶ್ರೀ ಚನ್ನಬಸಪ್ಪನವರು ತಮ್ಮ ಅಳಿಯನನ್ನು ರಾಜಕೀಯ ರಂಗಕ್ಕೆ ಸೆಳೆದರು. ಪರಿಣಾಮವಾಗಿ ಕೊಂಡಜ್ಜಿಯವರು ರಾಜಕೀಯ ರಂಗವನ್ನು ಪ್ರವೇಶಿಸುವಂತಾಯಿತು.

ಮಾವನವರ ಒತ್ತಾಸೆಯಿಂದಾಗಿ ಕೊಂಡಜ್ಜಿಯವರು ೧೯೪೩ರಲ್ಲಿ ನಡೆದ ಚಿತ್ರದುರ್ಗ ಜಿಲ್ಲಾ ಬೋರ್ಡ್ ಚುನಾವಣೆಗೆ, ಹರಿಹರ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ನಿಂತರು. ಅವರ ಪ್ರತಿಸ್ಪರ್ಧಿ ಕುಂಬಳೂರು ಫಕೀರಪ್ಪನವರು. ಅಂದಿನ ಚುನಾವಣೆಯ ನಿಯಮಗಳು ಬಹಳ ವಿಚಿತ್ರವಾಗಿದ್ದವು. ಕನಿಷ್ಟ ಹದಿನೈದು ರೂಪಾಯಿ ಕಂದಾಯ ಕೊಡುವವರು ಮಾತ್ರ ಮತ ನೀಡುವ ಹಕ್ಕುಳ್ಳವರಾಗಿದ್ದರು. ಒಬ್ಬ ಮತದಾರ ಎರಡು ಮತಗಳನ್ನು ಚಲಾಯಿಸಬಹುದಾಗಿತ್ತು. ನಿಗದಿತ ದಿನ ಸರಿಯಾದ ವೇಳೆಗೆ ಚುನಾವಣೆ ನಡೆಯಿತು. ಮಾರನೆಯ ದಿನ ಎಣಿಕೆಯೂ ಆಯಿತು. ಫಲಿತಾಂಶ ಹೊರಬಿತ್ತು. ಫಕೀರಪ್ಪ ಗೆದ್ದರು, ಕೊಂಡಜ್ಜಿ ಸೋತರು! ಸೋತರೂ ಕೊಂಡಜ್ಜಿ ಯವರು ಹಸನ್ಮುಖಿಗಳಾಗಿಯೇ ಇದ್ದರು. ಆದರೆ ಕೆಲವೇ ದಿನಗಳಲ್ಲಿ ಗೆದ್ದೇಬಿಟ್ಟರು! ಅದು ಆದದ್ದು ಹೀಗೆ: ಅಂದಿನ ಸ್ಥಳೀಯ ಸಂಸ್ಥೆಗಳ ಕಾನೂನಿನ ಪ್ರಕಾರ ಗೆದ್ದ ಅಭ್ಯರ್ಥಿ ಕಾರಣಾಂತರದಿಂದ ತನ್ನ ಚುನಾಯಿತ ಸ್ಥಾನಕ್ಕೆ ರಾಜೀನಾಮೆ ಕೊಟ್ಟರೆ, ಮರುಚುನಾವಣೆ ಮಾಡುವ ಅವಶ್ಯಕತೆ ಇರಲಿಲ್ಲ. ನಡೆದ ಚುನಾವಣೆಯಲ್ಲಿ ಸೋತ ಅಭ್ಯರ್ಥಿಗಳಲ್ಲಿ ಯಾರು ಹೆಚ್ಚು ಮತ ಪಡೆದಿರುತ್ತಾರೊ, ಅವರು ತೆರವಾದ ಸ್ಥಾನವನ್ನು ತುಂಬಲು ಅರ್ಹರಾಗುತ್ತಿದ್ದರು. ಆ ಪುಣ್ಯಾವಕಾಶ ಶ್ರೀ ಕೊಂಡಜ್ಜಿ ಬಸಪ್ಪನವರಿಗೆ ಲಭಿಸಿತು. ಕುಂಬಳೂರಿನ ಫಕೀರಪ್ಪನವರ ರಾಜೀನಾಮೆಯಿಂದಾಗಿ, ಸೋತರವಲ್ಲಿ ಸ್ವತಂತ್ರ ಅಭ್ಯರ್ಥಿಯಾಗಿ ಹೆಚ್ಚು ಮತ ಗಳಿಸಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು ಚಿತ್ರದುರ್ಗ ಜಿಲ್ಲಾ ಬೋರ್ಡಿನ ಸದಸ್ಯರಾಗಿ ಆಯ್ಕೆಯಾಗಿರುವುದಾಗಿ ಘೋಷಿತರಾದರು.

ಸದಸ್ಯತ್ವ ದೊರಕಿದ ಮೇಲೆ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗುವ ಹಂಬಲ. ಕೊಂಡಜ್ಜಿ ಅದಕ್ಕೂ ಸ್ಪರ್ಧಿಸಿದರು. ಅವರ ವಿರುದ್ಧ ಬಿ. ದುರ್ಗದ ನ್ಯಾಯವಾದಿ ಶ್ರೀ ಜೆ. ಜಿ. ಬಸವಪ್ಪನವರು ನಿಂತರು. ಈ ಚುನಾವಣೆಯಲ್ಲಿ ಜಯಲಕ್ಷ್ಮಿ ಶ್ರೀ ಕೊಂಡಜ್ಜಿಯವರನ್ನು ಒಲಿದಳು. ಕೇವಲ ಇಪ್ಪತ್ತೆಂಟು ವರ್ಷ ವಯಸ್ಸಿನ ಕಿರಿಯ ವ್ಯಕ್ತಿ ಶ್ರೀ ಕೊಂಡಜ್ಜಿ ಬಸಪ್ಪನವರು ಚಿತ್ರದುರ್ಗ ಜಿಲ್ಲಾ ಬೋರ್ಡಿನಲ್ಲಿ ಹೊಸ ಇತಿಹಾಸ ರಚಿಸಿದರು. ಯಾವುದೇ ಸ್ಥಾನಮಾನ ಸೇವೆಗಾಗಿ ದೊರೆತ ಅವಕಾಶವೆಂದು ಭಾವಿಸಿದ್ದ ಕೊಂಡಜ್ಜಿಯವರು ತಮ್ಮ ಅಧಿಕಾರಾವಧಿಯಲ್ಲಿ ಅನೇಕ ರೀತಿಯ ಪ್ರಜಾಹಿತ ಕಾರ್ಯವೆಸಗಿ ತುಂಬು ಜನಾನುರಾಗಿಗಳಾದರು.

ಶ್ರೀಯುತರ ಮೊದಲ ಯೋಜನೆ ಶಿಕ್ಷಣಕ್ಕೆ ಸಂಬಂಧಿಸಿತ್ತು. ಜಿಲ್ಲೆಯ ಪ್ರತಿ ತಾಲೂಕಿನಲ್ಲೂ ಕನಿಷ್ಠ ಪಕ್ಷ ಒಂದೊಂದು ಪ್ರೌಢಶಾಲೆ ತೆರೆಯುವ, ದಾವಣಗೆರೆ ನಗರದಲ್ಲಿ ಒಂದು ಕಾಲೇಜು ಆರಂಭಿಸುವ ಯೋಜನೆ ಹಾಕಿಕೊಂಡು ಯಶಸ್ವಿಯಾದರು. ಆರೋಗ್ಯದ ಕಡೆ ಗಮನ ಹರಿಸಿ,

ಚಿತ್ರದುರ್ಗಕ್ಕೆ ಒಂದು ದೊಡ್ಡ ಸಾರ್ವಜನಿಕ ಆಸ್ಪತ್ರೆ ತರಿಸಿದರು. ಪ್ರತಿಯೊಂದು ತಾಲೂಕಿಗೂ ರಸ್ತೆ, ನೀರು, ಬೆಳಕು, ಆಸ್ಪತ್ರೆ, ಸಂಪರ್ಕ, ಸವಲತ್ತುಗಳನ್ನು ಕಡ್ಡಾಯವಾಗಿ ಒದಗಿಸಲು ಯತ್ನಿಸಿದರು. ಅವರು ಕೈಕೊಂಡ ಮತ್ತೊಂದು ಮಹತ್ವದ ಕಾರ್ಯವೆಂದರೆ ಗ್ರಾಮೀಣ ಪ್ರದೇಶದ ಹಳೆಯ ಕೆರೆ, ಕಟ್ಟೆ, ಕಾಲುವೆಗಳನ್ನು ದುರಸ್ತಿಗೊಳಿಸಿ ನೀರಾವರಿಗೆ ನೆರವಾದದ್ದು.

ಮನುಷ್ಯನಿಗೆ ಅಧಿಕಾರ ಬರುತ್ತದೆ ಹೋಗುತ್ತದೆ. ಆದರೆ ಮಾನವೀಯತೆ ಎಂಬ ಜೀವನಮೌಲ್ಯ ಹಾಗೆ ಬಂದುಹೋಗುವಂಥದಲ್ಲ. ತಮ್ಮ ಎಳಮೆಯಿಂದಲೂ ಆ ಮೌಲಿಕ ವಸ್ತುವನ್ನು ಪ್ರದರ್ಶಿಸುವ ಒಂದು ಸಂದರ್ಭ ಅವರ ಅಧ್ಯಕ್ಷಾವಧಿಯಲ್ಲಿ ಲಭಿಸಿತು.

ಒಮ್ಮೆ ಶ್ರೀಯುತರು ಜಿಲ್ಲಾ ಪ್ರವಾಸ ಕೈಕೊಂಡಿದ್ದರು. ದಾರಿಯಲ್ಲಿ ಒಂದು ಪುಟ್ಟ ಹಟ್ಟಿ ಅಥವಾ ಹಳ್ಳಿ. ಅದರಾಚೆ ಒಂದು ಹೊಲಮಾಳದಲ್ಲಿ ಒಂದು ಸಣ್ಣ ಗುಡಿಸಲು, ತಡಿಕೆ ಮುಚ್ಚಿತ್ತು. ಆದರೆ ಅದರ ಮುಂದೊಂದು ಮಣ್ಣಿನ ಮುಚ್ಚಳ ಮುಚ್ಚಿದ್ದ ಮಡಕೆ, ಅದರ ಪಕ್ಕದಲ್ಲಿ ಒಂದು ಉದ್ದವಾದ ಕೋಲು. ಗುಡಿಸಲಿನ ಒಳಗಡೆ ಎಳೆಯ ಮಗುವೊಂದು ತುಂಬಾ ಅಳುತ್ತಿದ್ದುದು ಕೇಳಿ ಬಂತು. ನೋಡೋಣವೆಂದು ಕೊಂಡಜ್ಜಿಯವರು ತಮ್ಮ ಕಾರು ನಿಲ್ಲಿಸ ಹೇಳಿ, ಗುಡಿಸಲನ್ನು ಸಮೀಪಿಸಿ ಊರಿನ ಪಟೇಲರು ಮತ್ತು ಕೆಲವರು ಗ್ರಾಮಸ್ಥರನ್ನು ಕರೆದು ಏಕೆ ಹೀಗೆ ಊರ ಹೊರಗೆ ಒಂಟಿ ಗುಡಿಸಲಿರಲು ಕಾರಣ ಕೇಳಿದರು. ಉತ್ತರ ಸಿಕ್ಕಿತು ಅದು ಗೊಲ್ಲರ ಹಟ್ಟಿ. ಅವರ ಸಮಾಜದಲ್ಲಿ ಯಾರಿಗಾದರೂ ಹೆರಿಗೆಯಾದರೆ, ಹೆತ್ತವಳನ್ನು ಊರ ಹೊರಗೆ ದೂರದಲ್ಲಿ ಒಂದು ಜೋಪಡಿ ಕಟ್ಟಿ, ಅಲ್ಲಿ ಅವಳನ್ನು ಹಾಕ್ತಾರೆ. ಹೆರಿಗೆ ಆದಮೇಲೆ ಸೂತಕ ತೆಗೆದುಕೊಳ್ಳುವವರೆಗೂ ಅವಳು ಅಲ್ಲಿಯೇ ಎಳೆ ಹಸುಳೆಯ ಜೊತೆ ಬಿದ್ದಿರಬೇಕು. ಅವಳ ಬಳಿ ಯಾರೂ ಸುಳಿಯುವಂತಿಲ್ಲ, ಮುಟ್ಟುವಂತಿಲ್ಲ. ಅವಳಿಗೆ ಎರಡು ಹೊತ್ತು ಊಟವನ್ನು ಒಂದು ಮಡಕೆಯಲ್ಲಿ ತುಂಬಿ ಮಣ್ಣಿನ ಮುಚ್ಚಳ ಮುಚ್ಚಿ, ಒಂದು ಮೊಗೆ ಬಿಸಿ ನೀರಿಟ್ಟು ಅವುಗಳನ್ನು ನಿಧಾನವಾಗಿ ಕೋಲಿನಲ್ಲಿ ಗುಡಿಸಲು ಬಾಗಿಲಿಗೆ ತಳ್ಳುತ್ತಾರೆ!

ಈ ವ್ಯಥೆಯ ಕಥೆ ಕೇಳಿದ ಕೊಂಡಜ್ಜಿಯವರಿಗೆ ಕರುಳು ಕಿವುಚಿದಂತಾಯಿತು. ಅದೇ ಹಟ್ಟಿಯ ಎಲ್ಲ ಹಿರಿಯರನ್ನೂ ಸೇರಿಸಿ, ಹೆಣ್ಣು ಮಗಳ ಬಗೆಗೆ ಕನಿಕರ ತೋರುವಂತೆ ಹೇಳಿ, ಒಪ್ಪಿಸಿ, ಅವಳ ಶುಶ್ರೂಷೆಗೆ ಯಾರಾದರೂ ಒಬ್ಬ ಹೆಂಗಸು ಜೊತೆಗಿರುವಂತೆ ವ್ಯವಸ್ಥೆ ಮಾಡಿ, ಕೆಲವೇ ದಿನಗಳಲ್ಲಿ ಅದೇ ಊರಾಚೆ ಒಂದು ಚಿಕ್ಕ ಹೆರಿಗೆಮನೆಯನ್ನು ಜಿಲ್ಲಾ ಬೋರ್ಡ್ ಪರವಾಗಿ ಕಟ್ಟಿಸಿಕೊಟ್ಟರು. ಮುಂದೆ ಯಾರೂ ಊರಾಚೆ ಬಾಣಂತಿಯನ್ನು ಒಂಟಿಯಾಗಿ ಬಿಟ್ಟಿರಕೂಡದು ಎಂದು ತಿಳಿಯ ಹೇಳಿ, ಕಂದಾಚಾರಕ್ಕೆ ತೆರೆ ಎಳೆದರು.

ಈ ರೀತಿ ಮಾನವೀಯತೆಯನ್ನು ಮೈಗೂಡಿಸಿಕೊಂಡಿದ್ದ ಕೊಂಡಜ್ಜಿಯವರನ್ನು ಜನತೆ ಮರೆಯಲಿಲ್ಲ. ೧೯೪೭ರಲ್ಲಿ ದಾವಣಗೆರೆ ತಾಲೂಕಿನಿಂದ ಅದೇ ಚಿತ್ರದುರ್ಗ ಜಿಲ್ಲಾ ಬೋರ್ಡ್ ಚುನಾವಣೆಗೆ ನಿಂತರು. ಅವಿರೋಧವಾಗಿ ಸದಸ್ಯರಾಗಿ ಆಯ್ಕೆಯಾದರು. ಆದರೆ ಅಧ್ಯಕ್ಷ ಪದವಿಗೆ ಸ್ಪರ್ಧಿಸಿ ಸೋತರು. ಸ್ಪರ್ಧೆಯಲ್ಲಿ ಸೋಲು ಗೆಲವುಗಳು ಸಹಜ. ಹಗಲು ಇರುಳುಗಳಂತೆ ಸುತ್ತುತ್ತವೆ

ಎಂಬ ಸತ್ಯವನ್ನರಿತಿದ್ದ ಕೊಂಡಜ್ಜಿಯವರು ಸೋಲನ್ನೂ ಗೆಲವಿನಷ್ಟೇ ಸಂತೋಷದಿಂದ ಸ್ವಾಗತಿಸಿದರು. ಅಂತಹವರ ಸಮಚಿತ್ತ ಸಾಮಾನ್ಯರಲ್ಲಿ ಅಸಂಭವ!

ಭಾರತ ಕೃಷಿ ಪ್ರಧಾನ ದೇಶ. ರೈತ ಅದರ ಬೆನ್ನೆಲುಬು. ಆದರೆ ಆ ಅನ್ನದಾತನಷ್ಟು ತಿರಸ್ಕಾರಕ್ಕೆ, ಶೋಷಣೆಗೆ ಒಳಗಾದ ವ್ಯಕ್ತಿ ಬೇರೊಬ್ಬನಿಲ್ಲ. ಹಳ್ಳಿಯ ರೈತನು ಮಳೆ ಬಿಸಿಲುಗಳಲ್ಲಿ ನೆನೆದು, ಬೆಂದು, ಧೂಳು ಕುಡಿದು, ಕಷ್ಟಪಟ್ಟು ಬೆಳೆದ ಕಾಳನ್ನು ಪೇಟೆಯ ಮಾರುಕಟ್ಟೆಗೆ ಮಾರಾಟ ಮಾಡಲು ತಂದಾಗ ದಳ್ಳಾಳಿ ವ್ಯಾಪಾರಿಗಳು ಅವನನ್ನು ಸುಲಿದು ಬಿಡುತ್ತಿದ್ದರು. ಅವನು ಬೆಳೆದ ಬೆಳೆಗೆ ಯೋಗ್ಯ ಬೆಲೆ ಸಿಗುತ್ತಿರಲಿಲ್ಲ. ರೈತನೇನಾದರೂ ವರ್ತಕನಲ್ಲಿ ಮುಂಗಡ ಸಾಲ ತೆಗೆದುಕೊಂಡಿದ್ದರೆ ಅದಕ್ಕೆ ಬಡ್ಡಿ, ಚಕ್ರಬಡ್ಡಿ ಬೆಳೆಯುತ್ತಿತ್ತು. ಒಂದು ವೇಳೆ ರೈತನೇನಾದರೂ ವರ್ತಕನಲ್ಲೇ ಹಣ ಬಿಟ್ಟಿದ್ದರೆ ಅದಕ್ಕೆ ಬಡ್ಡಿ ಇಲ್ಲ, ಯಾವುದೂ ಇಲ್ಲ. ಅಷ್ಟೇ ಅಲ್ಲದೆ ಅಳತೆಯಲ್ಲಿ ಮೋಸ, ಲೆಕ್ಕದಲ್ಲಿ ವಂಚನೆ. ಒಟ್ಟಿನಲ್ಲಿ ಬಡರೈತ ತಲೆ ಎತ್ತದಂತಾಗುತ್ತಿದ್ದ. ಇಂತಹ ಬಂಡವಾಳದಾರರ ಲಾಭಕೋರತನವನ್ನು ಸದೆಬಡಿಯಲು ಆಲೋಚಿಸಿದ ಕೊಂಡಜ್ಜಿಯವರು ೧ ಆಗಸ್ಟ್ ೧೯೫೦ರಲ್ಲಿ ದಾವಣಗೆರೆಯಲ್ಲಿ ಒಂದು ನೋಂದಾಯಿತ ವ್ಯವಸಾಯಗಾರರ ಪರಿವರ್ತನ ಕೈಗಾರಿಕಾ ಮತ್ತು ವ್ಯಾಪಾರೋದ್ಯಮ ಸಹಕಾರ ಸಂಘವನ್ನು ಸ್ಥಾಪಿಸಿ, ನ್ಯಾಯಬದ್ಧ ವ್ಯವಹರಣೆಗೆ ನಾಂದಿ ಹಾಡಿದರು. ಕದ್ದು ಮೇಯುತ್ತಿದ್ದ ದಳ್ಳಾಳಿ ದನಗಳ ಬಾಯಿಗೆ ಕುಕ್ಕೆ ಇಟ್ಟರು. ದಾವಣಗೆರೆ, ಹರಿಹರ, ಜಗಳೂರು, ಚಿತ್ರದುರ್ಗ, ಹೊಳಲ್ಕೆರೆ, ಹೊನ್ನಾಳಿ, ಹೊಸದುರ್ಗ, ಚನ್ನಗಿರಿ ಮೊದಲಾದ ಜಿಲ್ಲೆಗೆ ಸೇರಿದ ಎಲ್ಲ ತಾಲೂಕುಗಳೂ ಈ ಸಂಘದ ವ್ಯಾಪ್ತಿಗೆ ಒಳಪಡುವಂತೆ ಮಾಡಿದರು. ತನ್ಮೂಲಕ ಬೇರೆ ಜಿಲ್ಲೆಯವರೂ ಇವರ ಆದರ್ಶವನ್ನು ಅನುಷ್ಠಾನಕ್ಕೆ ತರಲು ಪ್ರೇರಣೆ ಕೊಟ್ಟರು. ಈ ಸಂಘವು ೧೫ ಆಗಸ್ಟ್ ೧೯೫೦ರಿಂದಲೇ ಭಾರತ ಸ್ವಾತಂತ್ರ್ಯದ ಶುಭದಿನದಿಂದಲೇ ತನ್ನ ಕಾರ್ಯಚಟುವಟಿಕೆಗಳನ್ನು ಆರಂಭಿಸಿತು. ಅದರ ಧ್ಯೇಯೋದ್ದೇಶಗಳು ಹೀಗಿದ್ದವು:

೧. ಸಹಕಾರ ತತ್ವಾಧಾರದ ಮೇರೆಗೆ ವ್ಯವಸಾಯೋತ್ಪನ್ನಗಳಿಗೆ ಯೋಗ್ಯ ಬೆಲೆ ದೊರೆಯುವಂತೆ ಮಾಡಿ, ರೈತರ ಆರ್ಥಿಕ ಸುಧಾರಣೆ ಮಾಡುವುದು.

೨. ವ್ಯವಸಾಯಗಾರನ ಹುಟ್ಟುವಳಿಗಳನ್ನು ಪರಿವರ್ತನಗೊಳಿಸಲು ನೆರವು ನೀಡಿ ಯೋಗ್ಯ ಬೆಲೆ ದೊರೆಯುವಂತೆ ಮಾಡುವುದು.

೩. ಪೂರಕ ಉದ್ದಿಮೆಗಳ ಸ್ಥಾಪನೆ.

೪. ಸುಲಭ ಬೆಲೆಯಲ್ಲಿ ರಾಸಾಯನಿಕ ಗೊಬ್ಬರ, ಸುಧಾರಿತ ಬೀಜ, ಕ್ರಿಮಿ ಮತ್ತು ಕಳೆ ನಾಶಕಗಳನ್ನು ಸಕಾಲಕ್ಕೆ ಸರಿಯಾಗಿ ಸರಬರಾಜು ಮಾಡುವುದು.

೫. ರಾಗಿ, ಜೋಳ, ಭತ್ತಗಳ ಲೆವಿ ವಸೂಲು ಮಾಡುವುದು.

೬. ನ್ಯಾಯ ಬೆಲೆಯ ಅಂಗಡಿಗಳನ್ನು ನಗರದ ಓಣಿ ಓಣಿಗಳಲ್ಲಿ ತೆರೆಯುವುದು.

೭. ಆಹಾರ ಧಾನ್ಯಗಳನ್ನು ಸರ್ಕಾರದ ಪರವಾಗಿ ವಸೂಲೀ ರೂಪದಲ್ಲಿ ಖರೀದಿಸುವುದು.

೮. ಅಗತ್ಯವಿದ್ದೆಡೆಗಳಲ್ಲಿ ಅಕ್ಕಿ ಗಿರಣಿಗಳನ್ನು ಸ್ಥಾಪಿಸುವುದು.

ಈ ಧ್ಯೇಯೋದ್ದೇಶಗಳನ್ನು ಅಕ್ಷರಶಃ ಅನುಷ್ಠಾನಕ್ಕೆ ತಂದ ಸಂಘದ ಸಂಸ್ಥಾಪಕ ಅಧ್ಯಕ್ಷ ಕೊಂಡಜ್ಜಿಯವರು ೧೮ ಸೆಪ್ಟೆಂಬರ್ ೧೯೬೨ರ ವರೆಗೆ ಪ್ರಾಮಾಣಿಕವಾಗಿ ದುಡಿದು, ಮುಂದಿನವರಿಗೆ ಮಾರ್ಗದರ್ಶಕರಾದರು.

ದಲಿತರ ಮತ್ತು ದುರ್ಬಲ ವರ್ಗದವರ ಬಗೆಗೆ ವಿಶೇಷ ಕಾಳಜಿ ಇಟ್ಟು ಕೊಂಡಿದ್ದ ಕೊಂಡಜ್ಜಿಯವರು ಪ್ರಜಾಹಿತ ಕಾರ್ಯವನ್ನು ಹಲವು ವಿಧಗಳಲ್ಲಿ ನೆರವೇರಿಸಿದರು. ಅಧಿಕಾರ ಸ್ವೇಚ್ಛಾಚಾರದ ವೇದಿಕೆಯಲ್ಲ, ಸೇವೆಯ ಕರ್ಮಭೂಮಿ ಎಂಬುದನ್ನು ಮನಗಂಡಿದ್ದ ಶ್ರೀಯುತರು ಚಿತ್ರದುರ್ಗದ ಲಂಬಾಣಿ ಹಾಸ್ಟಲ್, ದಾವಣಗೆರೆಯ ಚಲವಾದಿ ಹಾಸ್ಟೆಲ್, ದಾವಣಗೆರೆಯ ಪರಿಶಿಷ್ಟ ವರ್ಗದ ಹಾಸ್ಟಲ್‌ಗಳ ಸಂಸ್ಥಾಪಕ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದರು. ಅದೇ ರೀತಿ ಚಿತ್ರದುರ್ಗ ಜಿಲ್ಲಾ ಭೂ ಅಭಿವೃದ್ಧಿ ಬ್ಯಾಂಕ್ ಸದಸ್ಯರಾಗಿ, ಭಾರತ ಸೇವಕ ಸಮಾಜದ ಕಾರ್ಯಾಧ್ಯಕ್ಷರಾಗಿ, ಹತ್ತು ವರ್ಷಗಳ ಕಾಲ ಚಿತ್ರದುರ್ಗ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳಾಗಿ, ೧೯೫೧ರಿಂದ ೧೯೬೦ರವರೆಗಿನ ಎರಡು ಅವಧಿಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿ, ಸಿರಿಗೆರೆಯ ತರಳಬಾಳು ಬೃಹನ್ಮಠದ ತರಳಬಾಳು ನಿಧಿ ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರಾಗಿ, ೧೯೫೦ರಿಂದ ಆರು ವರ್ಷಗಳ ಕಾಲ ರಾಜ್ಯದ ಸೆಕೆಂಡರಿ ಶಿಕ್ಷಣ ಬೋರ್ಡಿನ ಸದಸ್ಯರಾಗಿ, ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳ ಪ್ರವೇಶ ಸಮಿತಿಗಳ ಸದಸ್ಯರಾಗಿ ಸಕ್ರಿಯವಾಗಿ ದುಡಿದಿದ್ದಾರೆ.

**ಮಂತ್ರಿಮಂಡಲದಲ್ಲಿ ಉಪಸಚಿವರಾಗಿದ್ದರು :**

೧೯೬೨ರ ಸಾರ್ವತ್ರಿಕ ಚುನಾವಣೆಯಲ್ಲಿ ಕರ್ನಾಟಕ ವಿಧಾನಸಭೆಯ ಶಾಸಕ ಸ್ಥಾನಕ್ಕೆ ದಾವಣಗೆರೆ ಕ್ಷೇತ್ರದಿಂದ ಸ್ಪರ್ಧಿಸಿ ಜಯಗಳಿಸಿದರು. ಶ್ರೀ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಐದು ವರ್ಷಗಳ ಕಾಲ ಉಪಸಚಿವರಾಗಿ ಸಹಕಾರ, ಸಮಾಚಾರ ಮತ್ತು ಅಬ್ಕಾರಿ ಖಾತೆಗಳನ್ನು ವಹಿಸಿಕೊಂಡು ನಿಷ್ಠೆಯಿಂದ ಕಾರ್ಯ ನಿರ್ವಹಿಸಿದರು. ಅದೇ ಅವಧಿಯಲ್ಲಿ ಕೈಮಗ್ಗ ಸಲಹಾ ಸಮಿತಿ, ಉಣ್ಣೆ ಮತ್ತು ಕುರಿ ಅಭಿವೃದ್ಧಿ ಸಮಿತಿ ಹಾಗೂ ರಾಜ್ಯದ ದಾಸ್ತಾನು ಕಾರ್ಪೊರೇಷನ್ ಇವುಗಳ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದರು. ಪಂಚಾಯತ್ ರಾಜ್ಯ ಸಮಿತಿಯ ಅಧ್ಯಕ್ಷರೂ ಆಗಿದ್ದರು.

ಕೊಂಡಜ್ಜಿಯವರು ೧೯೬೭ರ ಸಾರ್ವತ್ರಿಕ ಚುನಾವಣೆಯಲ್ಲಿ ಮತ್ತೆ ವಿಧಾನಸಭೆಗೆ ಸದಸ್ಯರಾಗಿ ಚುನಾಯಿತರಾದರು. ವಿಧಾನಸೌಧ ಪ್ರವೇಶಿಸಿದರು. ಆದರೆ ಸಚಿವಸ್ಥಾನ ಪಡೆಯಲಾಗಲಿಲ್ಲ. ೧೯೭೧ರಲ್ಲಿ ವಿಧಾನಸಭಾ ಶಾಸಕ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಲೋಕಸಭೆಗೆ ಚಿತ್ರದುರ್ಗದಿಂದ ಸ್ಪರ್ಧಿಸಿ ಜಯಭೇರಿ ಬಾರಿಸಿದರು. ೧೯೭೩ರಲ್ಲಿ ಕೇಂದ್ರ ಸರ್ಕಾರದ ಉಪಸಚಿವರಾಗಿ ನೇಮಕಗೊಂಡು ೧೯೭೪ ಅಕ್ಟೋಬರ್‌ವರೆಗೆ ಆರೋಗ್ಯ ಮತ್ತು ಕುಟುಂಬ ಯೋಜನೆಯ ಉಪಸಚಿವರಾಗಿ ಕಾರ್ಯ ನಿರ್ವಹಿಸಿದರು. ಕಾರಣಾಂತರಗಳಿಂದ ಸಚಿವಸ್ಥಾನಕ್ಕೆ ರಾಜೀನಾಮೆ ಇತ್ತು, ಕೇವಲ ಸಂಸತ್ ಸದಸ್ಯರಾಗಿ ಉಳಿದರು.

ಸಾಮಾನ್ಯವಾಗಿ ರಾಜಕಾರಣ ಒಂದು ಕೆಸರಿನಲ್ಲಿ ನಿಂತ ಕಂಬ. ಯಾವ ಘಳಿಗೆಯಲ್ಲಿ ಯಾವ ಕಡೆ ಬೀಳುತ್ತದೊ ಹೇಳಬರುವುದಿಲ್ಲ. ಭಾರತದ ರಾಜಕಾರಣ ಇದಕ್ಕೆ ಹೊರತಲ್ಲ. ಕಾಂಗ್ರೆಸ್ ಪಕ್ಷ ನಿಜಲಿಂಗಪ್ಪನವರ ಕಾಲದಲ್ಲಿ ಒಮ್ಮೆ, ದೇವರಾಜ ಅರಸ್ ಕಾಲದಲ್ಲಿ ಮತ್ತೊಮ್ಮೆ ಒಡೆಯಿತು. ೧೯೭೭ರ ಚುನಾವಣೆಯಿಂದ ರೂಪುಗೊಂಡ ಲೋಕಸಭೆ ವಿಸರ್ಜನೆಗೊಂಡು ೧೯೮೦ರಲ್ಲಿ ಮರುಚುನಾವಣೆಗೆ ಸಿದ್ಧವಾಯಿತು. ಕೊಂಡಜ್ಜಿಯವರು ಹಲವು ಹಿರಿಯರ ಒತ್ತಾಸೆಯ ಮೇರೆಗೆ ಜನತಾ ಪಕ್ಷದ ಅಭ್ಯರ್ಥಿಯಾಗಿ, ತಮ್ಮ ದಾವಣಗೆರೆ ಕ್ಷೇತ್ರದಿಂದ ಸ್ಪರ್ಧಿಸಿ ಸೋತರು ಸೋತು ತುಂಬಾ ನೆಲ ಕಚ್ಚಿದರು. ಹಣ, ಅಧಿಕಾರ ಇದ್ದರೆ ಜನ ನೊಣ ಮುತ್ತಿದ ಹಾಗೆ ಮುತ್ತುತ್ತಾರೆ ಎಂಬ ನಾಣ್ಣುಡಿ ಕೊಂಡಜ್ಜಿಯವರ ಬಾಳ ಘಟನೆಯಲ್ಲಿ ಸತ್ಯವಾಯಿತು. ಪರಿಣಾಮವಾಗಿ ಕೊಂಡಜ್ಜಿಯವರು ರಾಜಕೀಯ ರಂಗಕ್ಕೆ ವಿದಾಯ ಹೇಳಿ, ತಮ್ಮ ಒಲವಿನ ಸ್ಕೌಟ್ ಸಂಸ್ಥೆಯನ್ನು ಒಲಿದರು.

ಕೊಂಡಜ್ಜಿಯವರಿಗೆ ರಾಜಕೀಯ ಒಂದು ಹವ್ಯಾಸವಾಗಿದ್ದಿತೇ ಹೊರತು ಅನಿವಾರ್ಯವೆನಿಸಿರಲಿಲ್ಲ. ಸೇವೆಗೆ ರಾಜಕೀಯವೊಂದೇ ರಂಗವಲ್ಲ ಎಂಬುದನ್ನು ಚೆನ್ನಾಗಿ ಅರಿತಿದ್ದರು. ಆ ವೇಳೆಗೆ ಪ್ರಪಂಚದ ಅನೇಕ ಭಾಗಗಳಲ್ಲಿ ಪ್ರಚಾರದಲ್ಲಿದ್ದ ವಿಶ್ವ ಸ್ಕೌಟ್ಸ್ ಮತ್ತು ಗೈಡ್ಸ್ ಸೇವಾ ಸಂಸ್ಥೆ ಅವರನ್ನು ಕೈ ಬೀಸಿ ಕರೆಯಿತು. ದಾವಣಗೆರೆಯಲ್ಲಿ ವಕೀಲರಾಗಿದ್ದಾಗಲೇ ಅದರ ಬಗೆಗೆ ತಮ್ಮ ಒಲವು ವ್ಯಕ್ತ ಪಡಿಸಿದ್ದರು. ರಾಜಕೀಯ ರಂಗದಿಂದ ದೂರ ಸರಿದ ಮೇಲೆ ಯುವಜನತೆಗೆ ಉತ್ತಮ ಮಾರ್ಗದರ್ಶನ ನೀಡುವ, ಅವರನ್ನು ಸತ್ಪ್ರಜೆಗಳನ್ನಾಗಿ, ಉತ್ತಮ ನಾಗರಿಕರನ್ನಾಗಿ ರೂಪಿಸುವ ಹೊಣೆ ಹೊತ್ತ ಸ್ಕೌಟ್ ಸಂಸ್ಥೆಗೆ ತಮ್ಮನ್ನು ಅರ್ಪಿಸಿಕೊಂಡರು. ಅದರ ಪುರೋಭಿವೃದ್ಧಿಗಾಗಿ ಆಜೀವಪರ್ಯಂತ ದುಡಿದರು. ದುಡಿಯುತ್ತಲೇ ೧೪ ನವೆಂಬರ್ ೧೯೮೧ರಂದು ಮಡಿದರು. ಹೃದಯದ ತೊಂದರೆಯಿಂದ ಅವರು ಬಹಳ ನರಳಿದ್ದರು. ಅದರ ಜೊತೆಗೆ ನರಗಳ ದೌರ್ಬಲ್ಯವೂ ಸೇರಿತ್ತು. ಹೀಗಾಗಿ ಅವರು ಬಳಲಿದ್ದರು. ದಾವಣಗೆರೆ ಆಸ್ಪತ್ರೆಯಲ್ಲಿ ಗುಣವಾಗದ ಕಾರಣ, ಬೆಂಗಳೂರು ಜಯದೇವ ಹೃದ್ರೋಗ ಆಸ್ಪತ್ರೆಗೆ ಸೇರಿಸಲಾಯಿತು. ವೈದ್ಯ ಪ್ರಯತ್ನಗಳು ಎಷ್ಟೇ ಮಟ್ಟದಲ್ಲಿ ನಡೆದರೂ ಕೊಂಡಜ್ಜಿಯವರನ್ನು ಉಳಿಸಿಕೊಳ್ಳಲಾಗಲಿಲ್ಲ—ಅಂದೇ ಅವರ ಪಾರ್ಥಿವ ಶರೀರವನ್ನು ಅವರ ಬಾಳ ಉಸಿರಾಗಿದ್ದ ಕೊಂಡಜ್ಜಿ ತರಬೇತಿ ಶಿಬಿರದಲ್ಲಿಯೇ ಸಮಾಧಿ ಮಾಡಲಾಯಿತು. ಮತ್ತು ಆ ಶಿಬಿರಕ್ಕೆ **'ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಶಿಬಿರ'** ಎಂದು ನಾಮಕರಣ ಮಾಡಲಾಯಿತು. ಕೇಂದ್ರ ಇಂದಿಗೂ ಸಕ್ರಿಯವಾಗಿದೆ, ಸರ್ವರ ಪ್ರಶಂಸೆಗೆ ಪಾತ್ರವಾಗಿದೆ.

# ಹೀಗೊಬ್ಬ ಅಪರೂಪದ ರಾಜಕಾರಣಿ

ವ್ಯಕ್ತಿಗೆ ಒಂದು ಮುಖ, ಆದರೆ ವ್ಯಕ್ತಿತ್ವಕ್ಕೆ ನಾನಾ ಮುಖಗಳು; ಹರಿಯುವ ನೀರಿನಂತೆ, ಉರಿಯುವ ಜ್ಯೋತಿಯಂತೆ, ಬೀಸುವ ಗಾಳಿಯಂತೆ, ಸೂಸುವ ಮಳೆಯಂತೆ! ಈ ನಿಸರ್ಗ ಶಕ್ತಿಗಳು ನಾವು ಯಾವ ಕಡೆಯಿಂದ ನೋಡಿದರೂ ಅಥವಾ ಅನುಭವಿಸಿದರೂ ಒಂದೇ ರೀತಿಯ ಅನುಭವ ಕೊಡುತ್ತವೆ. ಹರಿಯುವ ನೀರು ತಾನು ಹರಿದೆಡೆಯನ್ನೆಲ್ಲಾ ಅಚ್ಚ ಹಸುರಾಗಿಸುತ್ತದೆ, ಹೊಚ್ಚ ಹೊಸದಾಗಿಸುತ್ತದೆ. ಉರಿಯುವ ಜ್ಯೋತಿ ತಾನು ಉರಿದುರಿದು ಕತ್ತಲನ್ನು ನೀಗುತ್ತದೆ, ತನ್ನ ಪರಿಸರವನ್ನು ಬೆಳಗುತ್ತದೆ. ಬೀಸುವ ಗಾಳಿ ಸದಾ ಚಲನಶೀಲವುಳ್ಳದ್ದರಿಂದ ಸಮಸ್ತ ಜೀವಕೋಟಿಗೂ ಬಾಳಿನ ಉಸಿರಾಗಿ ಜೀವದಾನ ಮಾಡುತ್ತದೆ. ಮೋಡದಿಂದ ಹನಿ ಹನಿಯಾಗಿ ಸೂಸುವ ಮಳೆ ನೆಲದಲ್ಲಿ ತನ್ನ ಕಾಲೂರಿ, ಇಳೆಯ ಬೆಳೆಯ ಕತ್ತೆತ್ತಿಸಿ, ಜೀವಕೋಟಿಗಳ ಬದುಕಿನ ಜೀವರಸವಾಗುತ್ತದೆ. ಇವೆಲ್ಲವುಗಳಿಂದಲೂ ಮನುಷ್ಯ ಪಾಠ ಕಲಿಯಬೇಕಾಗುತ್ತದೆ. ಆದರದು ಸೂಕ್ಷ್ಮಮತಿಗಳಿಗೆ ಮತ್ತು ಸದಾ ಪ್ರಕೃತಿಗೆ ಸ್ಪಂದಿಸುವ ಸಹೃದಯ ಚೇತನಗಳಿಗೆ ಮಾತ್ರ ಸಾಧ್ಯ. ಹಾಗೆ ಅದನ್ನು ಸಾಧ್ಯವಾಗಿಸಿಕೊಂಡಿದ್ದವರು ಸ್ಪಂದನಶೀಲ ಹೃದಯವಂತಿಕೆಯನ್ನು ಪಡೆದಿದ್ದ ಶ್ರೀ ಕೊಂಡಜ್ಜಿ ಬಸಪ್ಪನವರು.

ಶ್ರೀಯುತರು ತಮ್ಮ ಬಾಳಿನುದ್ದಕ್ಕೂ ತಮ್ಮ ಉದಾತ್ತ ವ್ಯಕ್ತಿತ್ವವನ್ನು ಮೆರೆದವರು. ಅನ್ಯರ ಮನ ನೋಯಿಸುವಂತಹ ಮಾತನ್ನು ಕೂಡ ಆಡಿದವರಲ್ಲ. ಸೌಮ್ಯತೆಯೇ ಮೈವೆತ್ತ ಮೂರ್ತಿ. ಅವರಲ್ಲಿ ಆನೆಯ ಧೈರ್ಯವಿತ್ತು. ಇರುವೆಯ ದುಡಿಮೆಯಿತ್ತು. ತಮ್ಮದಲ್ಲದ ಯಾರ ವಸ್ತುವಿಗೂ ಅವರು ಆಸೆ ಪಟ್ಟವರಲ್ಲ. ತಮ್ಮದಾದದ್ದು ಬಂದರೆ ಹಿಗ್ಗಿನಲ್ಲಿ ಮೈಮರೆತವರಲ್ಲ, ಬಾರದಿದ್ದರೆ ಕೊರಗುತ್ತ ಕುಳಿತವರೂ ಅಲ್ಲ. ಅವರು ಸದಾ ಹಸನ್ಮುಖಿಗಳು, ಸದಾ ನಗುನಗುತ್ತಲೇ ತಮ್ಮ ಮೈಮನಗಳನ್ನು ಹಗುರವಾಗಿಸಿಕೊಂಡವರು. ಸರಳ ಸಜ್ಜನಿಕೆಯ ಸಾಕಾರಮೂರ್ತಿ. ಅಷ್ಟೇ ಪ್ರಮಾಣದ ಸತ್ಯಸಂಧತೆ, ಪ್ರಾಮಾಣಿಕತೆ ಮತ್ತು ಘನತೆ ಗೌರವಗಳು ಅವರಲ್ಲಿ ಮನೆ ಮಾಡಿಕೊಂಡಿದ್ದವು. ಮಂತ್ರಿಗಳಾಗಿದ್ದಾಗಲೂ ಅಧಿಕಾರದ ಅಮಲಿನಲ್ಲಿ ಒಣಪ್ರತಿಷ್ಠೆಗಳು ಅವರ ಬಳಿ ಬಂದು ಸುಳಿಯಲಿಲ್ಲ. ಎಂಥದೇ ಸಂಕಷ್ಟ ಸಂದರ್ಭದಲ್ಲೂ ಸಹನೆಯನ್ನು ಕಳೆದುಕೊಂಡವರಲ್ಲ. ಸಹನೆಯಷ್ಟೇ ಪ್ರಮಾಣದಲ್ಲಿ ಸೈರಣೆ, ತಾಳ್ಮೆಗಳು ಅವರಲ್ಲಿದ್ದವು. ಯಾವುದೇ ಉದ್ವೇಗಕ್ಕೆ ಅವರು ಎಂದಿಗೂ ಬಲಿಯಾದವರಲ್ಲ. ಅವರ ಬದುಕಿನ ಗೆಲುವಿಗೆ ಅವರ ತಾಳ್ಮೆಯೇ ಮೂಲಕಾರಣ ಎಂಬುದು ಅವರ ಅಭಿಮತವಾಗಿತ್ತು. 'ತಾಳ್ಮೆ, ತಾಳ್ಮೆ, ತಾಳ್ಮೆ! ನಿಮ್ಮಲ್ಲಿ ಸಾಕಷ್ಟು ಪ್ರಮಾಣದಲ್ಲಿ ತಾಳ್ಮೆ ಇದ್ದರೆ, ಕೈಗೆತ್ತಿಕೊಂಡ ಕೆಲಸವನ್ನು ಮುಂದುವರಿಸುವ ಮನಸ್ಸಿದ್ದರೆ ಗೆಲುವು ನಿಮ್ಮನ್ನು ಖಂಡಿತ ಹಿಂಬಾಲಿಸುತ್ತದೆ. ಯಾವುದೇ ಬರಲಿ, ಬಂದದ್ದನ್ನು ನಗುಮುಖದಿಂದ ಸ್ವೀಕರಿಸುವುದನ್ನು ಮೊದಲು ಕಲಿಯಿರಿ' ಎಂದು ಹೇಳುತ್ತಿದ್ದರು.

ಕೊಂಡಜ್ಜಿ ಬಸಪ್ಪನವರದು ನಿಂತು ನೋಡುವಂತಹ ನಿಲುವು, ನೋಡಿದರೆ, ನುಡಿಸಬೇಕು ಎಂಬ ಆಕರ್ಷಕ ವ್ಯಕ್ತಿತ್ವ. ಅವರಲ್ಲಿದ್ದುದು ಮುಚ್ಚಿಲ್ಲದ ಬಿಚ್ಚುಮಾತು. ಬಳಿಗೆ ಬಂದವರೊಡನೆ ಆತ್ಮೀಯವಾಗಿ ಮಾತನಾಡುವ, ತಮ್ಮ ಕೈಲಾದ ನೆರವನ್ನು ತತ್‌ಕ್ಷಣ ಮಾಡಿ ನೀಡುವ ಔದಾರ್ಯ. ರಾಜಕೀಯ ಕ್ಷೇತ್ರದಲ್ಲಿ ಕೆಲಸ ಮಾಡುವ ವ್ಯಕ್ತಿಗೆ ಈ ಗುಣ ವಿಶೇಷಗಳು ಅತ್ಯಂತ ಶೋಭೆಯನ್ನುಂಟು ಮಾಡುವಂತಹುಗಳು— ಎಂಬುದನ್ನು ಮತ್ತೆ ಬೇರೆ ಹೇಳಬೇಕಾಗಿಲ್ಲ. ಹಾಗಾಗಿ ಕೊಂಡಜ್ಜಿಯವರು ಆ ಕಾಲದ ಎಲ್ಲ ಸಿದ್ಧ ಪ್ರಸಿದ್ಧ ರಾಜಕೀಯ ಮುಖಂಡರುಗಳ ಮನ್ನಣೆಗೆ ಪಾತ್ರರಾಗಿದ್ದರು. ತಮ್ಮ ಸಜ್ಜನಿಕೆಯನ್ನು ಮೆರೆದು ಜನರ ಹೃದಯವನ್ನು ಗೆದ್ದರು. ಕೊಂಡಜ್ಜಿಯವರ ವ್ಯಕ್ತಿತ್ವಕ್ಕೆ ಘನತೆ ತರುವ ಮತ್ತೊಂದು ಅಂಶವೆಂದರೆ, ಅವರು ಶಾಸಕರಾಗಿ, ಮಂತ್ರಿಯಾಗಿ, ಸಂಸದೀಯಪಟುವಾಗಿ ಸಂಬಂಧಪಟ್ಟ ಅಧಿಕಾರಿಗಳೊಡನೆ ನಡೆದುಕೊಳ್ಳುತ್ತಿದ್ದ ಸೌಹಾರ್ದ ರೀತಿ. ಒಂದು ಯೋಜನೆಗೆ ಮಂಜೂರಾತಿ ಕೊಡುವ ವಿಷಯವಿರಲಿ, ಅದಕ್ಕೆ ಸಂಬಂಧಪಟ್ಟ ಹಣವನ್ನು ಬಿಡುಗಡೆ ಮಾಡುವ ವಿಚಾರವಿರಲಿ, ಆ ಯೋಜನೆಯ ಕಾರ್ಯ ಪ್ರಗತಿಯನ್ನು ಅವಲೋಕಿಸುವ ಅಥವಾ ಸಮೀಕ್ಷಿಸುವ ಕೆಲಸವಿರಲಿ, ಅದನ್ನು ಮನ ಮುಟ್ಟಿ ಬಹು ಶ್ರದ್ಧೆಯಿಂದ ಮಾಡುವ ಕರ್ಮಯೋಗಿಯಾಗಿದ್ದರು. ಶ್ರೀ ಕೊಂಡಜ್ಜಿ ಅವರು ಮಂತ್ರಿಗಳಾಗಿದ್ದಾಗ ಅವರ ಖಾತೆಯಲ್ಲಿ ಕೆಲಸ ಮಾಡುತ್ತಿದ್ದ ಅದೆಷ್ಟೋ ಅಧಿಕಾರಿಗಳು ಆ ಅನುಭವವನ್ನು ಇಂದಿಗೂ ಸ್ಮರಿಸುತ್ತಾರೆ. ಎರಡರಿಯದ ಅವರ ನಿಷ್ಪಕ್ಷಪಾತ ಮನೋಭಾವವನ್ನು ಕೊಂಡಾಡುತ್ತಾರೆ. ಇದು ಸಾಮಾಜಿಕ ಕಾರ್ಯಕರ್ತನಿಗೆ, ಇರಬೇಕಾದ ಸದ್ಗುಣ ವಿಶೇಷ ತಾನೆ!

**ಶುಚಿ ಶುದ್ಧ, ರುಚಿಬದ್ಧ ರಾಜಕಾರಣಿ :**

ಕೊಂಡಜ್ಜಿಯವರ ರಾಜಕೀಯ ನೀತಿ ಬೇರೆಯವರ ರಾಜಕಾರಣದಂತಲ್ಲ. ಅದಕ್ಕೆ ಅದರದೇ ಆದ ಒಂದು ಸಂಹಿತೆ ಇತ್ತು. ಅದು ಬಹುಜನ ರಾಜಕಾರಣಿಗಳಲ್ಲಿ ಕಾಣಸಿಗದ ವಸ್ತು. ಅವರು ಹೇಳುತ್ತಿದ್ದರು 'ರಾಜಕಾರಣ ಒಂದು ವೃತ್ತಿ ಅಲ್ಲ, ಅದೊಂದು ಸೇವಾ ಸಾಧನ. ಅದನ್ನೇ ಒಂದು ವೃತ್ತಿಯನ್ನಾಗಿ ಮಾಡಿಕೊಂಡರೆ ವ್ಯಕ್ತಿಯ ವೈಯಕ್ತಿಕ ಏಳಿಗೆ ತಾತ್ಕಾಲಿಕವಾಗಿ ಅಷ್ಟೊ, ಇಷ್ಟೊ, ಆಗಬಹುದು. ಆದರೆ ಅದರಿಂದ ರಾಷ್ಟ್ರಪ್ರಗತಿ ಕುಂಠಿತಗೊಳ್ಳುತ್ತದೆ. ಸ್ವಾತಂತ್ರ್ಯಾನಂತರ ಭಾರತೀಯನ ಬದುಕು ರಾಜಕೀಯವಾಗುತ್ತಿದೆ. ಅದರ ಮೂಲಕವೇ ದೇಶ ಸಕಲವನ್ನೂ ಸಾಧಿಸುತ್ತದೆ ಎಂಬ ತಪ್ಪು ಕಲ್ಪನೆ ಭಾರತೀಯರಲ್ಲಿ ಬೃಹದಾಕಾರವಾಗಿ ಬೆಳೆದುಬಿಟ್ಟಿದೆ. ಇದರಂತಹ ಪಾಪದ ಚಿಂತನೆ ಬೇರೊಂದಿಲ್ಲ. ಮನುಷ್ಯತ್ವದ ಗಂಧವೇ ಇಲ್ಲದ 'ಇಜಂ'ಗಳಿಂದ ರಾಷ್ಟ್ರ ಆಘಾತದ ಅಂಚಿನಲ್ಲಿದೆ. ಬೆಂದ ಮನೆಗೆ ಇರಿದದ್ದೇ ಲಾಭ ಎನ್ನುವ ಸಮಯಸಾಧಕ ದುಷ್ಟ ಶಕ್ತಿಗಳಿಂದ ದೇಶ ವಿನಾಶದತ್ತ ದಾಪುಗಾಲಿಕ್ಕುತ್ತಿರುವುದು ಬಹು ದೊಡ್ಡ ದುರಂತ. ಮತ್ತೊಂದು ಮಾತು. ತಮ್ಮ ಸ್ವಾರ್ಥಕ್ಕಾಗಿ ವಿದ್ಯಾರ್ಥಿ ಸಮುದಾಯವನ್ನು ದುರ್ಬಳಕೆ ಮಾಡಿಕೊಳ್ಳುವ ದುಷ್ಟಶಕ್ತಿಗಳು ನಾಡಿನ ಪಿಡುಗುಗಳು ಎಂಬುದನ್ನು ನಾವಾರೂ ಮರೆಯಬಾರದು. ಅದನ್ನು ತಡೆಗಟ್ಟಲು ನಾವು ಸಜ್ಜಾಗಬೇಕು, ಸಾಮೂಹಿಕವಾಗಿ ಶ್ರಮಿಸಬೇಕು. ಇಲ್ಲವಾದರೆ ಇನ್ನು ಒಂದೆರಡು ತಲೆಮಾರುಗಳಲ್ಲಿ ಭಾರತ ಭಾರತವಾಗಿ ಉಳಿಯುವುದಿಲ್ಲ. ಇದು ಶಾಪವಲ್ಲ, ಅಂತಾಗದಿರಲಿ ಎಂಬ ಹಂಬಲ.'

ಕೊಂಡಜ್ಜಿಯವರ ರಾಜಕೀಯ ನೀತಿ ಸಂಹಿತೆಯಲ್ಲಿ ಅನಂತ ಅರ್ಥವೇ ಗರ್ಭೀಕೃತವಾಗಿದೆ.

ಶ್ರೀಯುತ ಕೊಂಡಜ್ಜಿಯವರಿಗೆ ರಾಜಕೀಯ ಪ್ರಿಯವಾದ ಕ್ಷೇತ್ರವೇನಲ್ಲ. ಆದರೆ ಅವರು ಅದನ್ನು ಪ್ರವೇಶಿಸಿದ್ದು ಆಕಸ್ಮಿಕ. ತಮಗೆ ಪ್ರಿಯರಾದವರ ಪ್ರೇರಣೆ, ಪ್ರಚೋದನೆ. ಅದಕ್ಕೆ ಮೂಲ ಪ್ರೇರಣೆ ಅವರ ಮಾವನವರಾದ ಕಂದಗಲ್ ಪಟೇಲ್ ಚನ್ನಬಸಪ್ಪನವರು, ಪ್ರಚೋದನೆ ಜಾನಪದ ಲೋಕದ ನಾಗೇಗೌಡರವರು (ವಿವರ ವನ್ನು ಇದೇ ಅಧ್ಯಾಯದ 'ಒಳ್ಳೆಯ ಸ್ನೇಹಿತ' ಎಂಬ ಭಾಗದಲ್ಲಿ ನೋಡಿ). ರಾಜಕೀಯ ಅವರು ಬಯಸಿದ್ದಲ್ಲ; ಅವರು ಅದನ್ನು ಬೇಡಿ ಪಡೆದವರೂ ಅಲ್ಲ. ಆದರೂ ಅವರ ಮಡಿಲಿಗೆ ಒಂದು ಸುಗಂಧಪೂರಿತ ಪುಷ್ಪ ತಾನಾಗಿಯೇ ಕಳಚಿ ಬಿತ್ತು. ಅದು ಬಂದು ಬಿತ್ತೆಂದು ತಮ್ಮ ಪೂರ್ವಾಶ್ರಮದ ಚಿತ್ತಶುದ್ಧಿಯನ್ನು ಕಳೆದುಕೊಂಡವರಲ್ಲ. ಶುದ್ಧಹಸ್ತರಾಗಿ, ಪ್ರಾಂಜಲ ಮನಸ್ಕರಾಗಿ, ಅಗ್ನಿಯಂತೆ ಪರಿಶುದ್ಧರಾಗಿ, ಗಂಗೆಯಂತೆ ಪಾವನರಾಗಿ, ತಾವರೆಯ ಎಲೆಯ ಮೇಲಣ ನೀರ ಹನಿಯಂತೆ ಅಂಟಿಯೂ ಅಂಟದೆ ಪರಿಶುದ್ಧ ಮನದ ರಾಜಋಷಿಯಾಗಿ, ಅಗ್ನಿಸ್ನಾತರಾಗಿ ಹೊರಬಂದರು. ಅವರ ಪಾರಿಶುದ್ಧವೇ ರಾಜಕೀಯ ರಂಗದ ಚಿರಸ್ಮರಣೆಗೆ ಕಾರಣವಾಗಿದೆ. ಇದನ್ನರಿತ ಕೆಲವರು ಕೊಂಡಜ್ಜಿಯವರನ್ನು 'ಕೆಸರಿನಲ್ಲಿ ಅರಳಿದ ಕಮಲ' ಎಂದರು. ಮತ್ತೆ ಕೆಲವರು, 'ರಾಜಕೀಯವೆಂಬ ಮರುಭೂಮಿಯ ಓಯಸಿಸ್' ಎಂದರು. ಅವೆಲ್ಲಕ್ಕೂ ಕಿರೀಟವಿಟ್ಟಂತೆ ಶ್ರೀ ಪಾಟೀಲ ಪುಟ್ಟಪ್ಪನವರು, 'ಕೊಂಡಜ್ಜಿಯವರು ಬೆಳ್ಳಿಬಂಗಾರದೆಳೆಯ ಬಟ್ಟೆಯಲ್ಲಿ ಹಾಯ್ದುಬಂದರೂ ಬತ್ತಲೆಯಾಗಿಯೇ ಬರುವ ಸೂಜಿಯಂತೆ!' ಎಂದು ಗೌರವಿಸಿದರು. ಎಲ್ಲರಿತ್ತ ಬಿರುದುಗಳೂ ಕೊಟ್ಟ ಗುಣವಾಚಕ ಗಳೂ ಕೊಂಡಜ್ಜಿಯವರ ಕಳಂಕರಹಿತ ರಾಜಕೀಯ ಜೀವನಕ್ಕೆ ಹಿಡಿದ ಕನ್ನಡಿಗಳಾಗಿವೆ. ಹಿರಿಯ ಮುತ್ಸದ್ದಿ ಶ್ರೀ ಕೆಂಗಲ್ ಹನುಮಂತಯ್ಯನವರು, 'ಅವರ (ಕೊಂಡಜ್ಜಿಯವರ) ರಾಜಕೀಯ ಜೀವನವು ಶುದ್ಧವಾದುದು. ಎರಡಾವರ್ತಿ ಮಂತ್ರಿಯಾದರು. ಒಳ್ಳೇ ಹೆಸರನ್ನೇ ಪಡೆದರು. ಯಾವ ಆರೋಪದ ಸೋಂಕೂ ಅವರ ವಿಚಾರದಲ್ಲಿ ಹಬ್ಬಲಿಲ್ಲ. ಅವರ ಕೀರ್ತಿಯು ನಿಷ್ಕಳಂಕವಾಗಿದೆ ಎಂದು ಮುಕ್ತ ಮನಸ್ಸಿನ ಮುತ್ತಿನಂತಹ ನುಡಿ ನುಡಿದಿದ್ದಾರೆ.

ಸರ್ವೋದಯ ನಾಯಕ ಶ್ರೀ ವಿನೋಬಾ ಭಾವೆಯವರು ರಾಜಕೀಯದ ಸ್ವಭಾವ ಕುರಿತು, 'ರಾಜಕೀಯವು ಹೃದಯಗಳನ್ನು ದೂರ ಮಾಡುವಂತಹ ಶಕ್ತಿಯೇ ಹೊರತು ಒಂದುಗೂಡಿಸುವಂತಹುದಲ್ಲ' ಎಂದಿದ್ದಾರೆ. ಕೊಂಡಜ್ಜಿಯವರು ಈ ಹೇಳಿಕೆಗೆ ಅಪವಾದವಾಗಿ ಬದುಕಿದ್ದಾರೆ. ಅವರು ರಾಜಕೀಯ ಕುರುಕ್ಷೇತ್ರದ ಅಜಾತಶತ್ರು. ಅವರು ಕೇವಲ ಮಿತ್ರರು ಹೊಗಳುವಂತೆ ಬದುಕಿದವರಲ್ಲ, ಶತ್ರುಗಳೂ ಮೆಚ್ಚುವಂತೆ ಬಾಳಿ ಬದುಕಿದವರು. ನಿದ್ರೆಯಿಂದೆದ್ದು ಬಂದಂತೆ ರಾಜಕೀಯ ರಂಗದಿಂದ ಎದ್ದು ಹೊರಬಂದವರು. ಹೋಗುವಾಗ ಪ್ರಾಂಜಲ ಹೃದಯವೊಂದನ್ನು ಹೊರತು ಬೇರೆ ಏನನ್ನೂ ತೆಗೆದುಕೊಂಡು ಹೋಗಲಿಲ್ಲ, ಬರುವಾಗ ಏನನ್ನೂ ಒಂದು ಹುಲ್ಲುಕಡ್ಡಿಯನ್ನೂ ಸಹ ಮುಟ್ಟದೆ ರಿಕ್ತ ಹಸ್ತರಾಗಿ, ಅದೇ ಪರಿಶುದ್ಧ ಹೃದಯದಿಂದ ಹೊರಬಂದರು. ವಿಶ್ವವಿಜೇತ ಅಲೆಗ್ಸಾಂಡರ್ ಭಾರತದಿಂದ ತನ್ನ ಹುಟ್ಟೂರಾದ ಗ್ರೀಸಿನ ಮೆಸಿಡೋನಿಯಾಕ್ಕೆ ಹೋದಮೇಲೆ ತನ್ನ ಮರಣಶಾಸನದಲ್ಲಿ ಸೂಚಿಸಿದನಂತೆ, 'ನಾನು ಸತ್ತ ಮೇಲೆ ನನ್ನ ಶರೀರವನ್ನು

ಶವಪೆಟ್ಟಿಗೆಯಲ್ಲಿರಿಸಿ. ಆದರೆ ನನ್ನೆರಡೂ ಕೈಗಳು ಮಾತ್ರ ಹೊರಗಡೆ ಇರಲಿ. ಏಕೆಂದರೆ ನಾನು ಬರಿಕೈಯಲ್ಲಿ ಜಗತ್ತಿಗೆ ಬಂದೆ, ಅದೇ ಬರಿಕೈಯಲ್ಲಿ ಈ ಜಗತ್ತನ್ನು ಬಿಟ್ಟು ಹೋಗುತ್ತೇನೆ ಎಂಬ ನನ್ನ ಅಂತರಂಗದ ಅಭಿಪ್ರಾಯ ಜನತೆಗೆ ಮುಟ್ಟಲಿ. ಅವರು ನನ್ನ ಮನಸ್ಸನ್ನು ನನ್ನ ತೆರೆದ ಹಸ್ತಗಳಲ್ಲಿ ಓದಲಿ ಎಂದು. ಈ ರೀತಿ ರಾಜಕೀಯ ನಾಟಕದ ಓರ್ವ ಪಾತ್ರಧಾರಿಯಾಗಿ, ತಮ್ಮ ಅಭಿನಯ ನೀಡಿ, ಅದರಿಂದ ಶುದ್ಧಹಸ್ತರಾಗಿ ಹೊರ ಬಂದವರು ಕೊಂಡಜ್ಜಿಯವರು.

ಶ್ರೀಯುತರ ಶ್ರದ್ಧಾಂಜಲಿ ಸಂದರ್ಭದಲ್ಲಿ ಆಧುನಿಕ ವಚನಕಾರ ಡಾ. ಸಿದ್ಧಯ್ಯ ಪುರಾಣಿಕರು ತಮ್ಮ ಸಂತಾಪಸೂಚಕ ಸಂದೇಶದಲ್ಲಿ ಹೇಳಿರುವಂತೆ, 'ಕೀರ್ತಿಕಾಯರಾದ ಕೊಂಡಜ್ಜಿ ಬಸಪ್ಪನವರು ಈ ಕಾಲದ ಪವಿತ್ರಾತ್ಮರಲ್ಲಿ ಒಬ್ಬರು; ರಾಜಕೀಯದಲ್ಲಿದ್ದೂ ಪರಿಶುದ್ಧ ಚಾರಿತ್ರ್ಯವನ್ನು ಉಳಿಸಿಕೊಂಡಿದ್ದ, ಬೆಳೆಸಿಕೊಂಡಿದ್ದ ವಿರಳ ವ್ಯಕ್ತಿಗಳಲ್ಲಿ ಒಬ್ಬರು. ಮಾತಿಗಿಂತ ಕೃತಿಗೆ ಮಹತ್ವವನ್ನು ನೀಡಿದ ಅಪರೂಪದ ನಾಯಕರಲ್ಲಿ ಒಬ್ಬರು!' ಈ ಸಂದೇಶಕ್ಕೆ ಅನುಮೋದನೆಯೋ ಎಂಬಂತೆ ಕನ್ನಡದ ಖ್ಯಾತ ಕವಿವಿಮರ್ಶಕ ಶ್ರೀ ಕೋ. ಚನ್ನಬಸಪ್ಪನವರು ತಾವೂ ಒಂದು ಸಂತಾಪ ಸೂಚಕ ಸಂದೇಶ ಕಳುಹಿಸುತ್ತಾ, 'ರಾಜಕೀಯದಲ್ಲಿದ್ದು ಕೈ ಬಾಯಿಗಳನ್ನು ಪರಿಶುದ್ಧವಾಗಿಟ್ಟುಕೊಂಡಿದ್ದ ಕೇವಲ ಕೆಲವೇ ವ್ಯಕ್ತಿಗಳಲ್ಲಿ ಅವರೊಬ್ಬರು. ರಾಜ್ಯ ಮತ್ತು ಕೇಂದ್ರದಲ್ಲಿ ಮಂತ್ರಿಗಳಾಗಿದ್ದಾಗಲೂ ಅವರಿಗೆ ಹುಟ್ಟುಗುಣವಾದ ಸ್ನೇಹಪರತೆ, ಆತ್ಮೀಯತೆಯನ್ನು ಅವರು ಎಂದಿಗೂ ಕೈಬಿಡಲಿಲ್ಲ. ಲೋಕಕ್ಕೆ ಮಾದರಿ ಆಗುವಂತೆ ಬದುಕಿದ ಸಾರ್ಥಕ ಜೀವನ ಅವರದು. ಮನುಷ್ಯನಾಗಿ ಹುಟ್ಟಿದ ಮೇಲೆ ಸಾಧಿಸಬೇಕಾದ್ದು ಇದೇ ತಾನೆ?' ಎಂದು ನುಡಿದಿದ್ದಾರೆ.

ಇಂತಹ ಉದಾತ್ತ ಜೀವನ ನಡೆಸಿದ ಶುದ್ಧಾತ್ಮ ಚೈತನ್ಯಕ್ಕೆ ನಾಡಿನ ಅನಂತ ನಮನಗಳು ಸಲ್ಲುತ್ತವೆ. ಈ ಬಗೆಯ ನಿರ್ಲಿಪ್ತತೆ ಕೊಂಡಜ್ಜಿಯವರಂತಹ ರಾಜಋಷಿಗೆ ಮಾತ್ರ ಸಾಧ್ಯ.

**ದಕ್ಷ ಆಡಳಿತಗಾರ :**

ಕೊಂಡಜ್ಜಿಯವರು ಯಾವುದೇ ಆಡಳಿತ ವ್ಯವಸ್ಥೆಯಲ್ಲಿ ಕೆಲಸ ಮಾಡಲಿ ಅದರ ಬಗೆಗೆ ಅವರಿಗೆ ವಿಶೇಷ ಆಸ್ಥೆ ಇತ್ತು. ಅದರಲ್ಲಿ ಅವರು ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡುಬಿಡುತ್ತಿದ್ದರು. ಕಾಯಕನಿಷ್ಠೆ ಇಲ್ಲದವನು ಆ ಸ್ಥಾನಕ್ಕೆ ಒಪ್ಪಬಾರದು, ಬರಲೂಬಾರದು ಎಂಬುದು ಅವರ ಅನಿಸಿಕೆ. ಕೊಂಡಜ್ಜಿ ಕರ್ತವ್ಯ ಪಾಲನೆಯ ಬಗೆಗೆ ತುಂಬಾ ನಿಷ್ಠುರವಾದಿ. ಯಾರ ಬಗೆಗೂ ಅವರು ಮುಲಾಜಿಟ್ಟುಕೊಳ್ಳುತ್ತಿರಲಿಲ್ಲ, ದಾಕ್ಷಿಣ್ಯಕ್ಕೆ ಮಣಿಯುತ್ತಿರಲಿಲ್ಲ. ಶಿಫಾರಸುಗಳು ಬಂದರೆ, ವಿಮರ್ಶೆ ಮಾಡದೆ ಕಾರ್ಯೋನ್ಮುಖರಾಗುತ್ತಿರಲಿಲ್ಲ. ದೆಹಲಿಯಲ್ಲಿ ಉಪಸಚಿವರಾಗಿದ್ದಾಗಲೂ ತಾವು ವಹಿಸಿಕೊಂಡ ರಾಜ್ಯ ಸ್ಕೌಟ್ ಸಂಸ್ಥೆಯ ಬಗೆಗೆ ಕಾಳಜಿ ಇಟ್ಟುಕೊಂಡೇ ಇದ್ದರು. ಅದರ ಕಾರ್ಯಚಟುವಟಿಕೆಗಳು ಹಾಗೂ ಪ್ರಗತಿಯ ಬಗೆಗೆ ದಿನಕ್ಕಿಷ್ಟು ನಿಮಿಷಗಳೆಂದು ಗೊತ್ತು ಮಾಡಿಕೊಂಡು, ಮಾತನಾಡುತ್ತಿದ್ದರು. ಆ ಸಂದರ್ಭಕ್ಕೆ ಸೂಕ್ತವಾದ ಸಲಹೆ ಸೂಚನೆಗಳನ್ನು ಅಲ್ಲಿಂದಲೇ ನೀಡುತ್ತಿದ್ದರು. ಮಾರನೆಯ

ದಿನ, 'ನಿನ್ನೆ ಹೇಳಿದ ಕೆಲಸ ಎಲ್ಲಿಗೆ ಬಂತ್ಸು' ಎಂದು ವಿಚಾರಿಸುತ್ತಿದ್ದರು. ಆ ಕಾರ್ಯಪೂರ್ಣಗೊಳ್ಳುವ ವರೆಗೂ ಬಿಡುತ್ತಿರಲಿಲ್ಲ. ಇದು ಅವರಲ್ಲಿದ್ದ ಕಾರ್ಯತತ್ಪರತೆ. ಆಜ್ಞೆಮಾಡಿ ಮರೆಯುವುದು ಅವರ ಜಾಯಮಾನವಲ್ಲ. ಅದನ್ನು ಆಗುಮಾಡುವುದು ಅವರ ಸ್ವಭಾವ. ದುಡಿಮೆಯಲ್ಲಿ ದೇವರನ್ನು ಕಂಡ ಅವರು ಕಾಯಕಕ್ಕೆ ಎಂದಿಗೂ ದ್ರೋಹ ವೆಸಗಿದವರಲ್ಲ. ಅಂಥವರನ್ನು ಕಂಡರೆ ಅವರಿಗೆ ಆಗುತ್ತಲೂ ಇರಲಿಲ್ಲ. ಒಂದು ನಿದರ್ಶನ:

ಒಬ್ಬರು ಪಿ.ಡಬ್ಲ್ಯು. ಇಲಾಖೆಯ ಇಂಜಿನಿಯರ್. ಅವರಿಗೆ ಬೀದರ್‌ಗೆ ವರ್ಗವಾಯಿತು. ಅವರು ಕೊಂಡಜ್ಜಿಯವರ ಆಪ್ತರೆ. ಆದರೂ ಬೇರೊಬ್ಬರಿಂದ, ಕೊಂಡಜ್ಜಿ ಯವರಿಗೆ ತುಂಬಾ ನಿಕಟ ಸಂಪರ್ಕ ಇಟ್ಟುಕೊಂಡವರಿಂದ ತಮ್ಮ ವರ್ಗಾವಣೆಯ ಆಜ್ಞೆಯನ್ನು ರದ್ದುಗೊಳಿಸಲು ಕೇಳಿಸಿದರು. ಕೊಂಡಜ್ಜಿಯವರಿಗೆ ಸರ್ಕಾರಿ ನೌಕರನ ಈ ಬಗೆಯ ವರ್ತನೆ ಹಿಡಿಸಲಿಲ್ಲ. ಆದರೆ ತಾಳ್ಮೆ ಕಳೆದುಕೊಳ್ಳಲಿಲ್ಲ. ಸಮಾಧಾನ ಮನಸ್ಸಿನಿಂದಲೇ ತಮ್ಮಲ್ಲಿಗೆ ಬಂದ ಶಿಫಾರಸುದಾರರಿಗೆ ಉತ್ತರಿಸಿದರಂತೆ ನೋಡಿ, ಬೀದರ್ ಇರುವುದು ನಮ್ಮ ಹೈದರಾಬಾದ್ ಕರ್ನಾಟಕದಲ್ಲೇ. ಅದು ಕರ್ನಾಟಕದ ಒಂದು ಭಾಗದ ಒಂದು ಅವಿಭಾಜ್ಯ ಅಂಗ. ಅಲ್ಲಿಯೂ ನಮ್ಮ ನಿಮ್ಮಂತಹ ಮನುಷ್ಯರಿದ್ದಾರೆ, ಮೃಗಗಳೇನೂ ಇಲ್ಲ. ಶ್ರೀಯುತರ ಸೇವೆ ಅಲ್ಲಿನ ಜನತೆಗೂ ಸಲ್ಲಲಿ. ಊರು ಮುಖ್ಯ ಅಲ್ಲ, ದೂರ ದೊಡ್ಡದಲ್ಲ. ವ್ಯಕ್ತಿ 'ಇದ್ದಲ್ಲಿ ದುಡಿಯಬೇಕು, ಬಿದ್ದಲ್ಲಿ ಹುಡುಕಬೇಕು' ಎಂಬ ಗಾದೆಯೇ ಇದೆ. ಅದನ್ನು ಅವರು ಅರ್ಥಮಾಡಿಕೊಳ್ಳುವಂತೆ ತಿಳಿಯ ಹೇಳಿ. ಯಾರೇ ಆಗಲಿ ತಾವು ತಿನ್ನುವ ಅನ್ನಕ್ಕೆ ದ್ರೋಹವೆಸಗಬಾರದು. ಎರಡನೆಯದಾಗಿ, ಮೇಲಿಂದ ಬಂದ ಆಜ್ಞೆಯನ್ನು ಮೊದಲು ಪಾಲಿಸಬೇಕು. ಮೊದಲು ಆಜ್ಞೆಗೆ ಮನ್ನಣೆ, ಆಮೇಲೆ ಕಷ್ಟ ಪರಿಹಾರಕ್ಕೆ ಪ್ರಾರ್ಥನೆ. ಇಂದೇ ವರ್ಗ ಮಾಡಿರುವ ಸ್ಥಳಕ್ಕೆ ಹೋಗಿ ರಿಪೋರ್ಟ್ ಮಾಡಿಕೊಳ್ಳಲು ಅವರಿಗೆ ಹೇಳಿ. ಅನಂತರ ತಮಗೆ ಅನಿವಾರ್ಯ ಕಾರಣಗಳಿಂದ ಅಲ್ಲಿರುವುದು ಆಗದೇ ಹೋದಲ್ಲಿ, ಅಥವಾ ಕೌಟುಂಬಿಕ ಅನಿವಾರ್ಯ ಕಷ್ಟಗಳು ತಲೆದೋರಿದಲ್ಲಿ ನನ್ನಲ್ಲಿ ಬರಲಿ ಕಳುಹಿಸಿ. ನನ್ನ ಕೈಲಾದ ಸಹಾಯವನ್ನು ನಾನು ಖಂಡಿತ ಮಾಡುತ್ತೇನೆ. ನಾನೂ ಅವರಂತೆ ಮನುಷ್ಯನೆ ನಾನೂ ಅವರಂತೆ ಸರಕಾರದ ಓರ್ವ ಸೇವಕನೆ. ನನಗೂ ಅವರಿಗಿರುವಂತೆ ಒಂದು ಸಂಸಾರ ಇದೆ. ಅದರ ಕಷ್ಟಸುಖಗಳ ಅನುಭವ ಇದೆ. ದಯುವಿಟ್ಟು ಬೇಜಾರು ಮಾಡಿಕೊಳ್ಳಬೇಡಿ. ಮೊದಲು ಸರ್ಕಾರಿ ಆಜ್ಞೆಯನ್ನು ಗೌರವಿಸಲಿ' ಎಂದು ಹೀಗೆ ತುಂಬು ಸಮಾಧಾನವಾಗುವಂತೆ ಹೇಳಿಕಳುಹಿಸಿದರಂತೆ. ಆ ವೇಳೆಯಲ್ಲಿ ಅವರ ಮಾನಸಿಕ ಮೃದುತ್ವ ಮತ್ತು ಕಷ್ಟದಲ್ಲಿದ್ದವರ ಬಗೆಗಿನ ಕಳಕಳಿ ಎರಡೂ ಸ್ಪಷ್ಟಗೋಚರ. ಅಂತೆಯೇ ಇದರಿಂದ ಅವರ ನಿಗರ್ವತ್ವವೂ, ಸೌಮ್ಯ ಸ್ವಭಾವ ಸ್ವರೂಪವೂ, ಎಷ್ಟೇ ರಾಜಕೀಯ ಒತ್ತಡಗಳಿದ್ದರೂ ಮನಸ್ಸನ್ನು ವಿಚಲಿತಗೊಳಿಸ ದಂತಹ ಸಮಾಧಾನಕರ ಚಿತ್ತಸ್ವಾಸ್ಥ್ಯವೂ ವೇದ್ಯ.

## ಸೇವೆಯ ನಿಷ್ಠಾಪಟು :

ವ್ಯಕ್ತಿಗೆ ಸ್ಥಾನಮಾನ ಸಿಗುವುದು, ಅವನು ಅದನ್ನು ಸೇವೆಗಾಗಿ ಸಮರ್ಪಿಸಿ ಕೊಳ್ಳಲಿ ಎಂದು. ಅದನ್ನುಳಿದು ದರ್ಪ, ಅಹಂಕಾರಗಳನ್ನು ಮೆರೆಯಲಿಲ್ಲ, ಅತ್ಯಾಚಾರ ಗಳನ್ನೆಸಗಲಲ್ಲ. ಅಲ್ಲದೆ ಅಧಿಕಾರ, ಅಂತಸ್ತು, ಅವಕಾಶಗಳು ಸಿಗುವುದು ವ್ಯಕ್ತಿಯ ಆತ್ಮಪರೀಕ್ಷೆಗಾಗಿ. ಆ ಪರೀಕ್ಷೆಯಲ್ಲಿ ಅವನು ಗೆಲ್ಲಬೇಕು ಸೋತರೆ ಸತ್ತ ಹಾಗೆ. ಇದು ಕೊಂಡಜ್ಜಿಯವರ ಅಧಿಕಾರದ ಗುಟ್ಟು. ಅದನ್ನವರು ಹೇಳಿಕೊಂಡು ತಿರುಗಾಡಲಿಲ್ಲ, ಮಾಡಿ ತೋರಿಸಿದರು, ಅಧಿಕಾರ ಅಹಂಕಾರ ಪ್ರೇರಕಶಕ್ತಿ ನಿಜ. ಅದನ್ನರಿತು ಎಚ್ಚರದಿಂದ ಹೆಜ್ಜೆಯಿಡುವುದು ಎಲ್ಲ ಅಧಿಕಾರಿಗಳಿಗೆ ಕೊಟ್ಟ ಎಚ್ಚರಿಕೆಯ ಮಾತು. ಕೆಲವರಲ್ಲಿ ಅಧಿಕಾರ ಮದ ಏನೇನೊ ಮಾಡಿಸುತ್ತೆ. ಅದರ ಸೆರಗು ಸೋಂಕದಂತೆ ಜಾಗೃತರಾಗಿದ್ದವರು ಶ್ರೀ ಕೊಂಡಜ್ಜಿಯವರು. ಅವರು ಅರ್ಥವಿಲ್ಲದ ಬಿಂಕ ಬಿಗುಮಾನಗಳ ಜನರ ವರ್ಗಕ್ಕೆ ಸೇರಿದವರಲ್ಲ. ತಮ್ಮ ಕೈ ಕೆಳಗಿನ ಅಧಿಕಾರಿಗಳು ತಮ್ಮನ್ನು ಹಾಗೆ ಗೌರವದಿಂದ ಕಾಣಬೇಕು, ಹೀಗೆ ಬಗ್ಗಿ ಸೆಲ್ಯೂಟ್ ಹೊಡೆಯಬೇಕು ಎಂಬ ಯಾವ ಶಿಷ್ಟಾಚಾರವನ್ನೂ ಅವರು ಒಪ್ಪುತ್ತಿರಲಿಲ್ಲ. ಅದಕ್ಕೊಂದು ನಿದರ್ಶನ:

ಶ್ರೀಯುತರು ಕೇಂದ್ರದಲ್ಲಿ ಉಪಸಚಿವರಾಗಿದ್ದಾಗ ಧಾರವಾಡದಲ್ಲಿ ಒಂದು ಕಾರ್ಯಕ್ರಮ. ಆ ಕಾರ್ಯಕ್ರಮ ಮುಗಿಸಿಕೊಂಡು ಮಂತ್ರಿಗಳು ದಾವಣಗೆರೆಗೆ ಹೊರಟರು. ಅವರನ್ನು ಜಿಲ್ಲೆಯ ಗಡಿಯವರೆಗೂ ಬಿಟ್ಟು, ಬೀಳ್ಕೊಟ್ಟು ಸೆಲ್ಯೂಟ್ ಹೊಡೆದು ಬರುವುದಕ್ಕಾಗಿ ಪೊಲೀಸ್ ಜೀಪುಗಳು ಸಿದ್ಧವಾಗಿದ್ದವು. ಅದು ಪೊಲೀಸ್ ಇಲಾಖೆಯಲ್ಲಿದ್ದ ಶಿಷ್ಟಾಚಾರ. ಇದು ಗೊತ್ತಿದ್ದ ಮಂತ್ರಿಗಳು ಕಾರ್ಯಕ್ರಮ ಮುಗಿದ ಕೂಡಲೆ ತಮ್ಮ ಕಾರಿನ ಬಳಿ ಬಂದರು. ಅವರ ಹಿಂದೆ ಹೊರಡಲನುವಾಗಿದ್ದ ಪೊಲೀಸ್ ಅಧಿಕಾರಿಗಳನ್ನು ಕರೆದು 'ನೀವು ನನ್ನನ್ನು ಗಡಿ ಕಾಣಿಸುವುದು ಬೇಡ. ನಾನು ಹೋಗ್ತೇನೆ. ನನಗೆ ಯಾವ ಅಥವಾ ಯಾರ ಭಯವೂ ಇಲ್ಲ. ನೀವು ನಿಮ್ಮ ಠಾಣೆಗೆ ಹೋಗಿ. ನಿಮ್ಮ ಪೊಲೀಸ್ ಸೂಪರಿಂಟೆಂಡೆಂಟರಿಗೆ ಥ್ಯಾಂಕ್ಸ್ ಹೇಳಿ' ಎನ್ನುತ್ತಲೇ ಅವರ ಕೈ ಕುಲುಕಿ ಕಾರು ಹತ್ತಿ ನಡೆದೇಬಿಟ್ಟರು.

ಇಂತಹ ಸರಳ ಹಾಗೂ ನಿರಾಡಂಬರ ಜೀವನ ವಿಧಾನ ಶ್ರೀಯುತರದು.

ಕೊಂಡಜ್ಜಿಯವರಿಗೆ ದರ್ಪಕ್ಕಿಂತ, ದೀನದಲಿತರ ಸೇವೆ, ಗ್ರಾಮೀಣ ಜನತೆಯ ಸೇವೆ ಮುಖ್ಯ ಕಾಳಜಿಯಾಗಿದ್ದವು. ಅವರು ತಮ್ಮ ಅಧಿಕಾರ ವರ್ಗವನ್ನು ಆಗಾಗ ಎಚ್ಚರಿಸುತ್ತಲೇ ಇದ್ದರು ಜನತೆಯ ಮನ ನೋಯದಂತೆ ಸೌಜನ್ಯದಿಂದ ವರ್ತಿಸಿ ಎಂದು. ಆ ವಿಚಾರದಲ್ಲಿ ತಾವಂತೂ ಸರಿಯೇ ಸರಿ. ಒಬ್ಬೊಬ್ಬ ಮಂತ್ರಿ ಅಥವಾ ಅಧಿಕಾರಿ ತನ್ನ ಅಧಿಕಾರಾವಧಿಯಲ್ಲಿ ಒಂದೊಂದು ಗ್ರಾಮವನ್ನು ಉದ್ಧಾರ ಮಾಡುತ್ತಾ ಬಂದರೂ ಸಾಕು, ಕೇವಲ ಹತ್ತು ವರ್ಷಗಳಲ್ಲಿ ಭಾರತ ರಾಮರಾಜ್ಯವಾಗುತ್ತದೆ ಎಂದು ಹೇಳುತ್ತಿದ್ದರು. 'ಗ್ರಾಮೀಣ ಪ್ರದೇಶದ ಪ್ರತಿಯೊಂದು ಕುಟುಂಬಕ್ಕೂ ಒಂದೊಂದು ಮನೆ ಇರಬೇಕು. ಊರಿಗೆ ದಾರಿ, ದಾರಿಗೆ ಬೆಳಕು, ಕುಡಿಯಲು ನೀರು, ಕಲಿಯಲು ಶಾಲೆ, ಜ್ಞಾನಕ್ಕೆ ಒಂದು ಗ್ರಂಥ ಭಂಡಾರ, ಆರೋಗ್ಯಕ್ಕೆ ಒಂದು ಆಸ್ಪತ್ರೆ, ಸಂಚಾರಕ್ಕೆ ಯೋಗ್ಯ ಸೌಲಭ್ಯ, ರೈತನ ಬೆವರಿಗೆ ತಕ್ಕ ಬೆಲೆ ದೊರೆಯುವಂತಹ ವ್ಯವಸ್ಥೆ—ಇವು ಒಂದು ಹಳ್ಳಿಯು ಬಯಸುವ ಮೂಲಭೂತ ಅಗತ್ಯಗಳು. ಪ್ರತಿಹಳ್ಳಿಗೂ ಇವುಗಳ ಪೂರೈಕೆ ಸಮಂಜಸವಾಗಿ ಆಗಬೇಕು. ಹಳ್ಳಿಯಿಂದ ದಿಳ್ಳಿ; ಹಳ್ಳಿಯಿಂದಲೇ

ದಿಳ್ಳಿಗೆ ಬೆಳಕು. ಆ ಕಾರಣ ನಮ್ಮ ಗ್ರಾಮಗಳು ಚೆನ್ನಾಗಿ ಬೆಳೆಯಬೇಕು, ಸ್ವಯಂಪೂರ್ಣವಾಗಬೇಕು. ಅಂತಾಗಬೇಕಾದರೆ ಗ್ರಾಮೀಣ ಆಡಳಿತದ ಒಡೆತನ ಗ್ರಾಮೀಣ ಜನತೆಯ ಕೈಗೆ ಹೋಗಬೇಕು. ಐದು ಲಕ್ಷ ಹಳ್ಳಿಗಳ ಯೋಗಕ್ಷೇಮವನ್ನು ದಿಲ್ಲಿ, ಬೆಂಗಳೂರು ನೋಡಿಕೊಳ್ಳಲು ಸಾಧ್ಯವೇ ಇಲ್ಲ. ಪ್ರತಿಹಳ್ಳಿಯೂ ತನ್ನ ಕ್ಷೇಮಾಭಿವೃದ್ಧಿಯನ್ನು ತಾನೇ ನೋಡಿಕೊಳ್ಳುವಂತಾಗಬೇಕು. ಇದು ನನ್ನ ದೃಢ ಅಭಿಪ್ರಾಯ' ಎನ್ನುತ್ತಿದ್ದರು.

ಮೇಲಿನವುಗಳಲ್ಲಿ ಕೆಲವು ಅಂಶಗಳನ್ನು ಕೊಂಡಜ್ಜಿಯವರು ತಮ್ಮ ಜನಸ್ಥಳವಾದ ಕೊಂಡಜ್ಜಿಯಲ್ಲಿ ಮಾಡಿತೋರಿಸಿದರು. ಅಲ್ಲಿದ್ದ ೩೦ ಎಕರೆ ಸರ್ಕಾರಿ ಜಮೀನನ್ನು ಸರ್ಕಾರದಿಂದ ಪಡೆದು, ಅದನ್ನು ಸೈಟುಗಳಾಗಿ ವಿಂಗಡಿಸಿ, ಒಂದು ನೂರು ಸೈಟುಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಮೀಸಲಿಟ್ಟು, ಉಳಿದುವನ್ನು ಹಿಂದುಳಿದ ಜನಾಂಗದವರು ಮತ್ತಿತರ ಕೋಮಿನವರು, ಕೃಷಿಕರು ಮೊದಲಾದವರಿಗೆ ಹಂಚಿಕೊಟ್ಟರು. ತಮ್ಮ ಹಳ್ಳಿಗೆ ಎಲ್ಲಿಂದಲೋ ಬರುವ ಶಾಲಾ ಉಪಾಧ್ಯಾಯರುಗಳಿಗೆ ಮತ್ತು ಆಸ್ಪತ್ರೆ ಸಿಬ್ಬಂದಿ ವರ್ಗದವರಿಗೆ ಪ್ರತ್ಯೇಕ ವಸತಿ ಸೌಕರ್ಯವನ್ನು ಮಾಡಿಕೊಟ್ಟರು. ಕೇವಲ ಕಾಡುಮೇಡಾಗಿದ್ದ ೮೦ ಎಕರೆ ಗುಡ್ಡವನ್ನು ಕಡಿದು, ಅಚ್ಚುಕಟ್ಟು ಮಾಡಿಸಿ, ಅಲ್ಲಿ ಸ್ಕೌಟ್ ಕೇಂದ್ರ ಸ್ಥಾಪಿಸಿದರು. ಇನ್ನೂ ಅನೇಕ ಉಪಯುಕ್ತ ಕಾರ್ಯಗಳನ್ನು ಮಾಡಿ ಊರನ್ನು ಉದ್ಧಾರ ಮಾಡಿದರು. "ಸ್ವಗ್ರಾಮದ ಸೇವೆ ಮಾಡದವನಿಗೆ ದೇಶ ಸೇವೆ ಮಾಡುವ ಅಧಿಕಾರವಿಲ್ಲ" ಎಂಬ ಮಾರ್ಕಿಸ್ಸ್ ಆಫ್ ಡಫರಿನ್‌ನ ಧ್ಯೇಯವಾಕ್ಯಕ್ಕೆ ಕೊಂಡಜ್ಜಿಯವರು ಕೊಂಡಜ್ಜಿಗೆ ಮಾಡಿದ ಸೇವೆ ಪ್ರತ್ಯಕ್ಷ ಪ್ರಾಯೋಗಿಕ ನಿದರ್ಶನ.

ಕೊಂಡಜ್ಜಿಯವರಿಗೆ ಗ್ರಾಮೀಣ ಪ್ರದೇಶದ ಅಭಿವೃದ್ಧಿಯ ಬಗೆಗೆ ವಿಶೇಷ ಆಸಕ್ತಿ. ಗ್ರಾಮೀಣ ಜನತೆಯ ಬಗೆಗೂ ತುಂಬಾ ಪ್ರೀತಿ ಮತ್ತು ಗೌರವ. ಅವರ ಸೇವೆ ಎಂದರೆ ಸಾಕು ಟೊಂಕ ಕಟ್ಟಿ ನಿಲ್ಲುತ್ತಿದ್ದರು. ಅದು ಅವರಿಗೆ ಪ್ರಿಯವಾದ ಕಾಯಕ. ಅದರಲ್ಲಿ ಅವರಿಗೆ ಬೇಸರ ಇಲ್ಲ; ಸುಸ್ತು ಆಯಾಸಗಳಾವೂ ಇಲ್ಲ. ಅಷ್ಟು ಪ್ರೀತಿ, ಅಷ್ಟು ಉತ್ಸಾಹ. ಪ್ರೀತಿ ಜಗತ್ತನ್ನು ಗೆಲ್ಲುತ್ತದೆ ಆದರೆ ದ್ವೇಷ ದ್ವೇಷದ ಮರಿ ಹಾಕಿ ಉಭಯ ನಾಶಕ್ಕೆ ಕಾರಣವಾಗುತ್ತದೆ. ಬೆಂಕಿಯಿಂದ ಬೆಂಕಿಯನ್ನು ಆರಿಸಲು ಸಾಧ್ಯವಿಲ್ಲ. ಅದಕ್ಕೆ ತಂಪಿನ ನೀರೇ ಬೇಕು. ಹಾಗೆ ದ್ವೇಷದಿಂದ ದ್ವೇಷವನ್ನು ಉಪಶಮನಗೊಳಿಸಲು ಸಾಧ್ಯವಿಲ್ಲ. ಅದಕ್ಕೆ ಅಕ್ಕರೆಯ ಅಮೃತವೇ ಬೇಕು. ಆದರೆ ದ್ವೇಷದಿಂದ, ವೈರತ್ವದಿಂದ ಅಥವಾ ಕೋಪದಿಂದ ಸಾಧಿಸಲಾಗದ್ದನ್ನು ಪ್ರೀತಿಯಿಂದ, ಮಮತೆ ವಿಶ್ವಾಸಗಳಿಂದ ಸಾಧಿಸಬಹುದು. ಮನಸ್ಸುಗಳನ್ನು ಗೆಲ್ಲಬಹುದು, ಶಾಂತಿ ನೆಲೆಸುವಂತೆ ಮಾಡಬಹುದು ಎಂಬುದು ಕೊಂಡಜ್ಜಿಯವರ ಬಲವಾದ ನಂಬಿಕೆ. ಹಳ್ಳಿಗರಲ್ಲಿ ದ್ವೇಷಾಸೂಯೆ ಗಳಲ್ಲದೆ, ಅವರ ನೈತಿಕ ಮಟ್ಟ ಇಳಿಯುತ್ತಿದ್ದುದನ್ನೂ ಸೂಕ್ಷ್ಮಮತಿ ಶ್ರೀ ಕೊಂಡಜ್ಜಿ ಯವರು ಗಮನಿಸಿ, ತಮ್ಮ ಗ್ರಾಮದವರ ಮನಸ್ಸನ್ನಷ್ಟನ್ನಾದರೂ ತಿದ್ದಲು ಯತ್ನಿಸಿ, ಸಾಕಷ್ಟು ಸಫಲರಾದರು.

ಕೊಂಡಜ್ಜಿಯವರು ಉಪಸಚಿವರಾಗಿದ್ದಾಗ ಪ್ರತಿಗ್ರಾಮಕ್ಕೂ ಒಂದೊಂದು ಸೇವಾಸಹಕಾರ ಸಂಘ ಸ್ಥಾಪಿತವಾಗಬೇಕು ಎಂಬ ಕೇಂದ್ರ ಸರ್ಕಾರದ ಯೋಜನೆಯನ್ನು ಅತ್ಯಂತ ಯಶಸ್ವಿಯಾಗಿ

ನೆರವೇರಿಸಿದರು. ಸೇವಾ ಸಹಕಾರ ಸಂಘಗಳು ಚುರುಕಿನಿಂದ ಕೆಲಸ ಮಾಡಲು ಪ್ರೋತ್ಸಾಹಿಸಿದರು. ಅವು ಕ್ರಮ ತಪ್ಪದಂತೆ ನೋಡಿಕೊಳ್ಳಲು ಮೇಲ್ವಿಚಾರಣೆ ಮತ್ತು ತಪಾಸಣೆಯ ವ್ಯವಸ್ಥೆ ಮಾಡಿ ಸದಾ ಜಾಗರೂಕತೆಯಿಂದ ಜನತೆಯ ಕ್ಷೇಮದ ಬಗ್ಗೆ ನಿಗಾ ವಹಿಸುವಂತೆ ಎಚ್ಚರಿಕೆ ನೀಡಿದರು. ಹಳ್ಳಿಗಳಲ್ಲಿ ಅಲ್ಲಲ್ಲಿ ಉಗ್ರಾಣಗಳು ನಿರ್ಮಾಣವಾದವು. ಪ್ರತಿಗ್ರಾಮವೂ ಸ್ವಾವಲಂಬಿಯಾಗಬೇಕು, ಸ್ವಯಂ ತೃಪ್ತವಾಗಬೇಕು ಎಂಬ ಮಹದಾಸೆ ಅವರದಾಗಿತ್ತು. ಇದು ಅವರ ಗ್ರಾಮಕ್ಕೆ ಮಾತ್ರ ಸೀಮಿತವಾಗಿರಲಿಲ್ಲ, ಕರ್ನಾಟಕದ ಎಲ್ಲೆಡೆಯನ್ನೂ ಒಳಗೊಂಡಿತ್ತು. ಅದರ ಪ್ರಯೋಗ ತಮ್ಮ ಹಳ್ಳಿಯಲ್ಲಿ, ತಮ್ಮ ಜಿಲ್ಲೆಯಾದ ಚಿತ್ರದುರ್ಗದಲ್ಲಿ ನಡೆಯಿತು. ತಮ್ಮ ಜಿಲ್ಲೆಯಾದ್ಯಂತ ವಿದ್ಯಾಭಿವೃದ್ಧಿಗೆ ಕೊಂಡಜ್ಜಿ ಕಾರಣರಾದರು. ಗ್ರಾಮಾಂತರ ಪ್ರದೇಶಗಳಲ್ಲಿ ಕೆರೆಗಳ ದುರಸ್ತಿ, ರಸ್ತೆಗಳ ನಿರ್ಮಾಣ ಮೊದಲಾದ ಜನೋಪಯೋಗಿ ಕಾರ್ಯಗಳು ನೆರವೇರಿದವು. ಜೊತೆಗೆ ಶ್ರೀಯುತರು ಕೊಂಡಜ್ಜಿಯಲ್ಲಿ ಕುಷ್ಠರೋಗ ನಿವಾರಣಾ ಕೇಂದ್ರದ ಸ್ಥಾಪನೆಗೆ ನಾಂದಿ ಹಾಡಿದರು.

ಇಂತೆಲ್ಲ ಜನಹಿತ ಸಾಧಿಸಬಲ್ಲ ಕಾರ್ಯಗಳೆಂದರೆ ಕೊಂಡಜ್ಜಿಯವರಿಗೆ ಅಪರ ವಯಸ್ಸಿನಲ್ಲೂ ಹದಿನಾರರ ಪ್ರಾಯ ತುಂಬಿ ಬರುತ್ತಿತ್ತು.

**ಶುದ್ಧ ಮಾನವತಾವಾದಿ :**

ಮಾನವೀಯತೆ ಎಂಬುದು ಅಂಗಡಿಯಲ್ಲಿ ಸಿಗುವ ವಸ್ತುವಲ್ಲ. ಅದನ್ನು ವ್ಯಕ್ತಿ ತಾನೇ ಗಳಿಸಿಕೊಳ್ಳಬೇಕು, ಬೆಳೆಸಿಕೊಳ್ಳಬೇಕು. ಮನುಷ್ಯತ್ವ ಹಾಳಾದರೆ ಮನುಕುಲದ ವಿನಾಶ ಕಟ್ಟಿಟ್ಟ ಬುತ್ತಿ. ಇಂದು ಮನುಷ್ಯ ಮನುಷ್ಯನ ನಡುವಣ ಸೌಹಾರ್ದದ ಸೂತ್ರವೇ ಹರಿದುಹೋಗಿದೆ. ನಾವೆಲ್ಲರೂ ಒಂದೊಂದು ದ್ವೀಪವಾಗುತ್ತಿದ್ದೇವೆ. ಇಂತಹ ಸಂಕಷ್ಟ ಸಮಯದಲ್ಲಿ ಕೊಂಡಜ್ಜಿಯವರ ನಡೆನುಡಿಗಳು ನಮಗೆ ದಾರಿದೀಪ. ಅವರು ಬೆಳಗಿದ ಮಾನವೀಯ ಮೌಲ್ಯವನ್ನು ಕುರಿತು ಒಂದು ನಿದರ್ಶನವನ್ನು ಈಗಾಗಲೆ ಕೊಟ್ಟಾಗಿದೆ. ಅದು ಗೊಲ್ಲರು ತಮ್ಮ ಹೆಂಗಸರಿಗೆ ಹೆರಿಗೆಯಾದರೆ ಹೇಗೆ ಬಾಣಂತಿಯರನ್ನು ಶುಶ್ರೂಷೆ ಮಾಡುತ್ತಿದ್ದರು ಎಂಬುದನ್ನು, ಅವರ ಮೌಢ್ಯವನ್ನು ತಿಳಿಯಹೇಳಿ, ತಿದ್ದಿ ಗೊಲ್ಲರ ಬಾಣಂತಿಯರಿಗಾಗಿ ಒಂದು ಪ್ರತ್ಯೇಕ ಬಾಣಂತಿ ಮನೆಯನ್ನು ಕೊಂಡಜ್ಜಿಯವರು ಕಟ್ಟಿಸಿಕೊಟ್ಟಿದ್ದನ್ನೂ ಈಗಾಗಲೆ ನೋಡಿದ್ದೇವೆ. ಶ್ರೀಯುತರು ಅದೇ ರೀತಿಯಲ್ಲಿ ಮೆರೆದ ಮಾನವೀಯತೆಯನ್ನು ಒಂದೆರಡು ನಿದರ್ಶನಗಳ ಮೂಲಕ ಪ್ರದರ್ಶಿಸಬಹುದು:

ಕೊಂಡಜ್ಜಿಯವರ ಒಬ್ಬ ಸೊಸೆ ಪದವೀಧರೆ. ಆಕೆ ಅವರ ಮನೆಗೆ ಸೊಸೆಯಾಗಿ ಬರುವವರೆಗೂ ತನ್ನ ತೌರಿನಲ್ಲಿ ಅಡುಗೆ ಮನೆಗೆ ಕಾಲಿಟ್ಟವರೇ ಅಲ್ಲ. ಒಂದು ದಿನ ಆಕೆಯ ಗಂಡ ಮತ್ತು ಕೊಂಡಜ್ಜಿಯವರು ಊಟಕ್ಕೆ ಕುಳಿತಾಗ ನಡೆದ ಪ್ರಸಂಗ ಹೀಗಿದೆ: ಕೊಂಡಜ್ಜಿಯವರು ಮೊದಲೇ ಊಟಕ್ಕೆ ಕುಳಿತದ್ದರಿಂದ ಅವರ ಊಟ ಮುಗಿಯುತ್ತಾ ಬಂದಿತ್ತು. ಆ ವೇಳೆಗೆ ಬಂದ ಶ್ರೀಯುತರ ಚಿರಂಜೀವಿ ಅನ್ನ ಕಲಸಿ ಮೊದಲ ತುತ್ತು ಬಾಯಿಗಿಟ್ಟ. ಸಪ್ಪೆ ಸಪ್ಪೆ! 'ಇದೇನು ಉಪ್ಪಿಲ್ಲದೆ ಸಾರು ಮಾಡಿದ್ದೀಯಲ್ಲ!' ಎಂದು ಹೆಂಡತಿಯ ಮೇಲೆ ರೇಗಿದ. ಕೊಂಡಜ್ಜಿಯವರು ಸಮಾಧಾನದಿಂದ, 'ಪಾಪ ಅಡಿಗೆ ಮನೆಗೆ ಹೊಸಬಳು. ಅನುಭವ ಇಲ್ಲ. ಉಪ್ಪು ಹಾಕುವುದನ್ನು ಮರೆತಿರಬಹುದು.

ಅದೇ ಒಂದು ದೊಡ್ಡ ಅಪರಾಧವೆ. ಮಗನೆ, ಉಪ್ಪನ್ನು ಹೆಚ್ಚು ತಿನ್ನಲೇಬಾರದು. ಆರೋಗ್ಯಕ್ಕೆ ಒಳ್ಳೆಯದಲ್ಲ ಅಂತ ಡಾಕ್ಟರು ಹೇಳ್ತಾ ಇರ್‍ತಾರೆ! ನಾವು ಅದನ್ನು ಅನುಸರಿಸಬೇಡವೆ! ಇಷ್ಟಕ್ಕೂ ಸಾರೇನು ಚೆನ್ನಾಗಿಲ್ವೆ? ಉಪ್ಪಿಲ್ಲದಿದ್ದರೂ ರುಚಿ ಯಾಗಿಯೇ ಇದೆ. ಸುಮ್ಮನೆ ಉಂಡೇಳು ಅಂದರಂತೆ.

ಇದು ನಿಜವಾದ ಸಂಸ್ಕೃತಿ, ಸಜ್ಜನಿಕೆ. ತಪ್ಪಿತಸ್ಥರನ್ನು ಬೈದರೆ ಬರುವ ಲಾಭವಾದರೂ ಏನು? ಇನ್ನೊಬ್ಬರನ್ನು ದೈಹಿಕವಾಗಿ ಅಲ್ಲ, ಮಾನಸಿಕವಾಗಿಯೂ ನೋಯಿಸಬಾರದು ಎಂಬುದು 'ಗಾಂಧೀಸಂಸ್ಕೃತಿ'. ಅದನ್ನು ಮೆರೆದವರು ಕೊಂಡಜ್ಜಿ.

### ಮತ್ತೊಂದು ನಿದರ್ಶನ :

ರಾಜ್ಯದ ಉಪಸಚಿವರಾಗಿದ್ದಾಗ ಕೊಂಡಜ್ಜಿಯವರು ಒಮ್ಮೆ ಚಿತ್ರದುರ್ಗಕ್ಕೆ ಭೇಟಿ ಕೊಟ್ಟಿದ್ದರು. ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಎಲ್ಲ ಉನ್ನತಾಧಿಕಾರಿಗಳೂ ಹಾಜರಿದ್ದರು. ಆದರೆ ಜಿಲ್ಲಾ ಸರ್ಜನ್ ಮಾತ್ರ ಬಂದಿರಲಿಲ್ಲ. ಅವರೇಕೆ ಬಂದಿಲ್ಲ ಎಂದು ಶ್ರೀಯುತರು ವಿಚಾರಿಸಿದಾಗ, ಅವರಿಗೆ ತಿಳಿಯಿತು ಡಾಕ್ಟರಿಗೆ ಮೈ ಹುಷಾರಿಲ್ಲ, ಮಲಗಿಬಿಟ್ಟಿದ್ದಾರೆ ಎಂದು. ಕೊಂಡಜ್ಜಿಯವರು ಸಭೆ ಮುಗಿದ ಕೂಡಲೇ ತಮ್ಮೆಲ್ಲ ಕಾರ್ಯಕ್ರಮಗಳನ್ನೂ ಬದಿಗೊತ್ತಿ, ನೇರವಾಗಿ ಅಸ್ವಸ್ಥರಾಗಿದ್ದ ವೈದ್ಯಾಧಿಕಾರಿಗಳ ಮನೆಗೆ ಧಾವಿಸಿ, ಅವರ ಆರೋಗ್ಯ ವಿಚಾರಿಸಿ, 'ಶೀಘ್ರ ಗುಣಮುಖರಾಗಿ' ಎಂದು ಹೇಳಿ ಸಮಾಧಾನಪಡಿಸಿ ಬಂದರಂತೆ!

ತಾನು ಮಂತ್ರಿ ಎಂಬ ಅಹಂಭಾವ ಮೆರೆಯದ ಅವರ ನಿಗರ್ವಿತನ ಹಾಗೂ ರೋಗದಿಂದ ನರಳುವವರಿಗೆ ಬಂದು ಹೇಳುವ ಸಾಂತ್ವನದ ನುಡಿ-ಇವು ಔಷಧಿಗಿಂತಲೂ ಹೆಚ್ಚು ಪರಿಣಾಮ ಬೀರುತ್ತವೆ ಎಂಬ ಮಾನವೀಯ ಗುಣ ಇಂಥೆಡೆಗಳಲ್ಲಿ ಎದ್ದುಕಾಣುತ್ತವೆ.

ಶಿಕ್ಷಣ ತಜ್ಞರೂ, ಕರ್ನಾಟಕ ಕಾಲೇಜು ಶಿಕ್ಷಣ ಇಲಾಖೆಯ ನಿರ್ದೇಶಕರೂ ಆಗಿದ್ದ ಪ್ರೊ.ಎಸ್.ಬಿ. ಜೋಂಡಾಡೆಯವರು ತಮ್ಮ ಬದುಕಿನಲ್ಲಿ ಶ್ರೀಯುತ ಕೊಂಡಜ್ಜಿಯವರಿಂದ ಪಡೆದ ಉಪಕಾರ ಅವರ ಬಾಳಿನ ಅವಿಸ್ಮರಣೀಯ ಸಂದರ್ಭ. ಅದನ್ನು ಅವರ ಬಾಯಿಂದಲೇ ಕೇಳುವುದು ಚೆನ್ನ! ಕೇಳಿ:

ನಾನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಪ್ರಾಂಶುಪಾಲನಾಗಿದ್ದಾಗ, ಶ್ರೀಯುತರಾದ ಕೊಂಡಜ್ಜಿ ಬಸಪ್ಪನವರು ಮೈಸೂರು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿದ್ದರು. ಒಮ್ಮೆ ಅವರ ಆಕಸ್ಮಿಕ ಭೇಟಿ ನನಗಾಯಿತು. ಆಗ ನಮ್ಮ ಮನೆ ಮಂದಿಯ ಯೋಗಕ್ಷೇಮ ವಿಚಾರಿಸಿದರು. ನನಗೆ ಕಣ್ಣೀರು ಬಂತು. ನನ್ನ ಒಬ್ಬನೇ ಮಗ ಹನ್ನೊಂದು ವರ್ಷದವನಿಗೆ ಮೂರ್ಛೆರೋಗ ಬರುತ್ತಿತ್ತು. ಅದನ್ನು ಆತ್ಮೀಯರಾದ ಕೊಂಡಜ್ಜಿಯವರಿಗೆ ನೊಂದುಕೊಂಡೇ ಹೇಳಿದೆ. ಕೂಡಲೇ ಅವರು, ಆ ವಿಚಾರ ನನಗೆ ಗೊತ್ತಿತ್ತು. ಅದಕ್ಕೆ ಈ ವಿಚಾರ ತೆಗೆದೆ. ನನಗೆ ಗೊತ್ತಿರೊ ಒಬ್ಬರು ಶ್ರೀ ಎಸ್.ಮಂಜುನಾಥ್ ಎಂಬುವರು ಮೈಸೂರಿನಲ್ಲಿ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಉಪಪ್ರಾಧ್ಯಾಪಕರಾಗಿದ್ದಾರೆ. ಅವರು ವೈದ್ಯರಲ್ಲ. ಆದರೆ ಯಾವನೋ ಒಬ್ಬ ಸಾಧುವಿನಿಂದ

ಮೂರ್ಛೆರೋಗ ನಿವಾರಣೆಗೆ ಒಂದು ಉತ್ತಮ ಔಷಧವನ್ನು ತಿಳಿದಿದ್ದಾರೆ. ಅನೇಕರ ಮೇಲೆ ಅದನ್ನು ಪ್ರಯೋಗ ಮಾಡಿ ಗುಣಪಡಿಸಿದ್ದಾರೆ. ನೀವು ಒಮ್ಮೆ ಹೋಗಿ ನೋಡಿ ಅಂದರು. ಆಗ ನನಗನ್ನಿಸಿತು ಭಗವಂತ ನೇರವಾಗಿ ನಮ್ಮೆಡೆಗೆ ಬರುವುದಿಲ್ಲ, ಅವನು ಮನುಷ್ಯನ ರೂಪದಲ್ಲಿ ಬಂದು ದಾರಿ ತೋರಿಸ್ತಾನೆ ಎಂದು. ನಾನು ಮೈಸೂರಿಗೆ ಹೋದೆ. ಮಂಜುನಾಥ್‌ರವರನ್ನು ಪ್ರಾರ್ಥಿಸಿಕೊಂಡೆ. ಶ್ರೀಯುತರು ಬೆಂಗಳೂರಿಗೆ ಬಂದರು. ಚಿಕಿತ್ಸೆ ಶುರು ಮಾಡಿದರು. ನನಗಾಗಿ ಒಂದು ಆಶ್ಚರ್ಯ ಕಾದಿತ್ತು. ಹತ್ತು ವರ್ಷಗಳವರೆಗೆ ಸತತವಾಗಿ ಅಲೋಪತಿ, ಹೋಮಿಯೋಪತಿ, ಆಯುರ್ವೇದ, ಮನೋವಿಜ್ಞಾನ ಥೆರಪಿ--ಎಲ್ಲ ಬಗೆಯ ಚಿಕಿತ್ಸೆ ಮಾಡಿಸಿದರೂ ಮಣಿಯದಿದ್ದ ಕಾಯಿಲೆ ಕೇವಲ ಒಂದೇ ಒಂದು ತಿಂಗಳಲ್ಲಿ ಸಂಪೂರ್ಣ ಗುಣವಾಯಿತು. ಈ ವಿಷಯವನ್ನು ಶ್ರೀ ಕೊಂಡಜ್ಜಿಯವರಿಗೆ ತಿಳಿಸಿದೆ. ಅವರು ಸಂತೋಷದಿಂದ ಹಿಗ್ಗಿದರು. ನಾನು ನನ್ನ ಬಗ್ಗೆ ಮತ್ತು ನನ್ನ ಏಕಮಾತ್ರ ಪುತ್ರನ ಭವಿಷ್ಯದ ಬಗ್ಗೆ ಶ್ರೀ ಕೊಂಡಜ್ಜಿಯವರು ಇಟ್ಟುಕೊಂಡಿದ್ದ ಪ್ರೀತಿವಾತ್ಸಲ್ಯಗಳಿಗೆ ಶರಣಾದೆ ನನ್ನ ಎದೆ ತುಂಬಿದ ಧನ್ಯವಾದಗಳನ್ನು ಅರ್ಪಿಸಿದೆ.

ಈ ರೀತಿ ಕಷ್ಟದಲ್ಲಿದ್ದವರಿಗೆ ನೆರವಾಗುವ, ನೊಂದೆದೆಗೆ ಸುಧೆಯಾಗುವ ಮಾನವೀಯ ಗುಣ ಕೊಂಡಜ್ಜಿಯವರಲ್ಲಿ ಮನೆ ಮಾಡಿಕೊಂಡಿತ್ತು.

**ಕಡೆಯದಾಗಿ ಒಂದು ನಿದರ್ಶನ :**

ಸೆಪ್ಟೆಂಬರ್ ೧೯೭೪ ದಾವಣಗೆರೆ ರಾಜ್ಯಪಾಲರ ಭೇಟಿ ಇತ್ತು. ಹಿಂದಿನ ದಿನ ಸಂಜೆ ಬೆಂಗಳೂರಿಂದ ಅನೇಕರು ದೊಡ್ಡ ದೊಡ್ಡ ಅಧಿಕಾರಿಗಳು ದಾವಣಗೆರೆಯ ಪ್ರವಾಸಿ ಮಂದಿರದ ಮುಂದೆ ಬಂದಿಳಿದರು. ವಸತಿಸೌಕರ್ಯ ಸಮಂಜಸವಾಗಿಲ್ಲವೆಂದು ಗೊಣಗಿಕೊಳ್ಳುತ್ತಿದ್ದರು. ಇದೆಲ್ಲವನ್ನು ಕೇಳಿದ ಕೊಂಡಜ್ಜಿಯವರು ನಯವಾಗಿ ಮಾತಾಡಿ, ಕೊಠಡಿಗಳು ಕಡಿಮೆ ಇವೆ ಇದ್ದದರಲ್ಲೇ ನಾವೆಲ್ಲರೂ ಅನುಸರಿಸಿ ಕೊಳ್ಳೋಣ. ಬನ್ನಿ ಎಂದು ಕರೆದು ಅವರವರಿಗೆ ವ್ಯವಸ್ಥೆ ಮಾಡಿ, ಅವರ ಲಗ್ಗೇಜುಗಳನ್ನು ತಾವೇ ತೆಗೆದುಕೊಂಡು ಹೋಗಿ ಅವರವರ ಕೊಠಡಿಗಳಲ್ಲಿಟ್ಟರು. ಬೆಳಗ್ಗೆ ಅವರೇ ಕೊಂಡಜ್ಜಿಯವರು ಎಂದು ಗೊತ್ತಾದ ಮೇಲೆ ಬೆಂಗಳೂರು ಅಧಿಕಾರಿಗಳು ತಮಗೆ ತಾವೇ ನಾಚಿಕೊಂಡರು.

**ಅಂದೇ ಸಂಜೆ ನಡೆದ ಒಂದು ಪುಟ್ಟ ಘಟನೆ:**

ಓರ್ವ ಸ್ಥಳೀಯ ಶ್ರೀಮಂತರು ಕೊಂಡಜ್ಜಿಯವರನ್ನು 'ಈ ರಾತ್ರಿ ನಮ್ಮ ಮನೆಗೆ ಊಟಕ್ಕೆ ಬನ್ನಿ' ಎಂದು ಕರೆದರು. ಕೊಂಡಜ್ಜಿಯವರು ತಮ್ಮ ಜೊತೆಯಲ್ಲಿದ್ದು ಸಮಾರಂಭಕ್ಕೆ ಸಜ್ಜುಗೊಳಿಸುತ್ತಿದ್ದ ಹಳ್ಳಿಯಿಂದ ಬಂದಿದ್ದ ತಮ್ಮ ಗ್ರಾಮೀಣ ಮಿತ್ರರನ್ನು ಬಿಟ್ಟು ತಾವೊಬ್ಬರೇ ಊಟಕ್ಕೆ ಹೋಗಲು ಇಷ್ಟಪಡದೆ, 'ಇವರೆಲ್ಲರೂ ಇದ್ದಾರೆ. ಇವರನ್ನು ಬಿಟ್ಟು ನಾನೊಬ್ಬನೇ ಬರುವುದು...!'

ಇದು ಮಾನವೀಯತೆ. ತನ್ನಂತೆ ಪರರ ಕಾಣುವ ಸದ್ಬುದ್ಧಿ, ಅವರ ಬಗೆಗಿದ್ದ ಸದ್ಭಾವನೆ.

ಹೀಗೆ ಕೊಂಡಜ್ಜಿಯವರು ಹಲವು ಸದ್ಗುಣಗಳ ಗಣಿ!

## ಸಮಯ ಪಾಲನೆಯ ಗಡಿಯಾರ !

ಕಾಲ ಯಾರಿಗೂ ಕಾಯುವುದಿಲ್ಲ. ಅದು ನಿರಂತರಗಾಮಿ. ಇಂದು ಅದಕ್ಕೆ ಜಾಗತಿಕ ವರ್ತುಲದಲ್ಲಿ ತುಂಬಾ ಮಹತ್ವವಿದೆ, ತುಂಬಾ ಮೌಲಿಕವಾದುದೂ ಅಹುದು. ಪಾಶ್ಚಾತ್ಯ ಪ್ರಪಂಚವಂತೂ ನಾಗಾಲೋಟದಲ್ಲಿ ಓಡುತ್ತಿದೆ. ಭಾರತ ಆ ಓಟದ ಸ್ಪರ್ಧೆಯಲ್ಲಿ ತುಂಬಾ ಹಿಂದು. ಸಮಯ ಪಾಲನೆಯ ನಿಷ್ಠೆ ಇಲ್ಲ. ಸಮಯಕ್ಕೆ ಸರಿಯಾಗಿ ಗೊತ್ತುಪಡಿಸಿದೆಡೆಗೆ ಹೋಗಬೇಕು, ತನಗೆ ವಹಿಸಿಕೊಟ್ಟ ಕೆಲಸವನ್ನು ನಿಗದಿತ ಅವಧಿಯಲ್ಲಿ ಮುಗಿಸಬೇಕು ಎಂಬ ಪ್ರಜ್ಞೆ ಭಾರತೀಯನಾದವನಿಗೆ ಅಷ್ಟಾಗಿ ಇಲ್ಲ.

ಅಮೇರಿಕೆ ಮೊದಲಾದೆಡೆಗಳಲ್ಲಿ ದೂರವನ್ನು ಕಾಲದಿಂದಲೇ ಅಳೆಯುತ್ತಾರೆ. ಈ ನಗರದಿಂದ ಆ ನಗರಕ್ಕೆ ಎಷ್ಟು ದೂರ ಎಂದು ಯಾರನ್ನಾದರೂ ಕೇಳಿದರೆ, ಅವರು ಇಷ್ಟು ಮೈಲಿ (ಅಲ್ಲಿರುವುದು ಮೈಲಿ ಅಳತೆ ಲೆಕ್ಕ) ಎಂದು ಹೇಳುವುದಿಲ್ಲ, ೨ ಗಂಟೆ ಪ್ರಯಾಣ ೪ ಗಂಟೆ ಪ್ರಯಾಣ ಎಂದೆಲ್ಲ ಹೇಳುತ್ತಾರೆ. ಎಲ್ಲವನ್ನೂ ಕಾಲ ಪ್ರಮಾಣ ದಲ್ಲಿ ಅಳೆಯುತ್ತಾರೆ. ಯಾವುದಾದರೂ ಸಮಾರಂಭಕ್ಕೆ ಆಹ್ವಾನವಿದ್ದರೆ ಒಂದು ನಿಮಿಷ ಮುಂಚೆಯಾಗಲಿ, ಒಂದು ನಿಮಿಷ ತಡವಾಗಿಯಾಗಲಿ ಹೋಗುವುದಿಲ್ಲ. ಠಾಕೋಠೀಕ್ ಗಡಿಯಾರದ ಗಂಟೆ ಬಡಿದುಕೊಳ್ಳುವ ವೇಳೆಗೆ ಸರಿಯಾಗಿ ಅಲ್ಲಿರುತ್ತಾರೆ.

ಕೊಂಡಜ್ಜಿಯವರು ಒಂದು ತಿರುಗಾಡುವ ಗಡಿಯಾರ! ಸಮಯಪಾಲನೆ, ಅವರಲ್ಲಿದ್ದ ವಿಶಿಷ್ಟ ಗುಣ. ಒಮ್ಮೆ ಹೀಗಾಯಿತು—ರಾಜ್ಯಸಚಿವರಾಗಿದ್ದ ಕೊಂಡಜ್ಜಿ ಯವರು ಬೆಳಗಾವಿಯಿಂದ ಹೊರಟು ದಾವಣಗೆರೆಯ ಒಂದು ಸಮಾರಂಭದಲ್ಲಿ ಭಾಗವಹಿಸಬೇಕಾಗಿತ್ತು. ಸಮಯಕ್ಕೆ ಸರಿಯಾಗಿ ತಮ್ಮ ಪತ್ನೀ ಸಮೇತರಾಗಿ ಹೊರಟರು. ಬೆಳಗಾವಿಯನ್ನು ಬಿಟ್ಟು ಬರುತ್ತಿದ್ದಾಗ ರಾಜ್ಯಸರ್ಕಾರ ಕೊಟ್ಟಿದ್ದ ಕಾರು ಹಾದಿಯ ನಡುವೆ ಕೆಟ್ಟುಹೋಯಿತು. ರಿಪೇರಿಗೆ ಎಷ್ಟು ಸಮಯ ತೆಗೆದುಕೊಳ್ಳಬಹುದು ಕೇಳಿದರು. ಸುಮಾರು ೨೩ ಗಂಟೆಗಳಾಗಬಹುದು ಎಂದು ಬಂತು ಉತ್ತರ. ಆದರೆ ದಾವಣಗೆರೆಯ ಸಮಾರಂಭಕ್ಕೆ ತಡವಾಗುತ್ತದೆಂದು ಲೆಕ್ಕ ಹಾಕಿದ ಕೊಂಡಜ್ಜಿಯವರು, ತಮ್ಮ ಶ್ರೀಮತಿಯವರನ್ನು ಕರೆದುಕೊಂಡು, ಆ ಕಡೆಯಿಂದ ಬರುತ್ತಿದ್ದ ಒಂದು ಲಾರಿ ಹಿಡಿದು, ದಾವಣಗೆರೆಗೆ, ಅಲ್ಲಿನ ಕಾರ್ಯಕ್ರಮ ನಡೆಯುವೆಡೆಗೆ ಸಮಯಕ್ಕೆ ಸರಿಯಾಗಿ ಬಂದಿಳಿದರು. ಎಲ್ಲರಿಗೂ ಆಶ್ಚರ್ಯ; ಆತಂಕ! ಆದರೆ ಕೊಂಡಜ್ಜಿಯವರು ತಮಗಾದ ತೊಂದರೆ, ಮಾನಸಿಕ ಬೇಸರ ಯಾವುದನ್ನೂ ತೋರಗೊಡದೆ, ನಗು ನಗುತ್ತಲೇ ಕಾರು ದಾರಿಯಲ್ಲಿ ಕೆಟ್ಟುಹೋಯಿತು. ನೀವೆಲ್ಲಾ ಕಾಯುತ್ತಿರುತ್ತೀರಿ, ಕಾಯಿಸಬಾರದು ಅಂತಾ ಒಂದು ಲಾರಿ ಹಿಡಕೊಂಡು ಬಂದುಬಿಟ್ಟೆವು!' ಎಂದರು.

ಶ್ರೀಯುತರು ಯಾವುದೇ ಕಾರ್ಯಕ್ರಮಕ್ಕೆ ಒಪ್ಪಿದರೆ, ಆ ವೇಳೆಗೆ ಸರಿಯಾಗಿ ಅಲ್ಲಿ ಹಾಜರ್. ಸರ್ಕಾರಿ ಕಾರ್ಯ ಅಥವಾ ಸರ್ಕಾರಿ ಸಮಾರಂಭ ಇರಲಿ ಅಥವಾ ತಮ್ಮ ಕಚೇರಿಯ ಕೆಲಸವೇ ಇರಲಿ ಕೊಂಡಜ್ಜಿಯವರು ಯಾರನ್ನೂ ಯಾವ ಅಧಿಕಾರಿಯನ್ನೂ ಕಾಯಿಸುವ ಪರಿಪಾಠ ಇಟ್ಟುಕೊಂಡಿರಲಿಲ್ಲ. ಸಮಯಕ್ಕೆ ಅಷ್ಟು ಬೆಲೆ ಕೊಡುತ್ತಿದ್ದರು.

ಇಂತಹ ಸಮಯಪಾಲನೆ ಅವರಿಂದ ಎಲ್ಲರೂ ಕಲಿಯಬೇಕಾದ ಪಾಠ.

## ಒಳ್ಳೆಯ ಸ್ನೇಹಿತ :

ಹೀಗೆಂದವರು 'ಜಾನಪದ ಲೋಕ'ದ ರೂವಾರಿ ಶ್ರೀ ಎಚ್. ಎಲ್. ನಾಗೇಗೌಡರು.

ನಾಗೇಗೌಡರು ಮತ್ತು ಕೊಂಡಜ್ಜಿಯವರು ಪುಣೆಯಲ್ಲಿ ಲಾ ಕಾಲೇಜಿನಲ್ಲಿ ಸಹಪಾಠಿಗಳು. ದುಂಡಪ್ಪನ ಖಾನಾವಳಿಯಲ್ಲಿ ಸಹಭೋಜನ. ಗೌಡರು ಲುಂಗಿ ಸುತ್ತಿಕೊಂಡು ಹೊರಟರೆ, ಕೊಂಡಜ್ಜಿಯವರದು ಶುಭ್ರವಾದ ಬಿಳೀ ಮಲ್ಲಿನ ಕಚ್ಚೆಪಂಚೆ ಉಡುಗೆಯಲ್ಲಿ ನಡೆಯುತ್ತಿದ್ದರು. ಹೀಗೆ ಎರಡು ವರ್ಷ ಸಹಜೀವನ ಪುಣೆಯಲ್ಲಿ ಸಾಗಿತು. ಆ ವೇಳೆಗೆ ಮೊದಲಿದ್ದ ಸ್ನೇಹ ಬರಬರುತ್ತಾ ಸಲುಗೆಯಾಗಿ ಪರಿಣಮಿಸಿತ್ತು. 'ಏನೋ ತಾನೋ' ಸ್ನೇಹಿತರಾಗಿಬಿಟ್ಟಿದ್ದರು. ಯಾವುದೋ ಜನ್ಮದ ಬಾಂಧವ್ಯ, ಈ ಜನ್ಮದಲ್ಲಿ ಸ್ನೇಹಿತರಾಗಿದ್ದಾರೆ ಎಂಬಂತಿದ್ದರು. ಕಾನೂನು ಶಿಕ್ಷಣ ಮುಗಿದ ಮೇಲೆ, ಅವರು ಹಿಡಿದ ಬಾಳ ದಾರಿಗಳು ಬೇರೆ ಬೇರೆ ಆದವು. ಗೌಡರು ತಮ್ಮ ತಂದೆಯವರ ಸಲಹೆಯಂತೆ ರೆವಿನ್ಯೂ ಇಲಾಖೆಯಲ್ಲಿ ಅಮಲ್ದಾರರಾಗಿ ಸೇರಿದರು. ಕೊಂಡಜ್ಜಿಯವರು ವಕೀಲ ವೃತ್ತಿ ಅವಲಂಬಿಸಿದರು. ಇವರು ದಾವಣಗೆರೆ ಯಲ್ಲಿ ವಕೀಲರು, ಅವರು ಅಂದಿನ ಮೈಸೂರು ಸಂಸ್ಥಾನದ ಉತ್ತರದ ಗಡಿ ಪ್ರದೇಶದ ಹರಿಹರದಲ್ಲಿ ಅಮಲ್ದಾರರು.

ಹೀಗಿದ್ದಾಗ, ಚಿತ್ರದುರ್ಗ ಜಿಲ್ಲಾ ಬೋರ್ಡಿಗೆ ಚುನಾವಣೆಗೆ ಸಿದ್ಧತೆಗಳಾಗುತ್ತಿದ್ದವು. ಮತದಾರರ ಪಟ್ಟಿ ತಯಾರಾಯಿತು. ಎಲ್ಲಾ ಗ್ರಾಮಗಳಿಂದಲೂ ಮತದಾರರ ಪಟ್ಟಿಗಳು ಹರಿಹರದ ಅಮಲ್ದಾರರ ಕಚೇರಿಗೆ ಬಂದವು. ಗೌಡರು ಕುತೂಹಲದಿಂದ ಕೊಂಡಜ್ಜಿ ಗ್ರಾಮದ ಮತದಾರರ ಪಟ್ಟಿ ನೋಡಿದರು. ಅದರಲ್ಲಿ ಅವರ ಆಪ್ತ ಗೆಳೆಯ ಕೊಂಡಜ್ಜಿ ಬಸಪ್ಪನವರ ಹೆಸರೇ ಇಲ್ಲ! ಗೌಡರಿಗೆ ಆಶ್ಚರ್ಯವಾಯಿತು. ಪಟ್ಟಿಗೆ ಹೆಸರು ಸೇರಿಸಲು ಇದ್ದ ಕಾಲಾವಕಾಶ ಕೇವಲ ಒಂದೇ ಒಂದು ದಿನ. ಚುನಾವಣೆಯಲ್ಲಿ ಉಮೇದುವಾರನನ್ನು ಆಯ್ಕೆ ಮಾಡುವ ಅರ್ಹತೆ ಇಲ್ಲದಿದ್ದರೂ, ಅಮಲ್ದಾರನಿಗೆ ಬಿಟ್ಟುಹೋದ ಮತದಾರನ ಹೆಸರು ಸೇರಿಸುವ ಅಧಿಕಾರ ಇತ್ತು. ಗೌಡರು ಕೂಡಲೆ ಒಬ್ಬ ಮನುಷ್ಯನಿಗೆ ಸೈಕಲ್ ಕೊಟ್ಟು ದಾವಣಗೆರೆಗೆ ಓಡಿಸಿದರು. ಅಲ್ಲಿಂದ ಕೊಂಡಜ್ಜಿಗೆ ಓಡಿಸಿದರು. ಗ್ರಾಮಾಧಿಕಾರಿಗಳಿಗೆ ಹೇಳಿ ಕೊಂಡಜ್ಜಿ ಬಸಪ್ಪನವರ ಹೆಸರೂ ಮತದಾರರ ಪಟ್ಟಿಯಲ್ಲಿ ಸೇರುವಂತೆ ಮಾಡಿದರು. ಚುನಾವಣೆ ನಡೆಯಿತು. ಕೊಂಡಜ್ಜಿ ಜಿಲ್ಲಾ ಬೋರ್ಡ್ ಅಧ್ಯಕ್ಷರಾದರು. ಅವರ ರಾಜಕೀಯ ಜೀವನಕ್ಕೆ ನಾಗೇಗೌಡರು ನಾಂದಿ ಹಾಡಿದರು. ಯಾವಾಗಲೂ ಕೊಂಡಜ್ಜಿ ಯವರು ಅದನ್ನು ನಗುನಗುತ್ತಲೇ ಸ್ಮರಿಸಿಕೊಳ್ಳುತ್ತಿದ್ದರು.

ಗೌಡರಿಗೆ ಕೊಂಡಜ್ಜಿಯವರ ನಗುಮುಖ ನೋಡುವುದು ತುಂಬಾ ಇಷ್ಟ. ಅದನ್ನು ಭೇಟಿಯಾದಾಗಲೆಲ್ಲಾ ಪಡೆಯುತ್ತಿದ್ದರು. ಹಿಂದೆಯೇ ಹೇಳಿದಂತೆ ಕೊಂಡಜ್ಜಿ ಯವರು ಅಜಾತಶತ್ರು. ಅವರಿಗೆ ಎಲ್ಲರೂ ಮಿತ್ರರು, ಎಲ್ಲರೂ ಬಂಧುಗಳು. ಇನ್ನೊಬ್ಬರ ಏಳಿಗೆಯನ್ನು ಕಂಡು ಕರುಬುವವರಲ್ಲ, ನೋಡಿ ಸಂತೋಷಪಡುವ ಸ್ವಚ್ಛ ಹಾಗೂ ವಿಶಾಲ ಹೃದಯವುಳ್ಳವರು. ಎಲ್ಲರಲ್ಲೂ ಪ್ರೀತಿ ವಾತ್ಸಲ್ಯವಿಟ್ಟಿದ್ದರು, ಎಲ್ಲರ ಪ್ರೀತಿಗೂ ಅವರು ಪಾತ್ರರಾಗಿದ್ದರು.

# ಸ್ಕೌಟ್ ಸಂಸ್ಥೆಯಲ್ಲಿ ತೀವ್ರ ಆಸಕ್ತಿ

ಕೊಂಡಜ್ಜಿಯವರು ದಾವಣಗೆರೆಯಲ್ಲಿ ವಕೀಲರಾಗಿದ್ದಾಗಲೆ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಅವರನ್ನು ಆಕರ್ಷಿಸಿತ್ತು. ಅಂದು ರೆವಿನ್ಯೂ ಅಸಿಸ್ಟೆಂಟ್ ಕಮೀಷನರೂ, 'ಭಾರತ ಸ್ಕೌಟ್ಸ್ ಅಂಡ್ ಗೈಡ್ಸ್' ದಾವಣಗೆರೆ ಶಾಖೆಯ ಅಧ್ಯಕ್ಷರೂ ಆಗಿದ್ದ ಬಿ. ಬೀರಪ್ಪನವರು ಕೊಂಡಜ್ಜಿಯವರನ್ನು ಆ ಶಾಖೆಯ ಸಹಾಯಕ ಕಮೀಷನರನ್ನಾಗಿ ಆಯ್ಕೆ ಮಾಡಿಕೊಂಡರು. ಕೊಂಡಜ್ಜಿಯವರ ಬಹುದಿನದ ಆಸೆ ಈಡೇರಿತು. ಬೆಳೆಯುವ ಬಾಲಕರೆ ಸಮಾಜದ ಸಂಸ್ಕೃತಿಯ ಮೊಳಕೆಗಳೆಂದೂ, ಯುವಕ ಯುವತಿಯರೇ ಸಮಾಜ ಹಾಗೂ ಸಮುದಾಯಗಳ ಸುಧಾರಕರೂ ರಾಷ್ಟ್ರಪ್ರಗತಿಯ ಕ್ರಿಯಾಶಕ್ತಿ ಸ್ವರೂಪರೂ ಎಂದು ಭಾವಿಸಿದ್ದ ಕೊಂಡಜ್ಜಿಯವರು ತಮಗೆ ಸಿಕ್ಕ ಸೇವಾವಕಾಶವನ್ನು ಅತ್ಯಂತ ಹರ್ಷದಿಂದ ಸ್ವೀಕರಿಸಿದರು. ಮುಂದೆ ಅದೇ ಸಂಸ್ಥೆಯ ರಾಜ್ಯ ಮುಖ್ಯ ಕಮೀಷನರ್ ಆದರು. ಉಪಸಚಿವರಾಗಿದ್ದಾಗ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಕಾರ್ಯದರ್ಶಿ ಯಾದರು. ಅನಂತರ ಪ್ರೊ. ಪಿ. ಶಿವಶಂಕರ್‌ರವರಿಂದ ತೆರವಾದ ಚೀಫ್ ಕಮೀಷನರ್ ಸ್ಥಾನವನ್ನೂ ತುಂಬಿದರು. ಆಜೀವ ಪರ್ಯಂತ ಅದರ ಪುರೋಭಿವೃದ್ಧಿಗಾಗಿ ದುಡಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಒಂದು ಶುದ್ಧ ಸೇವಾ ಸಂಸ್ಥೆ. ಶಿಸ್ತು, ಸಂಯಮ, ಶ್ರಮ, ಸ್ವಾವಲಂಬನೆ, ಸೇವಾ ಮನೋಭಾವನೆ, ಸದಾ ದುಃಖಿತರಿಗೆ ನೆರವಾಗುವ ಸದ್ಬುದ್ಧಿ, ಸಹಜೀವನ, ಉತ್ತಮ ಹವ್ಯಾಸ, ಕಾಯಕನಿಷ್ಠೆ, ಪ್ರಾಮಾಣಿಕತೆ, ಇಚ್ಛಾಶಕ್ತಿ, ನೈತಿಕ ಹೊಣೆಗಾರಿಕೆ ಮೊದಲಾದುವು ಮಕ್ಕಳಿಗೆ ಚಿಕ್ಕಂದಿನಿಂದಲೇ ಅಭ್ಯಾಸವಾಗ ಬೇಕು ಎಂಬುದು ಸಂಸ್ಥೆಯ ಮೂಲೋದ್ದೇಶ. ಅದೇ ಅದರ ಧ್ಯೇಯ ಕೂಡ. ಅಲ್ಲಿ ಯಾವುದೇ ಜಾತಿ, ಮತ, ವರ್ಣ, ವರ್ಗ, ಬಡವ, ಬಲ್ಲಿದ ಎಂಬ ತಾರತಮ್ಯ ಭಾವ ಇಲ್ಲ. ಇದು ಯಾವುದೇ ರಾಜಕೀಯ ಪಕ್ಷ ಅಥವಾ ಸಂಸ್ಥೆಯನ್ನು ಪ್ರತಿನಿಧಿಸುವುದಿಲ್ಲ. ಸ್ಕೌಟ್ ನಮ್ಮ ಸಮಾಜಕ್ಕೆ ಹಾಗೂ ರಾಷ್ಟ್ರಕ್ಕೆ ಆರೋಗ್ಯಕರ ಕಾರ್ಯವನ್ನೆಸಗಲು ಪ್ರೋತ್ಸಾಹಿಸುವಂಥದು. ಯಾವುದೇ ಫಲಾಪೇಕ್ಷೆಯಿಲ್ಲದೆ, ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ಸ್ವಯಂಸ್ಫೂರ್ತಿಯಿಂದ ಸ್ವಾವಲಂಬಿ ಬದುಕನ್ನು ಕಲಿಸುವ ಒಂದು ಜೀವನ ವಿಧಾನ ತರಬೇತಿಸಂಸ್ಥೆ. ಇಲ್ಲಿ ಎಲ್ಲ ಮಕ್ಕಳೂ, ಯುವಕರೂ ಯಾವುದೇ ಭೇದ ಭಾವವಿಲ್ಲದೆ ಸಹಜೀವನದ ಪ್ರಥಮ ಪಾಠ ಕಲಿಯುವ ಅವಕಾಶವುಂಟು. ಅವರು ತಮ್ಮ ಸಹಪಾಠಿಗಳೊಂದಿಗೆ ಸೌಹಾರ್ದದಿಂದ ಸಹಕರಿಸುವ, ಉತ್ತಮ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ, ತಮ್ಮಲ್ಲಿ ನೈತಿಕ ಬಲವನ್ನು ಹೆಚ್ಚಿಸಿಕೊಳ್ಳುವ, ವ್ಯಕ್ತಿಗಳನ್ನು ಗೌರವಿಸುವ, ಕರ್ತವ್ಯದಲ್ಲಿ ನಿಷ್ಠೆ ಮತ್ತು ಪ್ರಾಮಾಣಿಕತೆ ಕಲಿಯುವ, ತಮ್ಮ ತಮ್ಮ ಸಹಜ ಪ್ರತಿಭೆ ಮತ್ತು ಪಾಂಡಿತ್ಯಗಳನ್ನು ವೃದ್ಧಿಪಡಿಸಿಕೊಳ್ಳುವ, ನಿಸರ್ಗ ಸೌಂದರ್ಯವನ್ನು ಸವಿಯುವ ಉತ್ತಮ ಹವ್ಯಾಸ ಬೆಳೆಸಿಕೊಳ್ಳುವ—ಒಟ್ಟಿನಲ್ಲಿ ಸಚ್ಚಾರಿತ್ರ್ಯದ ತರಬೇತಿ ದೊರೆಯುತ್ತದೆ ಅಲ್ಲಿ. ಈ ರೀತಿಯಲ್ಲಿ ಮಗು ತಾನು ಪ್ರಬುದ್ಧಮಾನಕ್ಕೆ ಬರುವ ವೇಳೆಗೆ ಭವಿಷ್ಯದ ಬದುಕಿನ ರೀತಿನೀತಿಗಳನ್ನು ರೂಢಿಸಿ ಕೊಳ್ಳುವ ಘನೋದ್ದೇಶವುಳ್ಳ ಈ ಮಹಾಸಂಸ್ಥೆಯ ಬಗೆಗೆ ಕೊಂಡಜ್ಜಿಯವರಿಗೆ ತುಂಬು ಗೌರವ. ೧೯೦೭ರ ಆಗಸ್ಟ್ ತಿಂಗಳು ಇಂಗ್ಲೆಂಡಿನಲ್ಲಿ ಸಂಸ್ಥಾಪಿಸಿದ

ರಾಬರ್ಟ್ ಬೇಡನ್ ಪೊವೆಲ್‌ನನ್ನು ಮನಸಾ ಅಭಿನಂದಿಸಿದರು. ಅಯಾಚಿತವಾಗಿ ಬಂದ ಅವಕಾಶವನ್ನು ಚೆನ್ನಾಗಿ ದುಡಿಸಿಕೊಂಡರು. ನಿಷ್ಠೆಯಿಂದ ಸಂಸ್ಥೆಗಾಗಿ ಹಗಲಿರುಳೂ ದುಡಿದರು. ಅದರ ಫಲವಾಗಿ ಚಿತ್ರದುರ್ಗ ಜಿಲ್ಲೆಯಲ್ಲಷ್ಟೇ ಅಲ್ಲದೆ ಸ್ಕೌಟ್ಸ್ ಗೈಡ್ಸ್‌ನ ವ್ಯವಸ್ಥೆ ಮತ್ತು ಕಾರ್ಯಚಟುವಟಿಕೆಗಳು ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಿಗೂ ವಿಸ್ತಾರಗೊಂಡವು.

ಇಂತಿದ್ದರೂ ಕೊಂಡಜ್ಜಿಯವರು ಸ್ಕೌಟ್ಸ್‌ಗೈಡ್ಸ್ ಸಂಸ್ಥೆಯ ಪದನಿಮಿತ್ತ ಸದಸ್ಯರೂ ಮತ್ತೊಂದೂ ಆಗಿರಲಿಲ್ಲ. ಅದು ಅವರ ವೈಶಿಷ್ಟ್ಯ. ಅವರು ನಿಷ್ಠಾವಂತ ಕಾರ್ಯಕರ್ತರಾಗಿಯೇ ಕಡೆಯತನಕ ಇದ್ದರು. ಇದು ಸಂಸ್ಥೆಯ ಬಗೆಗೆ ಅವರಿಗಿದ್ದ ಅವ್ಯಾಜ ಸಂಬಂಧ. ೧೬ರಿಂದ ೨೫ ವರ್ಷದ ಯುವಕ ಯುವತಿಯರು ಅನುಕ್ರಮವಾಗಿ ರೋವರ್ಸ್ ಮತ್ತು ರೇಂಜರ್ಸ್‌ಗಳಾಗಲಿ, ೧೧ರಿಂದ ೧೭ ವರ್ಷ ವಯಸ್ಸಿನ ಬಾಲಕಬಾಲಕಿಯರಾದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಾಗಲಿ, ೫ರಿಂದ ೧೦ ವರ್ಷ ವಯಸ್ಸಿನ ವರೆಗಿನ ಕಬ್ಸ್ ಮತ್ತು ಬುಲ್‌ಬುಲ್‌ಗಳಾಗಲಿ ಎಲ್ಲರೂ ಕೊಂಡಜ್ಜಿಯವರನ್ನು ತಮ್ಮ ಮನೆಯ ಹಿರಿಯರಲ್ಲಿ ಒಬ್ಬರು ಎಂಬ ಭಾವನೆ ತಳೆದಿದ್ದರು. ಕೊಂಡಜ್ಜಿಯವರೂ ತರಬೇತಿ ಶಿಬಿರಗಳಲ್ಲಿ, ಸಮಾಜ ಸೇವಾ ಸಂದರ್ಭಗಳಲ್ಲಿ, ರಾಜ್ಯಮಟ್ಟದ ರ್‍ಯಾಲಿಗಳಲ್ಲಿ ಮಕ್ಕಳೊಂದಿಗೆ ತಾವೂ ಮಕ್ಕಳಾಗಿ ಪಾಲ್ಗೊಳ್ಳುತ್ತಿದ್ದರು. ಅದರಿಂದಾಗಿ ಮಕ್ಕಳಲ್ಲಿ ಉತ್ಸಾಹ ಉಕ್ಕಿ ಬರುತ್ತಿತ್ತು. ಸ್ಕೌಟ್ ಚಳವಳಿಗೆ ಸಹಾಯಕವೂ ಆಗುತ್ತಿತ್ತು.

ಕೊಂಡಜ್ಜಿಯವರು ಜಾಗತಿಕ ಮಟ್ಟದ ಅನೇಕ ಸ್ಕೌಟ್ ಜಾಂಬೂರಿಗಳಲ್ಲಿ ಪಾಲ್ಗೊಂಡಿದ್ದರು. ೧೯೫೧ರಲ್ಲಿ ಆಸ್ಟ್ರಿಯಾ ದೇಶದ ಶಾಲ್ಸ್‌ಬರ್ಗ್ ಎಂಬೆಡೆಯಲ್ಲಿ ನಡೆದ ಏಳನೆಯ ವಿಶ್ವ ಜಾಂಬೂರಿಗೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದರು. ದಕ್ಷಿಣ ಆಫ್ರಿಕಾದ ನೈರೋಬಿಯಲ್ಲಿ ೧೯೭೩ರಲ್ಲಿ ನಡೆದ ೨೪ನೆಯ ಅಂತಾರಾಷ್ಟ್ರೀಯ ಸ್ಕೌಟ್ ಸಮಾವೇಶದಲ್ಲಿ ನಮ್ಮ ರಾಷ್ಟ್ರವನ್ನು ಪ್ರತಿನಿಧಿಸಿದ್ದರು. ಇದರಿಂದಾಗಿ ಶ್ರೀಯುತರಿಗೆ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯ ಸಮಗ್ರ ಚಟುವಟಿಕೆಗಳ ಅನುಭವ ಲಭಿಸಿತು. ಅದನ್ನು ನಮ್ಮ ದೇಶದಲ್ಲಿ ಅನುಷ್ಠಾನಗೊಳಿಸಲು ಸರ್ವ ಪ್ರಯತ್ನ ಮಾಡಿದರು.

ಕೊಂಡಜ್ಜಿಯವರು ಸದಾ ಸ್ಕೌಟ್ ಸಂಸ್ಥೆಯ ಪ್ರಗತಿಯ ಕನಸು ಕಾಣುತ್ತಿದ್ದರು. ಅದನ್ನು ಸುಭದ್ರವಾದ ನೆಲಗಟ್ಟಿನ ಮೇಲೆ ನಿಲ್ಲಿಸಲು ಯೋಚಿಸಿ, ಹಲವು ರಚನಾತ್ಮಕ ಕಾರ್ಯಗಳಿಗೆ ಅಡಿಪಾಯ ಹಾಕಿದರು. ದೊಡ್ಡಬಳ್ಳಾಪುರದ ಸೆಂಟ್ರಲ್ ಟ್ರೈನಿಂಗ್ ಗ್ರೌಂಡ್ಸ್‌ನಲ್ಲಿ ೧೯೩೭ರಲ್ಲೇ ಸಂಸ್ಥಾಪಿತವಾಗಿದ್ದ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರವನ್ನು ತಾವು ಬಂದಮೇಲೆ ಚುರುಕುಗೊಳಿಸಿದರು. ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ ಶ್ರೀಮತಿ ಅನಿಬೆಸೆಂಟ್‌ರವರ ಸ್ಮರಣಾರ್ಥ ದೊಡ್ಡಬಳ್ಳಾಪುರದ ಮೊದಲಿದ್ದ ಸ್ಕೌಟ್ಸ್ ಅಂಡ್ ಗೈಡ್ಸ್ ಕೇಂದ್ರವನ್ನು 'ಅನಿಬೆಸೆಂಟ್ ಪಾರ್ಕ್' ಎಂಬುದಾಗಿ ಹೊಸ ನಾಮಕರಣ ಮಾಡಿದರು. ಈ ಕೇಂದ್ರ ಇಂದಿಗೂ ಇಡೀ ಭಾರತದಲ್ಲೇ ಅತ್ಯುತ್ತಮ ಸ್ಕೌಟ್ ತರಬೇತಿ ಶಿಬಿರವೆಂಬ ಖ್ಯಾತಿಗೆ ಪಾತ್ರವಾಗಿದೆ. ಇದೇ ದೊಡ್ಡಬಳ್ಳಾಪುರದಲ್ಲಿ 'ನಿಜಲಿಂಗಪ್ಪ ರಜತ ಭವನ', 'ಕಂಠೀರವ ಭವನ' (೧೯೧೨ರಲ್ಲಿ ಮೈಸೂರು ಅರಸರ ಕಾಲದಲ್ಲಿ 'ದಿ ಬಾಯ್ ಸ್ಕೌಟ್ಸ್ ಆಫ್ ಮೈಸೂರು' ಎಂಬ ಹೆಸರಿನಲ್ಲಿ ರಾಜಾಶ್ರಯದಲ್ಲಿ ಆರಂಭಗೊಂಡ ಸಂಸ್ಥೆಯ

ಮುಖ್ಯಸ್ಥರಾಗಿದ್ದ ಸಂಸ್ಥೆಯ ಮಹಾಪೋಷಕರಾಗಿದ್ದ, ಶ್ರೀಮನ್ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಸೋದರರೂ ರಾಜ್ಯದ ಯುವರಾಜರೂ ಆಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್‌ರವರ ಗೌರವ ಸ್ಮರಣಾರ್ಥ) 'ಪ್ರೊ. ಪಿ. ಶಿವಶಂಕರ್ ಗ್ರಂಥಾಲಯ' 'ಆರ್. ಅನಂತರಾಮನ್ ವೃತ್ತ'. 'ಜೆ. ಬಿ. ಮಲ್ಲಾರಾಧ್ಯ ಬಯಲು ರಂಗಮಂದಿರ'. 'ಶಂಕರನಾರಾಯಣ ರಾವ್ ಈಜುಕೊಳ' (ಈ ಮಹನೀಯರೆಲ್ಲರೂ ಸ್ಕೌಟ್ಸ್ ಸಂಸ್ಥೆಯ ಮಹಾನಾಯಕರು ಮತ್ತೆ 'ಗಾಂಧಿ ಭವನ' ಮುಂತಾದ ಶಾಶ್ವತ ಸ್ಮಾರಕಗಳು ಬೆಳಕು ಕಂಡವು.

ಇಂಥದೇ ಮತ್ತೊಂದು ಸ್ಮರಣೀಯ ಭವನ ನಿರ್ಮಾಣವಾದದ್ದು ಚಿತ್ರದುರ್ಗದಲ್ಲಿ. ಶ್ರೀಯುತ ಕೊಂಡಜ್ಜಿಯವರು ಚಿತ್ರದುರ್ಗದ ಸ್ಕೌಟ್‌ಕೇಂದ್ರಕ್ಕೆ ಒಂದು ಸ್ವಂತ ಕಟ್ಟಡ ಒದಗಿಸಿಕೊಟ್ಟರು. ಅಲ್ಲೊಂದು ಕಬ್ಸ್ ಶಿಬಿರ ಆರಂಭಿಸಿದರು.

ಕೊಂಡಜ್ಜಿಯವರ ಮಹತ್ತರ ಸಾಧನೆಯೆಂದರೆ ತಮ್ಮ ಜನ್ಮಸ್ಥಳವಾದ ತುಂಬಾ ಕುಗ್ರಾಮವೆನಿಸಿಕೊಂಡಿದ್ದ ಕೊಂಡಜ್ಜಿಯಲ್ಲಿ ಪ್ರಪಂಚದ ಗಮನ ಸೆಳೆಯುವಂಥಾ ಒಂದು ಶಾಶ್ವತ ಸ್ಕೌಟ್ ತರಬೇತಿ ಶಿಬಿರವನ್ನು ಸ್ಥಾಪಿಸಿದ್ದು. ಗ್ರಾಮದ ಕೆರೆಯ ಪಕ್ಕದಲ್ಲಿ ಎಂಬತ್ತು ಎಕರೆ ಜಮೀನನ್ನು ಸರ್ಕಾರದಿಂದ ಪಡೆದು, ಹಲವರು ಕೊಡುಗೈ ದಾನಿಗಳ ಉದಾರ ಕೊಡುಗೆಯಿಂದ ಅಲ್ಲಿ ತರಬೇತಿ ಶಿಬಿರಕ್ಕೆ ಬೇಕಾಗುವ ಎಲ್ಲ ಸವಲತ್ತುಗಳನ್ನು ಒದಗಿಸಿಕೊಟ್ಟರು. ದಾವಣಗೆರೆಯ 'ಧರ್ಮರತ್ನಾಕರ' ರಾಜನಹಳ್ಳಿ ಮದ್ದೂರಾಯಪ್ಪ ಮತ್ತು ಅವರ ಸಹೋದರ ಲಕ್ಷ್ಮಣಶೆಟ್ಟಿಯವರಿಂದ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ದಾನ ಪಡೆದು ತುಂಗಭದ್ರಾ ನಾಲೆಯಿಂದ ಸದಾ ತುಂಬಿ ತುಳುಕುವ ಊರ ಕೆರೆಯ ಎದುರಿನಲ್ಲಿ ಒಂದು ಸುಸಜ್ಜಿತ 'ಅತಿಥಿ ಗೃಹ'ವನ್ನು ನಿರ್ಮಿಸಿದರು. ಸ್ಕೌಟ್ ಶಿಕ್ಷಣ ಕೇಂದ್ರಕ್ಕೆ ಅಗತ್ಯವಾದ ನೀರಿನ ಪೂರೈಕೆಗೆ ಟ್ಯಾಂಕ್ ಒಂದನ್ನು ಶ್ರೀ ಎಂ. ಕೆ. ಸ್ವಾಮಿ ಮತ್ತು ಸಹೋದರರ ಆರ್ಥಿಕ ನೆರವಿನಿಂದ ಕಟ್ಟಿಸಿದರು. ಕೊಂಡಜ್ಜಿಯವರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದ ದಾವಣಗೆರೆಯ ಹೆಸರಾಂತ ಬಟ್ಟೆ ಗಿರಣಿ ಮಾಲಿಕರಾದ ಶ್ರೀ ಚಿಗಟೇರಿ ಜಯಣ್ಣನವರ ಹೆಸರಿನಲ್ಲಿ ಅವರ ಹಿರಿಯ ಮಗ ಚಿಗಟೇರಿ ಜಯಪ್ರಕಾಶ್ ಶ್ರೀ ಕೊಂಡಜ್ಜಿಯವರ ಒಂದೇ ಒಂದು ಮಾತಿಗೆ ಬೆಲೆ ಕೊಟ್ಟು ಕೆಲವೇ ದಿನಗಳಲ್ಲಿ 'ಚಿಗಟೇರಿ ಜಯಣ್ಣ ಅಷ್ಟಕೋನ ಗೋಪುರ'ವನ್ನು ಕಟ್ಟಿಸಿಕೊಟ್ಟರು. ಹರಿಹರ ಪಾಲಿಫೈಬರ್ಸ್ ಸಂಸ್ಥೆಯಪರಿತ್ತ ಎರಡು ಲಕ್ಷ ರೂಪಾಯಿಗಳಿಂದ ಒಂದು ಈಜುಕೊಳ ನಿರ್ಮಾಣವಾಯಿತು. ಆ ಪುಟ್ಟ ಹಳ್ಳಿಯಲ್ಲಿ ಆಸ್ಪತ್ರೆ, ಗ್ರಾಮೀಣ ಗ್ರಂಥ ಭಂಡಾರ, ಪಶು ವೈದ್ಯಶಾಲೆ, ಅಂಚೆ ತಂತಿ ಇಲಾಖೆ ಕಟ್ಟಡ. ಉಗ್ರಾಣಮಳಿಗೆ. ರೈತರ ಸಹಕಾರ ಸೊಸೈಟಿ, ಯುವಜನ ಮತ್ತು ಮಹಿಳಾ ಮಂಡಳಿಗಳು, ಶಾಲೆ, ಅಧ್ಯಾಪಕರ ವಾಸಗೃಹಗಳು ಇವೇ ಮೊದಲಾದುವನ್ನು ನಿರ್ಮಾಣ ಮಾಡಿಸುವ ಮೂಲಕ ಕೊಂಡಜ್ಜಿಯನ್ನು ಒಂದು ಮಾದರಿ ಗ್ರಾಮವನ್ನಾಗಿ ಮಾಡಿದರು. ಅರಣ್ಯ ಇಲಾಖೆ ನಿರ್ಮಿಸಿದ ವೃಕ್ಷಕಾಶಿ ಆದರ ಸಸ್ಯಪಾಲನಾ ತೋಟ, ಜಿಂಕೆ ವನ, ಮೀನು ಸಾಕಣೆ ಕೇಂದ್ರ ಮೊದಲಾದವುಗಳಿಗೆ ಕೊಂಡಜ್ಜಿಯವರು ಅಂದೇ ಯೋಜನೆ ಹಾಕಿದ್ದರು. ಜಲದರ್ಶಿನಿ ವಸತಿಶಾಲೆ ಅವರ ಅನುದಿನದ ಕನಸಾಗಿತ್ತು. ಅವರಿಗೆ ಅವರ ಅರವತ್ತನೆಯ ಹುಟ್ಟುಹಬ್ಬವನ್ನು ದಾವಣಗೆರೆಯಲ್ಲಿ

ಆಚರಿಸಿದಾಗ, ಸಮಿತಿಯವರು ಪ್ರೀತಿಯಿಂದ ಅರ್ಪಿಸಿದ ಐವತ್ತೊಂದು ಸಾವಿರ ರೂಪಾಯಿಗಳನ್ನು, ತಮ್ಮೂರಿನಲ್ಲಿ ರೂಪುಗೊಳ್ಳಲಿದ್ದ 'ಜಲದರ್ಶಿನಿ ವಿದ್ಯಾಪೀಠ'ಕ್ಕೆ ಸಮರ್ಪಿಸಿದರು. ಕರ್ನಾಟಕ ರಾಜ್ಯ ಸಂಸ್ಥೆಯವರು ಬೆಂಗಳೂರಿನಲ್ಲಿ ಅರ್ಪಿಸಿದ ಒಂದು ಲಕ್ಷ ರೂಪಾಯಿ ಪ್ರೀತಿಯ ಉಡುಗೊರೆಯನ್ನು ಸ್ಕೌಟ್ ಸಂಸ್ಥೆಯ ಅಭಿವೃದ್ಧಿ ಕಾರ್ಯಗಳಿಗೆ ಬಳಸಿಕೊಳ್ಳುವಂತೆ ವಿನಂತಿಸಿಕೊಂಡು, ಪೂರಾ ಮೊತ್ತವನ್ನು ಹಿಂತಿರುಗಿಸಿದರು.

ಇದೆಲ್ಲದರ ತಾತ್ಪರ್ಯ ಕೊಂಡಜ್ಜಿಯವರು ಸದಾ ಚೈತನ್ಯದ ಚಿಲುಮೆ ಯಾಗಿದ್ದರು ಎಂಬುದರ ನಿವೇದನೆ ಅದಕ್ಕೆ ಮೂಲ ಕಾರಣ ಅವರ ಮನೋಧರ್ಮ. ಅದು ಮತ್ತು ಸ್ಕೌಟ್ ಸಿದ್ಧಾಂತಗಳು ಒಂದೇ ತಕ್ಕಡಿಯಲ್ಲಿ ಸಮಸಮವಾಗಿ ತೂಗುತ್ತಿದ್ದುವು. ಮುಖ್ಯವಾಗಿ ಯುವಶಕ್ತಿಯನ್ನು ರೂಪಿಸುವ ಸಮರ್ಥ ಸಂಸ್ಥೆಯಾದ ಸ್ಕೌಟ್ ಕಂಡರೆ ಅದೇ ಮನೋಧರ್ಮದ ಕೊಂಡಜ್ಜಿಯವರಿಗೆ ಅದು ಅಚ್ಚುಮೆಚ್ಚು.

ಶ್ರೀಯುತರಿಗೆ ಯುವಶಕ್ತಿಯ ಬಗೆಗೆ ಅಪಾರ ವಿಶ್ವಾಸವಿತ್ತು. ಯುವಶಕ್ತಿಯೇ ರಾಷ್ಟ್ರದ ಶ್ರೀ ಶಕ್ತಿ, ಕ್ರಿಯಾಶಕ್ತಿ ಎಂದು ನಂಬಿದ್ದರು. ಪ್ಲೇಟೊ ಮಾತು ಅವರ ಮನೋ ಮಂದಿರದಲ್ಲಿ ಸದಾ ಪ್ರತಿಧ್ವನಿಸುತ್ತಿತ್ತು. ಪ್ಲೇಟೊ ಹೇಳುತ್ತಾನೆ 'ಒಂದು ದೇಶವನ್ನೊ ಒಂದು ದೇಶದ ಸನಾತನ ಸಂಸ್ಕೃತಿಯನ್ನೊ ನಾಶಪಡಿಸಲು ಇಚ್ಛಿಸಿದರೆ ಬೇರೇನೂ ಮಾಡಬೇಕಾಗಿಲ್ಲ. ಆ ದೇಶದ ಯುವಶಕ್ತಿಯನ್ನು ಹಾಳು ಮಾಡಿದರೆ ಸಾಕು. ಅಂದರೆ ಅಲ್ಲಿನ ಯುವಪೀಳಿಗೆಯನ್ನು ದಾರಿ ತಪ್ಪಿಸಿದರೆ ಸಾಕು. ಆ ದೇಶ ಅಥವಾ ಆ ದೇಶದ ಸಂಸ್ಕೃತಿ ತನಗೆ ತಾನೆ ಮಣ್ಣುಪಾಲಾಗುತ್ತದೆ' ಎಂದು. ಯುವಜನತೆಯ ಭವಿಷ್ಯತ್ತಿನ ಬಗ್ಗೆ ವಿಶೇಷ ಆಸಕ್ತಿ ಇಟ್ಟುಕೊಂಡಿದ್ದ ಕೊಂಡಜ್ಜಿಯವರು, 'ಇಂದಿನ ಯುವಕರೇ ಮುಂದಿನ ಪ್ರಜೆಗಳು, ಮುಂದೆ ರಾಷ್ಟ್ರವನ್ನು ನಡೆಸುವ ಚಾಲಕಶಕ್ತಿಗಳು. ಅವರು ಸನ್ಮಾರ್ಗಿಗಳಾಗಬೇಕಾದರೆ, ಸತ್ಪ್ರಜೆಗಳಾಗಬೇಕಾದರೆ, ರಾಷ್ಟ್ರ ಪ್ರಗತಿಯ ಕ್ರಿಯಾಶೀಲ ಶಕ್ತಿಗಳಾಗಬೇಕಾದರೆ ಅವರಲ್ಲಿ ರಾಷ್ಟ್ರಪ್ರೇಮ ಮೈ ತಳೆಯಬೇಕು. ಅದಕ್ಕೆ ತಳಹದಿ ಸ್ಕೌಟ್. ಅದು ಯುವಶಕ್ತಿಯನ್ನು ಪವಿತ್ರ ಪಾತ್ರದಲ್ಲಿ ಹರಿಯುವ ನದಿಯನ್ನಾಗಿಸುತ್ತದೆ, ತೀರ್ಥವನ್ನಾಗಿಸುತ್ತದೆ; ಚರಂಡಿಯ ಕೊಚ್ಚೆಯನ್ನಾಗಿಸುವುದಿಲ್ಲ'— ಎನ್ನುತ್ತಿದ್ದರು.

'ಇಂದು ಶಿಕ್ಷಣ ರಂಗ ತನ್ನ ಪಾವಿತ್ರ್ಯತೆಯನ್ನು ಕಳೆದುಕೊಳ್ಳುತ್ತಿದೆ. ಅಂತಾಗುತ್ತಿರುವುದು ದುರದೃಷ್ಟಕರ. ಪ್ರತಿಯೊಬ್ಬ ಪ್ರಜೆಯೂ ಉಂಡುಟ್ಟು ಸುಖಿ ವಾಗಿರಬೇಕಾದರೆ ಅವನಿಗೆ ನಮ್ಮ ಶಿಕ್ಷಣ ಪದ್ಧತಿಯಲ್ಲಿ ಸಾಮಾಜಿಕ ಸಮಗ್ರತೆಯ ದೃಷ್ಟಿಕೋನ ಬೇಕು. ಅದನ್ನು ಬೆಳೆಸಲು ಪ್ರತಿಶಾಲೆಯಲ್ಲೂ ಸ್ಕೌಟಿಂಗ್ ಸ್ಥಾಪನೆಯಾಗ ಬೇಕು. ಉತ್ತಮ ಚಾರಿತ್ರ್ಯದ ನಾಯಕರನ್ನು ಅದರ ಮೂಲಕ ರೂಪಿಸಬಹುದು. ಕಾಷ್ಟವ್ಯಸನ ಮನುಷ್ಯನನ್ನು ತಿನ್ನುತ್ತದೆ. ನಿಜವಾದ ಸ್ಕೌಟ್ ಅಂತಹ ವ್ಯಸನದಿಂದ ಮುಕ್ತ. ಸ್ಕೌಟ್ ಗೈಡ್ ತರಬೇತಿ ಪ್ರತಿ ತೇಜಸ್ವೀ ತರುಣತರುಣಿಯರಲ್ಲಿ ಬಾಳಿನ ಬಗೆಗೆ ಹುಮ್ಮಸ್ಸು, ಉತ್ಸಾಹ ಹಾಗೂ ನೆಮ್ಮದಿಯ ನೆಲೆಯನ್ನು ದೊರಕಿಸಿಕೊಡುತ್ತದೆ— ಎಂದು ಸಾರಿ ಸಾರಿ ಹೇಳುತ್ತಿದ್ದರು.

ಕೊಂಡಜ್ಜಿಯವರಿಗೆ ಸ್ಕೌಟ್ ಅಂದರೆ ಪಂಚಪ್ರಾಣ. ಅದೇ ಅವರ ಕಣ್ಣಿನ ಕಣ್ಣು, ಜೀವನದ ಜೀವ, ಉಸಿರಿನ ಉಸಿರು. ಇಂತಹ ವಿಶಾಲ ಹೃದಯದ, ಉದಾರ ಮನೋಭಾವದ ಕೊಂಡಜ್ಜಿಯವರು ಸ್ಕೌಟ್‌ಅಭ್ಯುದಯದ ಬಗೆಗೆ ಅನೇಕ ಸುಂದರ ಸ್ವಪ್ನಗಳನ್ನು ಕಾಣುತ್ತಿದ್ದರು. ಅವುಗಳಲ್ಲಿ ರಾಜ್ಯಾದ್ಯಂತ, ರಾಷ್ಟ್ರಾದ್ಯಂತ ಸ್ಕೌಟ್ ಬೆಳೆಯಬೇಕು ಎಂಬುದೂ ಒಂದು. ಆ ಕನಸು ನನಸಾಗಲಿಲ್ಲವಲ್ಲಾ ಎಂಬ ಕೊರಗು ಅವರ ಒಳಗಿನೊಳಗನ್ನು ಕೊರೆಯುತ್ತಲೇ ಇತ್ತು. ಕನ್ನಡದ ಖ್ಯಾತ ಕವಿ ಶ್ರೀ ಕೆ. ಸಿ. ಶಿವಪ್ಪನವರು ಸಂದರ್ಶಿಸಿದಾಗ ಕೊಂಡಜ್ಜಿಯವರು ಅಭಿಪ್ರಾಯ ಪಟ್ಟಿದ್ದು ಹೀಗೆ ನೋಡಿ, ಕರ್ನಾಟಕ ರಾಜ್ಯದಲ್ಲಿ ಈಗ ಆಗಿರುವ ಸ್ಕೌಟ್ ಪ್ರಗತಿಯ ಬಗ್ಗೆ ನನಗೆ ಸಂತೋಷವಿದೆ. ಆದರೆ ಸಾಲದು, ಮಾಡಬೇಕಾದ ಕೆಲಸ ಬಹಳ ಇದೆ. ಇದು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ವ್ಯಾಪಕವಾಗಿ ಬೆಳೆಯಬೇಕು. ಪ್ರತಿಶಾಲೆಯ ಪ್ರತಿಯೊಬ್ಬ ವಿದ್ಯಾರ್ಥಿಗೂ ಸ್ಕೌಟ್ ತರಬೇತಿಯ ಅನಿವಾರ್ಯತೆ ಇದೆ. ಅದಕ್ಕೆ ಮುಖ್ಯ ಕಾರಣ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥಾಪಕ ಬೆಡನ್ ಪೋವೆಲ್ ರೂಪಿಸಿಕೊಟ್ಟ ನಿಯಮಗಳು. ಅವು ತಿಳಿಸುತ್ತವೆ ಸ್ಕೌಟ್ ಮತ್ತು ರೋವರ್‌ಗಳು ಹಾಗೂ ಗೈಡ್ ಮತ್ತು ರೇಂಜರ್‌ಗಳು

ವಿಶ್ವಾಸಾರ್ಹರು - ವಿನಯ ಸಂಪನ್ನರು - ನಿಷ್ಠಾವಂತರು
ಎಲ್ಲರಲ್ಲೂ ಸ್ನೇಹವಿಟ್ಟಿರುವ ಸ್ನೇಹಜೀವಿಗಳು - ಪ್ರಾಣಿ ಮತ್ತು ಪ್ರಕೃತಿಪ್ರೇಮಿಗಳು
ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಲು ಸದಾ
ಸಿದ್ಧರಿರುವರಲ್ಲದೆ, ಶಿಸ್ತಿನ ಸಿಪಾಯಿಗಳು.

ಆತ್ಮವಿಶ್ವಾಸವಿರುವುದರಿಂದ ತುಂಬು ಧೈರ್ಯಶಾಲಿಗಳು, ದುಂದಿಲ್ಲದ ಮಿತವ್ಯಯಿಗಳು

ಕಾಯಾ, ವಾಚಾ, ಮನಸಾ ಪರಿಶುದ್ಧರು.

ಅಮಾಯಕ ಕಬ್ ಮತ್ತು ಬುಲ್‌ಬುಲ್‌ಗಳ ಎಳೆಯ ಮನಸ್ಸುಗಳಲ್ಲಿ ಸ್ಕೌಟ್ ವಿನಯ, ವಿಧೇಯತೆ, ನೈರ್ಮಲ್ಯ ಮೊದಲಾದ ಸದ್ಗುಣಗಳನ್ನು ತುಂಬುತ್ತದೆ.

**'ಸದಾಸಿದ್ಧವಾಗಿರು ಎಂಬುದು ಈ ಮಹಾನ್ ಸಂಸ್ಥೆಯ ಧ್ಯೇಯವಾಕ್ಯ!**

ಇಂತಹ ಹಲವು ಸದ್ಗುಣಗಳ ಗಣಿಯಾದ ಸ್ಕೌಟ್, ಮಕ್ಕಳ ಮನಸ್ಸು ಮತ್ತು ಚಾರಿತ್ರ್ಯಗಳನ್ನು ರೂಪಿಸುವಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತದೆ. ಆದ್ದರಿಂದ ಯಾವುದೇ ಸರ್ಕಾರವಿರಲಿ ಅದು ಈ ಚಳವಳಿಗೆ ನೀಡುವ ಹಣ ರಾಷ್ಟ್ರನಿರ್ಮಾಣ ಕಾರ್ಯಕ್ಕೆ ಮಾಡಿದ ವಿನಿಯೋಗ ಎಂದೇ ಭಾವಿಸಬೇಕು. ತಂದೆ ತಾಯಂದಿರೂ ಈ ಚಳವಳಿಯಲ್ಲಿ ಸಾಕಷ್ಟು ಆಸ್ಥೆ ವಹಿಸಿ, ತಮ್ಮ ಮಕ್ಕಳಲ್ಲಿ ಚಿಕ್ಕಂದಿನಲ್ಲೇ ಅದರ ಬಗೆಗೆ ಅಭಿರುಚಿ ಬೆಳೆಯುವಂತೆ ಮಾಡುವ ಅಗತ್ಯತೆ ಇದೆ.

ಹಳ್ಳಿಯ ಬಡ ವಿದ್ಯಾರ್ಥಿಗಳಿಗೆ ಸ್ಕೌಟ್ ಸಮವಸ್ತ್ರಗಳನ್ನು ಒದಗಿಸುವುದರತ್ತ ನಾವು ಹೆಚ್ಚು ಗಮನ ಕೊಡಬೇಕಾಗಿದೆ. ಅದರಿಂದ ಬಹಳ ಮಕ್ಕಳು ಈ ಚಳವಳಿಯಲ್ಲಿ ಭಾಗವಹಿಸುತ್ತಾರೆ. ಅಂತೆಯೇ ಸಮವಸ್ತ್ರ ಧಾರಣೆ ಮಕ್ಕಳಲ್ಲಿ ಸರ್ವಸಮಾನತೆಯ ಸದ್ಭಾವವನ್ನೂ ಮೂಡಿಸುತ್ತದೆ.

ವಿಪರ್ಯಾಸವೆಂದರೆ ನಮ್ಮ ರಾಜ್ಯದ ಪ್ರತಿಜಿಲ್ಲೆಯಲ್ಲೂ ಸ್ಕೌಟ್ ಸಂಘಗಳಲ್ಲಿ ಸಾಕಷ್ಟು ಸಿಬ್ಬಂದಿಯಾಗಲಿ, ಹಣವಾಗಲಿ ಇಲ್ಲ. ಹಲವು ಗೌರವಾನ್ವಿತ ಸದಸ್ಯರ ಪ್ರೋತ್ಸಾಹ ಮತ್ತು ಸಹಕಾರದಿಂದ ಕುಂಟಿಕೊಂಡು ನಡೆಯುತ್ತಿವೆ. ಸರ್ಕಾರಗಳು ನೀಡುವ ಆರ್ಥಿಕ ನೆರವು ಮತ್ತು ಪೂರ್ಣಾವಧಿ ಸಿಬ್ಬಂದಿಯ ನೇಮಕಾತಿ ಪೂರ್ಣಗೊಂಡಾಗ ಚಳವಳಿಯ ಪ್ರಗತಿ ಸಾಧ್ಯವಾಗುವುದು ನಿಸ್ಸಂದೇಹ.

ಶಾಲಾ ಕಾಲೇಜು ಅಧ್ಯಾಪಕರಿಗೂ ಸ್ಕೌಟ್ ತರಬೇತಿ ಬೇಕು. ಅವರು ಕಲಿತು, ಕಲಿಸತೊಡಗಿದರೆ ಅವರ ಶಿಷ್ಯಕೋಟಿ ತಾನೇ ತಾನಾಗಿ ಅವರನ್ನು ಅನುಸರಿಸಿ ವೃದ್ಧಿಯಾಗುತ್ತದೆ. ತನ್ಮೂಲಕ ಬಹುಮುಂದಿಗೆ ಅದರ ಘನೋದ್ದೇಶಗಳು ಮುಟ್ಟಲು ಅವಕಾಶವಾಗುತ್ತದೆ. ಅದರ ಕಾರ್ಯಕ್ಷೇತ್ರ ವಿಸ್ತಾರಗೊಳ್ಳುತ್ತದೆ. ನೋಡಿ ಶಿವಪ್ಪನವರೆ, ಪರಿಸ್ಥಿತಿ ಇಂತಿದ್ದರೂ ನಾನು ನಿರಾಶಾವಾದಿಯಲ್ಲ. ನನ್ನ ದೃಷ್ಟಿಯಲ್ಲಿ ಭರತ ಖಂಡದಲ್ಲಿ ಸ್ಕೌಟ್ ಚಳವಳಿಗೆ ನಿಜಕ್ಕೂ ಒಳ್ಳೆಯ ಭವಿಷ್ಯ ಇದೆ' ಕೊಂಡಜ್ಜಿಯವರ ಈ ಆಶೆ ಇನ್ನೂ ಹಣ್ಣಾಗಬೇಕಾಗಿದೆ. ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯೊಡನೆ ಕೊಂಡಜ್ಜಿಯವರ ಬಾಂಧವ್ಯ ಕೇವಲ ಔಪಚಾರಿಕವಾಗಿರಲಿಲ್ಲ. ಅದು ಅವರ ಜೀವನದ ಒಂದು ಅನಿವಾರ್ಯ ಭಾಗವಾಗಿತ್ತು. ಅವರು ಕರ್ನಾಟಕದಲ್ಲಿ ಸ್ಕೌಟ್ ಅನ್ನು ಬೆಳೆಸಿದರಷ್ಟೇ ಅಲ್ಲ, ಸ್ಕೌಟ್ ಅನ್ನು ಬದುಕಿದರು. ಅದರಲ್ಲಿ ಸದಾ ಸಕ್ರಿಯವಾಗಿಯೇ ಬಾಳಿ, ಅನ್ಯರಿಗೆ ಆದರ್ಶ ಆದರು.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು.

**– ಬಸವಣ್ಣ**

# ಖಾಸಗಿ ವಲಯದಲ್ಲಿ ಕೈಗಾರಿಕೆ ಸ್ಥಾಪನೆ

9ನೇ ಏಪ್ರಿಲ್ 1966

**ಶ್ರೀ ಬಿ. ಬೈರಪ್ಪಾಜೀ:** ತುಮಕೂರಿನಲ್ಲಿ ಖಾಸಗಿಯವರಿಂದ ಕೈಗಾರಿಕೆ ಮಾಡುವ ವಿಚಾರದಲ್ಲಿ ಸರಕಾರಕ್ಕೆ ಎಷ್ಟು ಮನವಿಗಳು ಬಂದಿವೆ ?

**ಶ್ರೀ. ಕೊಂಡಜ್ಜಿ ಬಸಪ್ಪ:** ಯಾವುವೂ ಬಂದಿಲ್ಲ.

**ಶ್ರೀ ಕೆ.ಪಿ. ರೇವಣ ಸಿದ್ಧಪ್ಪ:** ತುಮಕೂರಿನ ಬಳಿ ಕಾಯರ್ ಹಾಗೂ ರಬ್ಬರ್ ಇಂಡಸ್ಟ್ರೀ ಮಾಡಬೇಕೆಂದು ಲೈಸೆನ್ಸ್ ಪಡೆದು ಅದನ್ನು ಉಪಯೋಗಿಸಿಕೊಳ್ಳದೇ ಇರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ. ಕೊಂಡಜ್ಜಿ ಬಸಪ್ಪ** – ಈ ಪ್ರಶ್ನೆ ಇದರಲ್ಲಿ ಬರುವುದಿಲ್ಲ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ:** ಈ ಕೈಗಾರಿಕೆಗೆ ಲೈಸೆನ್ಸ್ ಕೊಡಬೇಕಾದರೆ ಯಾರಿಗೆ ಕೊಡಬೇಕು, ಯಾರಿಗೆ ಅಗತ್ಯತೆ ಇದೆ ಅಂತಹವರಿಗೆ ಕೊಡದ. ರಾಜಕೀಯ ಬೆಳೆಸುವುದಕ್ಕೆ ಕೊಟ್ಟು, ಅವರು ಮಾರಾಟ ಮಾಡಿದ್ದಾರೆ. ಅದರಿಂದ ಬಂದ ಹಣದಿಂದ ರಾಜಕೀಯ ನಡೆಸುವುದಕ್ಕೆ ಕೊಟ್ಟಿದ್ದೀರಾ ಅಥವಾ ಕೈಗಾರಿಕೆ ನಡೆಸುವುದಕ್ಕೆ ಕೊಟ್ಟಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** ಈ ಪ್ರಶ್ನೆಯಿಂದ ಅದು ಉದ್ಭವವಾಗುವುದಿಲ್ಲ.

**ಶ್ರೀ ಬಿ. ಬೈರಪ್ಪಾಜೀ:** ತುಮಕೂರಿನಲ್ಲಿ ಪ್ರೈವೇಟ್‌ಸೆಕ್ಟರ್‌ನಲ್ಲಿ ಇಂಡಸ್ಟ್ರೀ ನಡೆಸುತ್ತೇವೆ ಎಂದು ಕೇಳಿದ್ದರ ಮೇಲೆ ಎಷ್ಟು ಜನಕ್ಕೆ ತಾವು ಲೈಸೆನ್ಸ್ ಮಂಜೂರು ಮಾಡಿದ್ದೀರಿ ಎಂದು ನಾನು ನನ್ನ ಪ್ರಶ್ನೆಯಲ್ಲಿ ಕೇಳಿದ್ದೇನೆ. ಈಗಾಗಲೇ ನಮಗೆ ತಿಳಿದಿರುವಮಟ್ಟಿಗೆ ಯಾರೋ ಒಬ್ಬರು ರಾಜ್ಯಸಭಾ ಮೆಂಬರಿಗೆ ರಬ್ಬರೈಸ್ಡ್ ಕಾಯರ್ ಇಂಡಸ್ಟ್ರೀ ಲೈಸೆನ್ಸ್ ಗ್ರಾಂಟ್ ಮಾಡಿದ್ದೀರಿ ಎಂದು ಗೊತ್ತಾಗಿದೆ. ಮಾನ್ಯ ಉಪಸಚಿವರು ಕೊಟ್ಟಿಲ್ಲ ಎಂದು ಹೇಳುತ್ತಾ ಇದ್ದಾರೆ. ಖಚಿತವಾಗಿ ಕೊಟ್ಟಿದ್ದಾರೆ ಎಂಬ ವರ್ತಮಾನ ನಮಗೆ ಗೊತ್ತಾಗಿದೆ, ಈ ರೀತಿ ಮಾನ್ಯ ಸಚಿವರು ಉತ್ತರ ಕೊಡುವುದು ಸರಿಯೇ?

**ಶ್ರೀ. ಕೊಂಡಜ್ಜಿ ಬಸಪ್ಪ:** ಕೊಟ್ಟಿಲ್ಲ.

**ಶ್ರೀ ಕೆ.ಕಲ್ಲಪ್ಪ** – ಪರವಾನಗಿಯನ್ನು ಸರಿಯಾಗಿ ಬಳಸಿಕೊಳ್ಳದಿರುವ ಸದಸ್ಯರ ವಿರುದ್ಧ ಸರ್ಕಾರ ತನಿಖೆ ನಡೆಸುವುದೇ.

**ಸಭಾಪತಿ:–** ಸರ್ಕಾರವು ಈ ಪರಿಸ್ಥಿತಿಯನ್ನು ಪರಿಶೀಲಿಸುತ್ತಿದೆ ಎಂದು ಹೇಳಬಹುದು.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ:** ತುಮಕೂರು ಜಿಲ್ಲೆಯಲ್ಲಿ ತೆಂಗಿನ ಮಟ್ಟೆ ಬೇಕಾದಷ್ಟು ಸಿಕ್ಕುತ್ತದೆ, ಅದರಿಂದ ನಾರನ್ನು ತಯಾರು ಮಾಡಿ ಮಾರಾಟ ಮಾಡುತ್ತಾರೆ. ಈಗ ತಾವು ಇವರಿಗೆ ಲೈಸನ್ಸ್ ಕೊಟ್ಟಿರುವುದರಿಂದ ನಾರು ತಯಾರು ಮಾಡತಕ್ಕವರಿಗೆ ಧಕ್ಕೆಯುಂಟಾಗಿದೆ. ಲೈಸೆನ್ಸ್ ಕೊಟ್ಟರೂ ಇಂಡಸ್ಟ್ರೀ ಪ್ರಾರಂಭ ಮಾಡದೇ ಇರತಕ್ಕ ಈ ಲೈಸೆನ್ಸ್‌ದಾರರ ಮೇಲೆ ಏನು ಕ್ರಮ ತೆಗೆದುಕೊಳ್ಳುತ್ತೀರಿ?

**ಶ್ರೀ. ಕೊಂಡಜ್ಜಿ ಬಸಪ್ಪ** – ಲೈಸೆನ್ಸ್ ಕೊಟ್ಟೇ ಇಲ್ಲ ಎಂದು ಹೇಳಿದ್ದೇನೆ.

(ಶ್ರೀ ಭೈರಪ್ಪನವರು ಉಪಪ್ರಶ್ನೆಗಳನ್ನು ಇಡಲು ಮುಂದಾದರು)

**ಸಭಾಪತಿ:–** ನಾನು ಯಾವುದೇ ಉಪಪ್ರಶ್ನೆಗೆ ಅನುಮತಿ ನೀಡುವುದಿಲ್ಲ. [ಉತ್ತರವಿಲ್ಲ]

**ಶ್ರೀ ಬಿ.ಬೈರಪ್ಪಾಜೀ :** ಲೈಸೆನ್ಸ್ ಕೊಟ್ಟಿದ್ದೀರಿ ಎಂಬುದು ಖಚಿತವಾಗಿ ಗೊತ್ತಾಗಿದೆ. ಖಚಿತವಾದ ಉತ್ತರ ಬರದೇ ಹೋದರೆ ಹೇಗೆ? ಅದನ್ನು ತಿಳಿದುಕೊಂಡು ಈಗಲೇ ಈ ಸಭೆಗೆ ತಿಳಿಸುವುದಕ್ಕೆ ಸಾಧ್ಯವಾಗುತ್ತದೆಯೇ ?

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ:** ಬೇಕಾದರೆ ಅವರ ಹೆಸರನ್ನು ಕೊಡುತ್ತೇನೆ.

**ಸಭಾಪತಿ:–** ಮಾನ್ಯ ಸದಸ್ಯರು ಅದನ್ನು ಬರೆದುಕೊಡಲಿ. ನಾನು ಅದನ್ನು ಮಂತ್ರಿಯವರಿಗೆ ಕಳುಹಿಸುತ್ತೇನೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** 558 ನೇ ಪ್ರಶ್ನೆಗೆ ಒಂದು ಸಪ್ಲಿಮೆಂಟರಿ ಪ್ರಶ್ನೆಯನ್ನು ಕೇಳಬೇಕೆಂದು ಇದ್ದೇನೆ. ಹಿಂದಿನ ಕೈಗಾರಿಕಾ ಸಚಿವರು ತುಮಕೂರಿನಲ್ಲಿ ಒಂದು ಬೈಸಿಕಲ್ ಇಂಡಸ್ಟ್ರೀ ಪ್ರಾರಂಭ ಮಾಡುತ್ತೇವೆ ಎಂದು ಹೇಳಿ ಆಶ್ವಾಸನೆ ಕೊಟ್ಟಿದ್ದರು, ಅದು ಏನು ಆಯಿತು ?

**ಶ್ರೀ ಕೊಂಡಜ್ಜಿ ಬಸಪ್ಪ :–** ನನಗೆ ಅದು ನೆನಪಿಲ್ಲ.

ಶ್ರೀ. ಸಿ.ಜೆ. ಮುಕ್ಕಣ್ಣಪ್ಪ :– ಶ್ರೀ ಜತ್ತಿಯವರು ಕೈಗಾರಿಕೆ ಮಂತ್ರಿಯಾಗಿದ್ದಾಗ ತುಮಕೂರಿನಲ್ಲಿ ಒಂದು ಬೈಸಿಕಲ್ ಕೈಗಾರಿಕೆ ಪ್ರಾರಂಭ ಮಾಡುತ್ತೇನೆ ಎಂದು ಆಶ್ವಾಸನೆ ಕೊಟ್ಟಿದ್ದರು. ಅದು ಏನು ಆಯಿತು?

**ಸಭಾಪತಿ:–** ಅದು ಪ್ರಶ್ನಾವಧಿಯಲ್ಲಿಲ್ಲ ಮತ್ತು ವಿಷಯವನ್ನು ಸನ್ಮಾನ್ಯ ಸದಸ್ಯರು ಬೇರೆಲ್ಲಿಯಾದರೂ ಚರ್ಚಿಸಲಿ.

**ಶ್ರೀ ಎಸ್. ಶಿವಪ್ಪ:**– ಪ್ರಶ್ನೆಗೆ ಪೂರಕವಾಗಿ ಉತ್ತರ 'ಇಲ್ಲ' ಆದರೆ ಖಾಸಗಿ ವ್ಯಕ್ತಿಯೊಬ್ಬರಿಗೆ ಕಾಯರ್ ಹಾಗೂ ರಬ್ಬರ್ ಕೈಗಾರಿಕೆಯನ್ನು ಪ್ರಾರಂಭಿಸಲು ಪರವಾನಗಿಯನ್ನು ನೀಡಲಾಗಿದೆ. ಇದು ಸದಸ್ಯರ ಹಕ್ಕಿನ ಪ್ರಶ್ನೆಯಾಗಿದೆ.

**ಸಭಾಪತಿ:**– ಅಲ್ಲಿ ಹಕ್ಕಿನ ಪ್ರಶ್ನೆ ಒಳಗೊಂಡಿಲ್ಲ.

**ಶ್ರೀ.ಸಿ.ಜೆ.ಮುಕ್ಕಣ್ಣಪ್ಪ:**– ಸ್ವೀಕೃತವಾಗಿರುವ ಅರ್ಜಿಗಳ ಸಂಖ್ಯೆಯನ್ನು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:**– ನನಗೆ ಸೂಚನೆ (Notice) ಬೇಕು.

**ಸಭಾಪತಿ:**– ಪ್ರಶ್ನಾವಧಿ ಮುಗಿಯಿತು.

# ಗ್ರಾಮೀಣ ಕೈಗಾರಿಕಾ ಸಹಕಾರ ಸಂಘದ ಬಗ್ಗೆ

**ಶ್ರೀ ಕೆ.ಹೆಚ್. ರಂಗನಾಥ (ಮೂಡಿಗೆರೆ):-**

(a) ಬೆಂಗಳೂರು ದಕ್ಷಿಣ ತಾಲ್ಲೂಕು ಕೃಷ್ಣರಾಜಪುರಂನಲ್ಲಿ ಕೇಂದ್ರ ಕಛೇರಿಯೊಂದಿಗೆ ನೋಂದಣಿ ಮಾಡಿಸಿರುವ ಗ್ರಾಮೀಣ ಕೈಗಾರಿಕಾ ಸಹಕಾರ ಸಂಘವಿದೆಯೇ ಇದ್ದರೆ, ಅದು ಕಾರ್ಯನಿರ್ವಹಿಸುತ್ತಿದೆಯೇ.

(b) ತಿಳಿಸಿರುವಂಥ ಸೊಸೈಟಿಗೆ ಮುಂಗಡವಾಗಿ ಕೊಟ್ಟ ಮೊತ್ತ.

(c) ತನ್ನ ಷೇರು ಬಂಡವಾಳವೆಂದು ಸೊಸೈಟಿ ಸಂಗ್ರಹಿಸಿರುವ ಹಣ.

(d) ಈವರೆಗೆ ಆ ಸೊಸೈಟಿಯ ಲೆಕ್ಕಗಳನ್ನು ಆಡಿಟ್ ಮಾಡಿಸಲಾಗಿದೆಯೇ.

(e) ಅದು ಆಗಿದ್ದಲ್ಲಿ. ಹಣದ ನಷ್ಟ ಅಥವಾ ದುರ್ಬಳಕೆ ಯಾವುದಾದರೂ ಇದೆಯೇ ಮತ್ತು ಯಾವ ವ್ಯಕ್ತಿ ಅಥವಾ ವ್ಯಕ್ತಿಗಳು ನಷ್ಟ ಅಥವಾ ದುರ್ಬಳಕೆಗೆ ಜವಾಬ್ದಾರಿಯಾಗಿದ್ದಾರೆ.

ಉ. **ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಉಪಮಂತ್ರಿ) :-**

(a) ಹೌದು, ಆದರೆ ಬೆಂಗಳೂರು ದಕ್ಷಿಣ ತಾಲ್ಲೂಕು ರೂರಲ್ ಇಂಡಸ್ಟ್ರಿಯಲ್ ಕೋ-ಆಪರೇಟಿವ್ ಸೊಸೈಟಿಯೊಂದಿಗೆ ಅಮಾಲ್ಗಮೇಟ್ ಆಗಿದೆ.

(b) ರೂ.84,340

(c) ರೂ.9,868

(d) ಹೌದು, 1958-59 ರವರೆಗೆ

(e) ನಷ್ಟ: 1958-59ರಲ್ಲಿ ರೂ.2,280-13 ಪೈಸೆ

ದುರ್ಬಳಕೆ ಆಗಿಲ್ಲಸೊಸೈಟಿ ಸಾಮಾನ್ಯ ಕಾರ್ಯಾಚರಣೆಯಲ್ಲಿ ನಷ್ಟ ಉಂಟಾಗಿರುವುದು. ಅದಕ್ಕೆ ಯಾವುದೇ ವ್ಯಕ್ತಿಗಳು (ಆಫೀಸ್ ಬೇರರ್ಸ್) ಜವಬ್ದಾರಿಯಲ್ಲ.

**ಶ್ರೀ ಕೆ.ಎಚ್. ರಂಗನಾಥ್:** ಈ ರೂರಲ್ ಇಂಡಸ್ಟ್ರಿಯಲ್ ಕೋ-ಆಪರೇಟಿವ್ ಸೊಸೈಟಿ ಯಾವ ವರ್ಷದಲ್ಲಿ ಪ್ರಾರಂಭವಾಯಿತು?

**ಶ್ರೀ ಕೊಂಡಜ್ಜಿ ಬಸಪ್ಪ** – ಕೃಷ್ಣರಾಜಪುರಂ ರೂರಲ್ ಇಂಡಸ್ಟ್ರಿಯಲ್ ಕೋ–ಆಪರೇಟಿವ್ ಸೊಸೈಟಿಯು 1957–58ರಲ್ಲಿ ರಿಜಿಸ್ಟರ್ ಆಯಿತು.

**ಶ್ರೀ ಕೆ.ಎಚ್. ರಂಗನಾಥ್** – 1958–59 ರಲ್ಲಿ 2280–12ರೂ. ನಷ್ಟವಾಗಿದೆ ಎಂದು ಉತ್ತರ ಹೇಳಿದೆ. ಹಾಗಾದರೆ 1957–58ರಿಂದ ಆಗಿರುವ ಒಟ್ಟು ನಷ್ಟ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ** – ಸೊಸೈಟಿಗೆ ಲಾಭ ಆಗಿಲ್ಲ.

**ಶ್ರೀ ಕೆ.ಎಚ್. ರಂಗನಾಥ್** – ಅಮಾಲ್ಗಮೇಟ್ ಆದುದು ಯಾವಾಗ?

**ಶ್ರೀ ಕೊಂಡಜ್ಜಿ ಬಸಪ್ಪ:**– ಅದು 1957–58 ರಲ್ಲಿ ನಾನು ನಿಮಗೆ ಹೇಳಿದಂತೆ 1957–58 ರಲ್ಲಿ ಹೋಬಳಿಯ ಎಲ್ಲಾ ಸೊಸೈಟಿಗಳು ಅಂದರೆ, ಉತ್ತರಹಳ್ಳಿ, ಕೆಂಗೇರಿ, ಕೃಷ್ಣರಾಜಪುರಂ ಮತ್ತು ಬೇಗೂರು, ಅಮಾಲ್ಗಮೇಟ್ ಆಗಿವೆ.

**ಶ್ರೀ ಬೈರಪ್ಪಾಜಿ** – ಸ್ವಾಮಿ, ಉತ್ತರ (ಡಿ) ನಲ್ಲಿ 1958–59ನೇ ವರ್ಷದವರೆಗೆ ಅಕೌಂಟ್ಸ್ ತನಿಖೆಯಾಗಿದೆ ಆಡಿಟ್ ಆಗಿದೆ ಎಂದು ಉತ್ತರ ಹೇಳಿದೆ. ಅಲ್ಲಿಂದ ಈಚೆಗೆ ಆಗಿಲ್ಲವೇ? ಇವತ್ತಿನವರೆಗೆ ಆರೇಳು ವರ್ಷಗಳಾದರೂ ಕೂಡ ಸೊಸೈಟಿ ಅಕೌಂಟ್ಸ್ ಆಡಿಟ್ ಮಾಡದೇ ಇರತಕ್ಕಂಥ ಸರಕಾರದ ನೀತಿ ಸರಿಯೇ?

**ಶ್ರೀ ಕೊಂಡಜ್ಜಿ ಬಸಪ್ಪ:**– ಹಿಂದಿನ ವರ್ಷದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಲೆಕ್ಕ ಪರಿಶೋಧಕರು ಇರಲಿಲ್ಲ. ಸೊಸೈಟಿಯ ಆಡಿಟ್ ಕೆಲಸ ನಡೆಯುತ್ತಿದೆ ಮತ್ತು ಆಡಿಟರ್‌ಗಳ ಸಂಖ್ಯೆಯನ್ನು ಹೆಚ್ಚಿಸಲಾಗಿದೆ. ನನಗೆ ತಿಳಿದು ಬಂದಿರುವುದೇನೆಂದರೆ, ಈ ವರ್ಷದಲ್ಲಿ ಆಡಿಟ್ ಕೆಲಸ ಮುಗಿಯಬಹುದು.

**ಶ್ರೀ ಬಿ.ಎಲ್. ಗೌಡ:** ಈ ಕೈಗಾರಿಕೆಯ ಸಹಕಾರ ಸಂಘ ಇಲ್ಲಿಯವರೆಗೆ ಎಷ್ಟು ಸಹಕಾರ ಕೈಗಾರಿಕೆಗೆ ಸಾಲವನ್ನು ಕೊಟ್ಟಿದೆ ಅವುಗಳಲ್ಲಿ ಯಾವ ಯಾವುದು ಎಷ್ಟರ ಮಟ್ಟಿಗೆ ಅಭಿವೃದ್ಧಿಗೆ ಬಂದಿವೆ ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದುವರೆಗೆ ಇದು 57 ಜನರಿಗೆ ಸಾಲವನ್ನು ಕೊಟ್ಟಿದೆ. ಅದರ ಪೈಕಿ ಖಾದೀ ಆಂಡ್ ವಿಲೇಜ್ ಇಂಡಸ್ಟ್ರೀಸ್ ಬಗ್ಗೆ ಸಾಲ ಪಡೆದಿದ್ದವರು ಅದನ್ನು ಮಿಸಪ್ಲಿಕೇಷನ್ ಮಾಡಿದ್ದಾರೆಂದು ರಿಪೋರ್ಟ್ ಬಂದಿದೆ. ವಿಚಾರ ಮಾಡುತ್ತಿದ್ದೇವೆ.

**ಶ್ರೀ ಕೆ.ಎಚ್. ರಂಗನಾಥ್**: ಈಗ ಬೆಂಗಳೂರು ದಕ್ಷಿಣ ತಾಲ್ಲೂಕು ಸಹಕಾರ ಸಂಘ ಕೆಲಸಮಾಡುತ್ತಿಲ್ಲವೆಂಬುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ**: ಇಲ್ಲ ಅದೀಗಲೂ ಕೆಲಸ ಮಾಡುತ್ತಿದೆ.

**ಶ್ರೀ ಕೆ.ಎಚ್. ರಂಗನಾಥ್**: ಇದರ ಅಧ್ಯಕ್ಷರು ಮೊದಲಿದ್ದವರೇ ಇದ್ದಾರೆಯೋ ಅಥವಾ ಬೇರೆ ಅಧ್ಯಕ್ಷರೋ?

**ಶ್ರೀ ಕೊಂಡಜ್ಜಿ ಬಸಪ್ಪ**: ಈಗ ಬೇರೆಯವರು ಅಧ್ಯಕ್ಷರಾಗಿದ್ದಾರೆ.

**ಶ್ರೀ ಅಂದಾನಯ್ಯ**: (ಸಿ) ಗೆ ಉತ್ತರವಾಗಿ ಸರ್ಕಾರದವರು ಆಫೀಸ್ ಬೇರರ್ಸ್ ನಷ್ಟಕ್ಕೆ ಜವಾಬ್ದಾರರಲ್ಲ ಎಂದು ತಿಳಿಸಲಾಗಿದೆ ಹಾಗಾದರೆ ಈ ಸಾಲಕ್ಕೆ ಯಾರು ಕಾರಣರು?

**ಶ್ರೀ ಕೊಂಡಜ್ಜಿ ಬಸಪ್ಪ**: ಆಡಳಿತ ಮಂಡಳಿಯೇ ಜವಾಬ್ದಾರಿ.

**ಶ್ರೀ ಜಿ. ರಾಮೇಗೌಡ**: ಈ ಸಹಕಾರ ಸಂಘದ ಸರ್ವ ಸದಸ್ಯರ ಸಮ್ಮೇಳನ ಕ್ರಮವಾಗಿ ವರ್ಷ ವರ್ಷ ನಡೆಯುತ್ತಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ**: ಈ ಅಮಾಲ್ಗಮೇಷನ್ ಆದಮೇಲೆ ಒಂದಾವರ್ತಿ ಮಾತ್ರ ನಡೆದಿದೆ, ಇತ್ತೀಚೆಗೆ ನಡೆದಿಲ್ಲ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ**: ಈ ಸಹಕಾರ ಸಂಘದ ಕೆಲಸ ನಡೆಯುವಂತಿಲ್ಲ ಎಂದ ಮೇಲೆ ಅಲ್ಲಿ ಖರ್ಚಾಗತಕ್ಕ ಹಣವೆಲ್ಲಾ ಕೇವಲ ಆ ಸಿಬ್ಬಂದಿಯ ವೆಚ್ಚಕ್ಕೆ ತಾನೆ ?

**ಶ್ರೀ ಜಿ. ರಾಮೇಗೌಡ** – ಜನರಲ್ ಬಾಡಿಯಲ್ಲಿ ಯಾವ ವರ್ಷದ ಕಡೇ ಆಡಿಟ್ಟಾಗಿರುತ್ತದೋ ಆ ರಿಪೋರ್ಟ್ ಇರಬೇಕು. ಅದಿಲ್ಲದಿದ್ದರೂ ಜನರಲ್ ಬಾಡಿಯಲ್ಲಿ ಬೇರೆಕಾರ್ಯಗಳನ್ನು ಟ್ರಾನ್ಸಾಕ್ಟ್ ಮಾಡುವುದಕ್ಕೆ ಅವಕಾಶವಿದೆ.

# ತುಮಕೂರು ಜಿಲ್ಲಾ ಸಹಕಾರ ಸಂಘ

11ನೇ ಮಾರ್ಚ್ 1965

**ಶ್ರೀ. ಲಕ್ಕಪ್ಪ (ಹೆಬ್ಬೂರು):-**

(a) ತುಮಕೂರು ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸದಿರುವ ಸಹಕಾರ- ಸಂಘಗಳ ಸಂಖ್ಯೆಯಷ್ಟು;

(b) ಇಂತಹ ಸಹಕಾರ ಸಂಘಗಳನ್ನು ಸರ್ಕಾರವು ನಿಯಮಗಳನುಸಾರವಾಗಿ ಸೂಪರ್ ಸೀಡ್ ಮಾಡಲಾಗಿದೆಯೆ;

(c) ಕೆಲವು ಸೊಸೈಟಿಗಳು ಆಹಾರ ಸಾಮಾಗ್ರಿ (Food grains) ವ್ಯಾಪಾರ ಮತ್ತು ಬ್ಲಾಕ್ ಮಾರ್ಕೆಟ್‌ನಲ್ಲಿ ಆಹಾರ ಸಾಮಗ್ರಿಗಳನ್ನು ಮಾರಾಟ ಮಾಡುತ್ತಿರುವುದು ಅವರ ಗಮನಕ್ಕೆ ಬಂದಿದೆಯೆ;

(d) ಅವರು ಸಾರ್ವಜನಿಕ ಹಿತಾಸಕ್ತಿಯಿಂದ ಆಹಾರ ಸಾಮಾಗ್ರಿಗಳನ್ನು ಡೀಲ್ ಮಾಡುತ್ತಿರುವ ಸೊಸೈಟಿಗಳನ್ನು ನಿಲ್ಲಿಸಲು ಸರಿಯಾದ ಕ್ರಮಗಳನ್ನು ಕೈಗೊಳ್ಳುವ ಉದ್ದೇಶವಿದೆಯೇ;

A. **ಶ್ರೀ. ಕೊಂಡಜ್ಜಿ ಬಸಪ್ಪ.**

(a) 55

(b) 5 ಸೊಸೈಟಿಗಳನ್ನು ಸೂಪರ್‌ಸೀಡ್ ಮಾಡಲಾಗಿದೆ.

(c) ಇಲ್ಲ

(d) ಅದು ಉದ್ಭವಿಸುವುದಿಲ್ಲ.

ಮೇಲೆ ಹೇಳಿದ (c) ಪ್ರತಿಕ್ರಿಯೆಯಿಂದ

ಶ್ರೀ ಕೆ.ಲಕ್ಕಪ್ಪ: ತುಮಕೂರು ಜಿಲ್ಲೆಯಲ್ಲಿ ಸಹಕಾರ ಸಂಘಗಳು ಚೆನ್ನಾಗಿ ನಡೆಯುತ್ತಿವೆ ಎಂದು ಮಾನ್ಯ ಮಂತ್ರಿಗಳು ಸಭೆಯಲ್ಲಿ ಭಾಷಣ ಮಾಡುತ್ತಾ ಹೇಳಿದ್ದಾರೆ. ಈಗ ಉತ್ತರ ಹೇಳಿರುವ ಪ್ರಕಾರ 55 ಸಹಕಾರ ಸಂಘಗಳು ಹಣ ದುರುಪಯೋಗಪಡಿಸಿರುವುದರಿಂದ ಎಷ್ಟು ಸಹಕಾರ ಸಂಘಗಳ ಮೇಲೆ ಮೊಕದ್ದಮೆ ನಡೆಸಲಾಗಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** 55 ಸಹಕಾರ ಸಂಘಗಳು ಹಣ ದುರುಪಯೋಗಪಡಿಸಿಕೊಂಡಿವೆ ಎಂದು ಅದರ ಅರ್ಥವಲ್ಲ. ಆಡಿಟ್ ರಿಪೋರ್ಟಿನಲ್ಲಿ ಕೆಲವು ಇರ್ರೆಗ್ಯುಲಾರಿಟೀಸ್ ಪಾಯಿಂಟ್ ಔಟ್ ಮಾಡಿರುತ್ತಾರೆ. ಅಂಥ ಡಿಫೆಕ್ಟ್ಸ್ ರೆಕ್ಟಿಫೈ ಮಾಡುವುದಕ್ಕೆ ಶೋಕಾಸ್ ನೋಟೀಸ್ ಕೊಡುತ್ತಾರೆ.

**ಶ್ರೀ ಕೆ.ಲಕ್ಕಪ್ಪ:** ಈ 55 ಸಹಕಾರ ಸಂಘಗಳು ಕೆಲಸ ಮಾಡದೆ ಕೇವಲ ಚುನಾವಣೆಗೋಸ್ಕರ ಓಟು ದೊರಕಿಸುವುದಕ್ಕಾಗಿ ಇಂಥ ಸಂಘಗಳನ್ನು ಆರಂಭ ಮಾಡಲಾಗಿದೆ. ದೇಶದಲ್ಲಿ ಸಹಕಾರ ಸಂಘಗಳ ಉದ್ದೇಶ ಯಾವುದೂ ಸಫಲ ಮಾಡದೇ ಇರತಕ್ಕಂಥಾದ್ದು ಸರಕಾರದ ಗಮನಕ್ಕೆ ಬಂದಿದೆಯೇ ?

**ಶ್ರೀ ಕೊಂಡಜ್ಜಿ ಬಸಪ್ಪ –** ತಮ್ಮ ಅಭಿಪ್ರಾಯ ತಪ್ಪು, ಈಗಾಗಲೇ ನಾನು ಹೇಳಿದ ಹಾಗೆ 55 ಸಹಕಾರ ಸಂಘಗಳ ಬಗ್ಗೆ ಆಡಿಟ್ ರಿಪೋರ್ಟಿನಲ್ಲಿ ಇರ್ರೆಗ್ಯುಲ್ಯಾರಿಟೀಸ್ ಪಾಯಿಂಟ್ ಔಟ್ ಮಾಡಿರುತ್ತಾರೆ, ಡಿಫೆಕ್ಟ್ಸ್ ಪಾಯಿಂಟ್ ಔಟ್ ಮಾಡಿರುತ್ತಾರೆ; ಅಂಥಾದ್ದನ್ನು ರೆಕ್ಟಿಫೈ ಮಾಡುವುದಕ್ಕೆ ಶೋಕಾಜ್ ನೋಟೀಸ್ ಕೊಡುತ್ತಾರೆ. ಚೆನ್ನಾಗಿ ಕೆಲಸ ಮಾಡಿಲ್ಲ ಹಣ ದುರುಪಯೋಗವಾಗಿದೆ ಎಂದು ಹೇಳತಕ್ಕ ಅಭಿಪ್ರಾಯ ಸರಿಯಲ್ಲ.

**ಶ್ರೀ ಕೆ. ಲಕ್ಕಪ್ಪ:** ಐದು ಸಹಕಾರ ಸಂಘಗಳನ್ನು ಸೂಪರ್‌ಸೀಡ್ ಮಾಡಲಾಗಿದೆ ಎಂದು ಉತ್ತರ ಹೇಳಿದೆ. ಇವುಗಳಲ್ಲಿ ಹಣ ದುರುಪಯೋಗವಾದ ಬಗ್ಗೆ ಮೊಕದ್ದಮೆ ಹಾಕಲಾಗಿದೆ?

**ಶ್ರೀ ಕೊಂಡಜ್ಜಿ ಬಸಪ್ಪ –** ಸೂಪರ್‌ಸೀಡ್ ಮಾಡಲಾಗಿದೆ ಅಂದರೆ ಅಂಥ ಸಂಘದಲ್ಲಿ ಹಣ ದುರುಪಯೋಗವಾಗಿದೆ ಎಂದು ಅರ್ಥವಲ್ಲ. ಚೆನ್ನಾಗಿ ಕೆಲಸ ಮಾಡದೇ ಇದ್ದರೆ ಸೂಪರ್‌ಸೀಡ್ ಮಾಡಬಹುದು. ಉದಾಹರಣೆಗೆ ಪ್ರತಿವರ್ಷ ಜನರಲ್‌ಬಾಡಿ ಮೀಟಿಂಗ್ ಕರೆಯಬೇಕು ಎಂದು ಕಾನೂನು ಪ್ರಕಾರ ಇದೆ. ಅದನ್ನು ಮಾಡದೇ ಹೋದರೆ ಸೆಕ್ಷನ್ 30ರ ಪ್ರಕಾರ ನೋಟೀಸ್ ಕೊಟ್ಟು ಎಕ್ಸ್‌ಪ್ಲನೇಶನ್ ತೆಗೆದುಕೊಂಡು ಸೂಪರ್‌ಸೀಡ್ ಮಾಡತಕ್ಕಂಥ ಸನ್ನಿವೇಶ ಸಹ ಇದೆ. ಸೂಪರ್‌ಸೀಡ್ ಆಗಿದೆ ಅಂದರೆ ಹಣ ದುರುಪಯೋಗವಾಗಿದೆ ಎಂದು ತಿಳಿದುಕೊಳ್ಳುವುದು ತಪ್ಪು.

**ಶ್ರೀ ಸಿದ್ದಯ್ಯ ಕಾಶೀಮಠ –** ಇಂಥ ಸಹಕಾರ ಸಂಘಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಅವುಗಳ ಬಗ್ಗೆ ಏನು ಕಾರ್ಯಕ್ರಮ ಹಾಕಿಕೊಂಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** : ರೀವೈಸಲೈಜೇಶನ್ ಆಫ್ ಡಿಫೆಂಕ್ಟ್ ಸೊಸೈಟೀಸ್ ಪ್ರೋಗ್ರಾಂ ಹಾಕಿಕೊಂಡಿದೆ. ಇವುಗಳ ಬಗ್ಗೆ ರಿಜಿಸ್ಟ್ರಾರ್ ಅವರು ಇನ್‌ಸ್ಟ್ರಕ್ಷನ್ಸ್ ಕೊಟ್ಟಿದ್ದಾರೆ. ಇದಕ್ಕೆ ಸಹಾಯ ಮಾಡಬೇಕೆಂದು ರಿಕ್ವೆಸ್ಟ್ ಮಾಡಿಕೊಂಡಿದೆ.

**ಶ್ರೀ ಕೆ. ಲಕ್ಕಪ್ಪ** – ಸೂಪರ್‌ಸೀಡ್ ಮಾಡಿರತಕ್ಕಂಥ ಈ ಐದು ಸಹಕಾರ ಸಂಘಗಳಲ್ಲಿ ಲಕ್ಷಾಂತರ ರೂಪಾಯಿ ಹಣ ದುರುಪಯೋಗವಾಗಿರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವುದಾದರೂ ಒಂದರಲ್ಲಿ ಹಾಗೆ ಇರಬಹುದು.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ:** ಇಂಥ ಆಡಳಿತದಲ್ಲಿ ಸರಕಾರ ಮಧ್ಯೆ ಪ್ರವೇಶ ಮಾಡುತ್ತಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಡ್ಮಿನಿಸ್ಟ್ರೇಟರ್ ನೇಮಕ ಮಾಡಿದ್ದಾರೆ. ಅವರು ಅಕೌಂಟ್ಸ್ ನೋಡುತ್ತಾರೆ. ರೆಸ್ಪಾನ್ಸಿಬಿಲಿಟಿ ಫಿಕ್ಸ್ ಮಾಡಿದಮೇಲೆ ಸಿವಿಲ್ ಡಿಸ್ಪ್ಯೂಟ್ ಹಾಕಬೇಕಾಗುತ್ತದೆ ಅಥವಾ ಪ್ರಾಸಿಕ್ಯೂಶನ್ ಮಾಡುವ ಸಂದರ್ಭ ಬಂದರೆ ಪ್ರಾಸಿಕ್ಯೂಶನ್ ಮಾಡುತ್ತೇವೆ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ:** ಎರಡನೇ ದರ್ಜೆ ಗುಮಾಸ್ತರ ಮೇಲೆ ಕ್ರಮ ತೆಗೆದುಕೊಂಡಿದ್ದಾರೆ. ಮುಖ್ಯ ಅಧಿಕಾರಿಗಳ ಮೇಲೆ ಏತಕ್ಕೆ ಕ್ರಮ ತೆಗೆದುಕೊಂಡಿಲ್ಲ?

**ಶ್ರೀ ಕೊಂಡಜ್ಜಿ ಬಸಪ್ಪ** – ಹಾಗೆ ಏನಾದರೂ ಕ್ರಮ ತೆಗೆದುಕೊಳ್ಳಬೇಕಾದರೆ ಮೇನೇಜ್‌ಮೆಂಟ್ ಮೇಲೆ ಸಹ ಕ್ರಮ ತೆಗೆದುಕೊಳ್ಳೋಣ. ಅಧಿಕಾರವರ್ಗ ಗುಮಾಸ್ತ ಸೆಕ್ರೆಟರಿ ತಪ್ಪು ಮಾಡಿದರೆ ಕ್ರಮ ತೆಗೆದುಕೊಳ್ಳುತ್ತೇವೆ. ಈ ಬಗ್ಗೆ ಆಡಿಟ್ ರಿಪೋರ್ಟಿನಲ್ಲಿ ರೆಸ್ಪಾನ್ಸಿಬಿಲಿಟಿ ಫಿಕ್ಸ್ ಮಾಡುತ್ತಾರೆ.

**ಶ್ರೀ ಜಿ. ರಾಮೇಗೌಡ** – ಸೂಪರ್‌ಸೀಡ್ ಆರ್ಡರ್ ಆದಮೇಲೆ ಅದಕ್ಕೆ ಪ್ರತಿಯಾಗಿ ಅಪೀಲ್ ಹಾಕಿದಾಗ್ಗೆ ಐದಾರು ತಿಂಗಳುಗಳಾದರೂ ಆರ್ಡರ್ ಕೊಡದೇ ಸಹಕಾರ ಸಂಘಗಳು ಮೊದಲು ಇದ್ದ ಸ್ಥಿತಿಯಲ್ಲೇ ಇರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಹೈಪೋಥೆಟಿಕಲ್ ಆಗಿ ಕೇಳುತ್ತಿರುವಿರಿ, ಯಾವುದಾದರೂ ಒಂದು ಅಂಥ ಕೇಸ್ ಇದ್ದರೆ ಹೇಳಿ.

**ಶ್ರೀ ಕೆ. ಲಕ್ಕಪ್ಪ** – ಸಹಕಾರ ಸಂಘಗಳ ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಗಿ ಕೆಲಸ ಮಾಡತಕ್ಕ ಅಧಿಕಾರಿಗಳು ಅದೇ ತಾಲ್ಲೂಕಿನವರು ಆಗಿರುವುದರಿಂದ ಅವರೊಂದಿಗೆ ಸೇರಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೋಸ್ಕರ ಹಣ ಚಲಾವಣೆ ನಡೆದದ್ದು ಸರಕಾರದ ಗಮನಕ್ಕೆ ಬಂದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ರೀತಿ ಹೇಳತಕ್ಕಂಥ ಅಭಿಪ್ರಾಯ ತಪ್ಪು. ಕಾರ್ಯ ದಕ್ಷತೆಯಲ್ಲಿ ಲೋಪವಾದರೆ ಟ್ರಾನ್ಸ್‌ಫರ್ ಮಾಡುವುದಕ್ಕೆ, ಪನಿಶ್‌ಮೆಂಟ್ ಮಾಡುವುದಕ್ಕೆ ಕಾನೂನು ಇದೆ, ಆದುದರಿಂದ ಆ ರೀತಿ ಹೇಳುವುದು ಸರಿಯಲ್ಲ.

**ಶ್ರೀ ಕೆ.ಲಕ್ಕಪ್ಪ** – ಹಾಗಾದರೆ ಎಷ್ಟು ಸಲ ಪನಿಶ್‌ಮೆಂಟ್ ಕೊಟ್ಟಿದ್ದೀರಿ ?

**ಶ್ರೀ ಕೊಂಡಜ್ಜಿ ಬಸಪ್ಪ** – ಇದಕ್ಕಾಗಿ ಪ್ರತ್ಯೇಕ ಪ್ರಶ್ನೆ ಕೇಳಿದರೆ ಹೇಳುತ್ತೇನೆ.

**ಶ್ರೀ ಕೆ.ಲಕ್ಕಪ್ಪ** – ಸಹಕಾರ ಸಂಘಗಳ ಆಡಳಿತ ನಡೆಸತಕ್ಕಂಥ ಕೆಲವು ಜನ ಪದೇ ಪದೇ ಹಣ ದುರುಪಯೋಗ ಮಾಡುವುದು, ಅನೀತಿ ಮಾರ್ಗ ಹಿಡಿಯುವುದು ಇಂಥವರ ಬಗ್ಗೆ ಇರತಕ್ಕ ಬ್ಲಾಕ್ ಲಿಸ್ಟನಲ್ಲಿ ಎಷ್ಟು ಜನ ಇದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ** : ಅಂಥ ಸನ್ನಿವೇಶ ಸರಕಾರದ ಗಮನಕ್ಕೆ ಬಂದಿಲ್ಲ ಯಾರನ್ನೂ ಬ್ಲಾಕ್ ಲಿಸ್ಟ್‌ನಲ್ಲಿ ಇಟ್ಟಿಲ್ಲ.

**ಶ್ರೀ ಕೆ.ಲಕ್ಕಪ್ಪ:** ತುಮಕೂರು ಜಿಲ್ಲೆಯಲ್ಲಿ ಸಹಕಾರ ಸಂಘಗಳ ಆಡಳಿತ ನಡೆಸತಕ್ಕಂಥ ಜನ ಆಡಳಿತ ಪಕ್ಷಕ್ಕೆ ಸೇರಿದವರಿದ್ದು ಬಹುಮಟ್ಟಿಗೆ ಸಹಕಾರ ನೀತಿಯನ್ನು ವಿಫಲ ಮಾಡಿರುವುದನ್ನು ತನಿಖೆ ಮಾಡುವುದಕ್ಕೆ ವಿಚಾರಣಾ ಕಮಿಟಿ ನೇಮಕ ಮಾಡಿ ಕ್ರಮ ತೆಗೆದುಕೊಳ್ಳಲು ಪ್ರಯತ್ನ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಂಥ ಒಂದು ಪ್ರತ್ಯೇಕವಾದ ಕಮಿಟಿ ನೇಮಕ ಮಾಡುವ ಅವಶ್ಯಕತೆ ಕಂಡು ಬರುವುದಿಲ್ಲ. ತಪ್ಪು ಮಾಡಿದರೆ ಕ್ರಮ ತೆಗೆದುಕೊಳ್ಳಲು ಕಾನೂನಿನಲ್ಲಿ ಅವಕಾಶ ಇದೆ.

**ಶ್ರೀ ಕೆ.ಲಕ್ಕಪ್ಪ:** ತಾಲ್ಲೂಕ್ ಮಾರ್ಕೆಟಿಂಗ್ ಸಹಕಾರ ಸಂಘದ ಅಧ್ಯಕ್ಷರು ಮೇಲೆ ಸಹಸ್ರಾರು ರೂಪಾಯಿ ಚಲಾವಣೆ ಮಾಡಿದ ಅಪಾದನೆಯ ಬಗ್ಗೆ ಇದುವರೆಗೆ ನಿರ್ದಿಷ್ಟ ಕ್ರಮ ತೆಗೆದುಕೊಳ್ಳದೇ ಇರುವುದಕ್ಕೆ ಕಾರಣ ಏನು?

**ಶ್ರೀ ಕೊಂಡಜ್ಜಿ ಬಸಪ್ಪ** – ಪ್ರತ್ಯೇಕ ಪ್ರಶ್ನೆ ಕೇಳಿದರೆ ಅದಕ್ಕೆ ಉತ್ತರ ಕೊಡುತ್ತೇನೆ.

# ಸ್ಕ್ರೀನಿಂಗ್ ಕಮಿಟಿ

**19ನೇ ಮಾರ್ಚ್ 1965**

**ಶ್ರೀ ಎಸ್. ರುದ್ರಪ್ಪ (ಕಾಳಗಿ).–**

*[ಸ್ಕ್ರೀನಿಂಗ್ ಸಮಿತಿಯವರ ಶಿಫಾರಸ್ಸಿನ ಮೊದಲಿದ್ದ ಹುದ್ದೆಗೆ ವಾಪಸ್ಸು ಕಳುಹಿಸಿ ಕೊಡಲಾಗಿರುವ] (i) ಮೈಸೂರು ವಿಭಾಗ (ii) ಬೆಂಗಳೂರು ವಿಭಾಗ (iii) ಬೆಳಗಾಂ ವಿಭಾಗ ಮತ್ತು (iv) ಗುಲ್ಬರ್ಗಾ ವಿಭಾಗದ * ಬಿ.ಡಿ.ಓ ಮತ್ತು ಡೆಪ್ಯೂಟಿ ಬಿ.ಡಿ.ಓ ಗಳ ಸಂಖ್ಯೆ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಉಪಮಂತ್ರಿ)**: ಕೆಳಗಿನ ವಿವರಣೆಯಂತೆ:

| ವಿಭಾಗ | ಮೊದಲಿದ್ದ ಹುದ್ದೆಗೆ ಕಳುಹಿಸಿರುವವರ ಸಂಖ್ಯೆ ಬಿ.ಡಿ.ಓ | ಉಪ ಬಿ.ಡಿ.ಓ |
|---|---|---|
| ಮೈಸೂರು | 01 | – |
| ಬೆಂಗಳೂರು | 03 | – |
| ಬೆಳಗಾಂ | – | 01 |
| ಗುಲ್ಬರ್ಗಾ | 02 | 02 |

**ಶ್ರೀ ಎಸ್. ರುದ್ರಪ್ಪ** – ಸ್ಕ್ರೀನಿಂಗ್ ಸಮಿತಿಯವರ ಸಿಫಾರಸ್ಸಿನ ಮೇರೆಗೆ ಮೊದಲಿದ್ದ ಹುದ್ದೆಗೆ ವಾಪಸ್ಸು ಕಳುಹಿಸಿ ಕೊಡಲಾಗಿರುವ ಅಧಿಕಾರಿಗಳ ಬಗ್ಗೆ ಏನಾದರೂ ರೀ–ಕನ್ಸಿಡರ್ ಮಾಡುತ್ತೀರಾ ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಂತಹ ಮನವಿಯು ಸರ್ಕಾರದ ಮುಂದಿದೆ ಮತ್ತು ಇದನ್ನು ಪರಿಗಣಿಸಿದ್ದೇವೆ.

**ಶ್ರೀ ಮಹಾಂತಸ್ವಾಮಿ:** ಗುಲ್ಬರ್ಗಾ ಸ್ಕ್ರೀನಿಂಗ್ ಕಮಿಟಿಯಲ್ಲಿ ಯಾರು ಇದ್ದಾರೆ ?

**ಶ್ರೀ ಕೊಂಡಜ್ಜಿ ಬಸಪ್ಪ:** ಕಮಿಟಿಯಲ್ಲಿ ಅಭಿವೃದ್ಧಿ ಆಯುಕ್ತರು (ಡೆವಲಪ್‌ಮೆಂಟ್ ಕಮಿಶನರು) ಮತ್ತು ಸರ್ಕಾರದ. ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್‌ನ ಮತ್ತು ಸಹಕಾರ ಕಾರ್ಯದರ್ಶಿಯವರು ಛೇರ್‌ಮನ್‌ರಾಗಿರುವರು.

ವಿಭಾಗದ ವಿಭಾಗೀಯ ಆಯುಕ್ತರು ಮತ್ತು ಮೂರು ಸದಸ್ಯರು ಅಂದರೆ, ಕೃಷಿ ನಿರ್ದೇಶಕರು, ಜಿಲ್ಲೆಯ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲೆಯ ಕೃಷಿ ಅಧಿಕಾರಿಗಳು.

ಸರ್ಕಾರದ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಗೈರು ಹಾಜರಿಯಲ್ಲಿ ಸಂಬಂಧಪಟ್ಟ ವಿಭಾಗೀಯ ಆಯುಕ್ತರು ಕಮಿಟಿಯ ಛೇರ್‌ಮನ್‌ರಾಗಿರುತ್ತಿದ್ದರು.

**ಶ್ರೀ ಮಹಂತಸ್ವಾಮಿ:** ಒಂಭತ್ತು ಜನ ಅಧಿಕಾರಿಗಳನ್ನು ವಾಪಸ್ ತೆಗೆದುಕೊಳ್ಳುವುದಕ್ಕಾಗಿ ಸ್ಕ್ರೀನಿಂಗ್ ಕಮಿಟಿಯವರು ವರದಿ ಕಳಿಸಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ವರದಿ ತೆಗೆದುಕೊಂಡು ಆಮೇಲೆ ಹಾಗೆ ತೀರ್ಮಾನ ತೆಗೆದುಕೊಂಡಿದೆ.

**ಶ್ರೀ ಸಿ.ಆರ್. ರಂಗೇಗೌಡ:** ಸ್ವಾಮಿ, ಬಿ.ಡಿ.ಓ. ಮತ್ತು ಡೆಪ್ಯುಟಿ ಬಿ.ಡಿ.ಓ. 3 ಜನ ರಿಪೋರ್ಟ್ ಮಾಡಿದ್ದೀರಿ. ಅವರು ಒಂದೇ ಕೋಮಿಗೆ ಸೇರಿದವರಾಗಿದ್ದು ಅವರು ಹೊಸ ಮೈಸೂರು ಭಾಗದಿಂದ ಬಂದವರೇ ಎನ್ನುವುದನ್ನು ಪರಿಶೀಲಿಸುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವ ಜಾತಿಯವರು ಎನ್ನುವುದು ಹೆಸರಿನಮೇಲೆ ಗೊತ್ತಾಗುವುದಿಲ್ಲ. ಯಾವ ಜಾತಿ ಎಂದು ಹೇಳುವುದಕ್ಕಾಗುವುದಿಲ್ಲ.

**ಶ್ರೀ ಎನ್. ಹುಚ್ಚಮಾಸ್ತಿಗೌಡ:** ಅವರು ಸಮರ್ಪಕವಾಗಿ ಕೆಲಸ ಮಾಡುವುದಕ್ಕಾಗಿ ಏನೇನು ಸೌಲಭ್ಯಬೇಕೋ ಅವುಗಳನ್ನು ಕಲ್ಪಿಸಿದ್ದೀರಾ ಹೇಗೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಕೆಲವು ಕಡೆ ಜೀಪ್ ಕೊಟ್ಟಿಲ್ಲ. ಕೆಲವು ಕಡೆ ಎಕ್ಸ್‌ಟೆನ್‌ಷನ್ ಆಫೀಸರ್‌ಗಳು ಸಾಕಷ್ಟು ಇಲ್ಲ. ಇದರ ಬಗ್ಗೆ ರೆಪ್ರಜೆಂಟೇಷನ್ಸ್ ಬಂದಿವೆ. ಅವುಗಳನ್ನು ಕನ್ಸಿಡರ್ ಮಾಡುತ್ತಾ ಇದ್ದೇವೆ.

**ಶ್ರೀ ಎಂ. ಎನ್. ಕೃಷ್ಣಸಿಂಗ್** – ಪಬ್ಲಿಕ್ ಸರ್ವಿಸ್ ಕಮಿಷನ್ ನೇಮಕ ಮಾಡಿರುವ ಹಾಗೆ ಈ ಸ್ಕ್ರೀನಿಂಗ್ ಕಮಿಟಿಯನ್ನು ಕಾಯಂ ಆಗಿ ನೇಮಕ ಮಾಡುತ್ತೀರಾ ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವಶ್ಯಕವಾಗಿದೆ ಎಂದು ಕಂಡುಬಂದರೆ ಮಾಡಲಾಗುತ್ತದೆ.

**ಶ್ರೀ ಬಿ. ಬೈರಪ್ಪಾಜಿ:** ಸರ್ಕಾರ ಈ 9 ಜನ ಕ್ಷೇತ್ರಾಧಿಕಾರಿಗಳನ್ನು ವಾಪಸ್ಸು ಕಳುಹಿಸುವಾಗ ಯಾವ ಒಂದು ಆಧಾರವನ್ನು ಇಟ್ಟುಕೊಂಡು ವಾಪಸ್ಸು ಕಳುಹಿಸುತ್ತಾ ಇದೆ, ಅವರ ಭವಿಷ್ಯವೇನು, ಇವರ ಸ್ಥಿತಿಗತಿಗಳೇನು, ಇವರು ಮಾಡಿದಂಥ ಕಾರ್ಯಗಳನ್ನು ಯಾವ ಆಧಾರವಿಟ್ಟುಕೊಂಡು ಅಳತೆ ಮಾಡಿದ್ದಾರೆ, ಕೇವಲ ಒಂದೇ ವರ್ಗದ ಅಧಿಕಾರಿಗಳನ್ನು ಇದರಲ್ಲಿ ಇಟ್ಟು ಕೊಳ್ಳಬೇಕೆಂಬ ದೃಷ್ಟಿಯಿಂದ ಇಂತಹ ಅನ್ಯಾಯ ನಡೆದಿದೆ ಎನ್ನುವುದನ್ನು ಮಾನ್ಯ ಸರ್ಕಾರ ಗಮನಿಸಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಮಾನ್ಯ ಸದಸ್ಯರ ಪ್ರಶ್ನೆ 3–4 ಉಪಪ್ರಶ್ನೆಗಳನ್ನೊಳಗೊಂಡಿವೆ. ಅವರು ರಿವರ್ಟ್ ಆದಮೇಲೆ ಅವರವರ ಮೊದಲಿನ ಹುದ್ದೆಗಳಿಗೆ ಹೋಗುತ್ತಿದ್ದಾರೆ. ಪ್ರತಿವರ್ಷವೂ ಅವರ ವಿಚಾರದಲ್ಲಿ ವರದಿಗಳನ್ನು ತರಿಸಿಕೊಂಡಿದ್ದೇವೆ. ಅವರು ಸಿ.ಡಿ. ಮತ್ತು ಎನ್.ಇ.ಎಸ್. ಬ್ಲಾಕ್‌ಗಳಲ್ಲಿ ಕೆಲಸ ಮಾಡುತ್ತಿರುವಾಗ ಅವರ ಒಂದು ಅಟಿಟ್ಯೂಡ್ ಕೂಡ ಗಮನಿಸಲಾಗಿದೆ. ಈಗ ಮುಖ್ಯವಾಗಿ ಅಧಿಕಾರವರ್ಗಕ್ಕೆ ಬೇಕಾದ್ದು ಅವರ ಒಂದು ಕಾರ್ಯೋತ್ಸಾಹ ಮತ್ತು ಆಸಕ್ತಿ ನಾನ್‌ಪ್ಲಾನ್ ಮತ್ತು ಪ್ಲಾನ್ ಸ್ಕೀಮುಗಳು ಯಶಸ್ವಿಯಾಗಬೇಕಾದರೆ ಅಂತಹ ಅಧಿಕಾರಿಗಳಿರುವುದು ಅವಶ್ಯಕ. ಆದರೆ ನಾನ್ ಪ್ಲಾನ್ ಸ್ಕೀಮ್ಸ್ ಇದುವರೆಗೂ ಅಷ್ಟಾಗಿ ಪ್ರತಿಫಲವನ್ನು ತಂದಿಲ್ಲವೆಂಬುದಾಗಿ ಈಗಾಗಲೇ ಸರ್ಕಾರದ ಗಮನಕ್ಕೆ ಬಂದಿದೆ. ಇದನ್ನು ಈ ಮಾನ್ಯ ಸಭೆಯಲ್ಲೂ ಹಾಗೂ ಲೋಕ ಸಭೆಯಲ್ಲೂ ಹೇಳುತ್ತಾ ಇದ್ದಾರೆ. ಒಟ್ಟಿನಲ್ಲಿ ನಿಜವಾಗಿ ಈ ಅಧಿಕಾರಿವರ್ಗದವರು ಸರಿಯಾಗಿ ಕೆಲಸ ಮಾಡುತ್ತಿದ್ದಾರೆಯೇ ಎಂಬ ದೃಷ್ಟಿಯಿಂದ ಸ್ಕ್ರೀನಿಂಗ್ ಕಮಿಟಿಯನ್ನು ಏರ್ಪಾಡು ಮಾಡಿ ಆಯಾ ಡಿವಿಜನ್ನುಗಳಿಗೆ ಹೋಗಿ ಅವರನ್ನು ಅಲ್ಲಲ್ಲಿಯೇ ಇಂಟರ್‌ವ್ಯೂ ಮಾಡಿ ಸಂಬಂಧಪಟ್ಟ ಡೆಪ್ಯೂಟಿ ಕಮಿಷನರ್ ಹಾಗೂ ಡಿವಿಜನಲ್ ಕಮಿಷನರ್ ಅವರಿಂದ ವರದಿ ತರಿಸಿಕೊಂಡು ಆಖ್ಯೆರು ತೀರ್ಮಾನವನ್ನು ತೆಗೆದುಕೊಂಡಿದ್ದೇವೆ.

**ಶ್ರೀ ಡಿ.ಎಂ. ಸಿದ್ದಯ್ಯ**: ಈ 6 ಜನ ಬಿ.ಡಿ.ಓ.ಗಳು ಮತ್ತು 3 ಜನ ಬಿ.ಡಿ.ಓ. ಗಳು ಎಷ್ಟು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ? ಸ್ಕ್ರಿನಿಂಗ್ ಕಮಿಟಿಯವರು ಅವರ ಕೆಲಸದ ಕಾಲಾವಧಿಯಲ್ಲಿ ಆ ಅಧಿಕಾರಿಗಳು ಅನರ್ಹರು ಎಂದು ಹೇಳುವುದಕ್ಕೆ ಇರತಕ್ಕ ಕಾರಣಗಳೇನು?

**ಶ್ರೀ ಕೊಂಡಜ್ಜಿ ಬಸಪ್ಪ**: ದಾವಣಗೆರೆ ಬಿ.ಡಿ.ಓ ರವರು 26–04–1961ರಲ್ಲಿ ನೇಮಕಾತಿಯಾಗಿದ್ದರೆ 22–04–1961 ರಲ್ಲಿ ಸಂಡೂರು ಬಿ.ಡಿ.ಓರವರ ನೇಮಕಾತಿಯಾಗಿದೆ: 29–04–1961 ರಲ್ಲಿ ಮತ್ತೊಬ್ಬ ಬಿ.ಡಿ.ಓರವರ ನೇಮಕಾತಿಯಾಗಿದೆ. 17–04–1961 ರಲ್ಲಿ ಮತ್ತೊಬ್ಬ ಬಿ.ಡಿ.ಓರವರ ನೇಮಕಾತಿಯಾಗಿದೆ. 22–04–1962 ರಲ್ಲಿ ಮತ್ತೊಬ್ಬ ಬಿ.ಡಿ.ಓರವರ ನೇಮಕಾತಿಯಾಗಿದೆ. 29–04–1961 ರಲ್ಲಿ ಇಬ್ಬರು ಉಪ– ಬಿ.ಡಿ.ಓರವರ ನೇಮಕಾತಿಯಾಗಿದೆ. 11–04–1962 ರಲ್ಲಿ ಮತ್ತೊಬ್ಬರ ನೇಮಕಾತಿಯಾಗಿದೆ. 01–01–1962 ರಿಂದ 31–12–1964 ರವರೆಗೆ ಅವರು ತರಬೇತಿಯಲ್ಲಿದ್ದರು.

**ಶ್ರೀ ಎಚ್. ಡಿ. ದೇವೇಗೌಡ:** ಸ್ಕ್ರೀನಿಂಗ್ ಕಮಿಟಿಯವರು ಏನು ಸರ್ಕಾರಕ್ಕೆ ವರದಿ ಕಳುಹಿಸಿದ್ದಾರೋ ಅದರ ಮೇಲೆ ಅವರನ್ನು ಹಿಂದಿನ ಕೆಲಸಕ್ಕೆ ಕಳುಹಿಸಿದ್ದು ಸರಿ, ಹಾಗಾದರೆ ಬಿ.ಡಿ.ಓ.ಗಳು ಕೆಲಸಕ್ಕೆ ಸೇರಿದಲಾಗಾಯಿತು ಸ್ಕ್ರೀನಿಂಗ್ ಕಮಿಟಿಯವರು ಆ ಅಧಿಕಾರಿಗಳ ಮೇಲೆ ಜಿಲ್ಲಾಧಿಕಾರಿಗಳು ಕಳುಹಿಸಿದಂಥ ವರದಿಯನ್ನು ಗಮನಕ್ಕೆ ತೆಗೆದುಕೊಂಡಿದ್ದಾರೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ–** ಜಿಲ್ಲಾಧಿಕಾರಿಗಳ ವರದಿ ಡಿವಿಜನಲ್ ಕಮಿಷನರ್ ವರದಿ ಇವೆಲ್ಲವನ್ನು ಅಸೆಸ್ ಮಾಡಿ ಒಂದು ವರದಿಯನ್ನು ಕಳುಹಿಸಿದ್ದೇವೆ. ಅದನ್ನೂ ಸಹ ಸ್ಕ್ರೀನಿಂಗ್ ಕಮಿಟಿಯವರು ಗಮನಕ್ಕೆ ತೆಗೆದುಕೊಂಡಿದ್ದಾರೆ.

**ಶ್ರೀ ಟಿ.ಡಿ. ದೇವೇಂದ್ರಪ್ಪ–** ಕೆಲವು ಡೆವಲಪ್‌ಮೆಂಟ್ ಬ್ಲಾಕುಗಳಲ್ಲಿ ಈ ಅಧಿಕಾರಿಗಳು ಸರಿಯಾಗಿ ಕೆಲಸ ಮಾಡುತ್ತಾ ಇಲ್ಲವೆಂದು ನಾನೇ ಇಲ್ಲಿ ಹೇಳಿರುವಾಗ ಸ್ಕ್ರೀನಿಂಗ್ ಕಮಿಟಿಯವರು ಮಾಡಿರತಕ್ಕ ವರದಿಯನ್ನು ಸರ್ಕಾರ ಪರಿಶೀಲನೆ ಮಾಡಿ ಅವರಮೇಲೆ ಸರಿಯಾದ ಅಭಿಪ್ರಾಯವಿಲ್ಲದೇ ಇದ್ದ ಪಕ್ಷದಲ್ಲಿ ಅವರನ್ನು ಮನೆಗೆ ಕಳುಹಿಸುವುದು ನ್ಯಾಯವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ–** ಅವರು ಪ್ರೊಬೇಷನರಿ ಪೀರಿಯಡ್‌ನಲ್ಲಿರುವುದರಿಂದ ಈಗ ಒರಿಜನಲ್ ಪ್ಲೇಸಿಗೆ ರಿವರ್ಟ್ ಆಗುತ್ತಿದ್ದಾರೆ. ಡೈರಕ್ಟಾಗಿ ಸೆಲೆಕ್ಟ್ ಮಾಡಿದ್ದರೆ ಅವರು ಮನೆಗೆ ಹೋಗುತ್ತಾರೆ.

**ಶ್ರೀ ಅಂದಾನಯ್ಯ–** ಈಗಿರತಕ್ಕ ಬಿ.ಡಿ.ಓ.ಗಳಿಗೆ ಸಾಕಷ್ಟು ಕೆಲಸವಿಲ್ಲದೇ ಇರುವಾಗ ಡೆಪ್ಯುಟಿ ಬಿ.ಡಿ.ಓ.ಗಳನ್ನು ತೆಗೆಯುವುದಕ್ಕೆ ಸರ್ಕಾರದವರು ಪರಿಶೀಲನೆ ಮಾಡಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ–** ಸರ್ಕಾರ ಆ ವಿಚಾರವನ್ನು ಪರಿಶೀಲಿಸಿದೆ.

**ಶ್ರೀ ಎ.ಎಸ್. ಪಾಟೀಲ –** ಸ್ಟೇ–ಆರ್ಡರ್ ಕೊಟ್ಟರೂ ಅದನ್ನೂ ಮಂತ್ರಿಗಳು ಜಾರಿಗೆ ತರಲಿಲ್ಲ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ–** ಸರ್ಕಾರ ಪರಿಶೀಲನೆ ಮಾಡುವ ಸಂದರ್ಭಗಳು ಇವೆ. ಒಂದು ಸಾರಿ ಸರ್ಕಾರೀ ಆಜ್ಞೆ ಮಾಡಿದಮೇಲೆ ಪುನಃ ಅದನ್ನು ರಿವ್ಯೂ ಮಾಡಬಹುದೇ ಎಂಬ ಪ್ರಶ್ನೆಯನ್ನು ವಿಮರ್ಶೆ ಮಾಡುತ್ತಿದ್ದೇವೆ.

**ಶ್ರೀ ಎಚ್.ಡಿ.ದೇವೇಗೌಡ:** ಮಾನ್ಯ ಮಂತ್ರಿಗಳು ಈ ವಿಚಾರವನ್ನು ಪರಿಶೀಲನೆ ಮಾಡಿದ್ದಾರೋ ಇಲ್ಲವೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಪರಿಗಣಿಸಲು ಇದು ಸಲಹೆಯಾಗಿದೆ.

**ಶ್ರೀ ಎಸ್. ಸುಬ್ಬಯ್ಯ ನಾಯಕ್:** ಇನ್ನು ಕೆಲವರು ಬಿ.ಡಿ.ಓ. ಗಳ ಹೆಸರುಗಳ ಬಗ್ಗೆ ವರದಿ ಬಂದಿದ್ದರೂ ಅವರ ಬಗ್ಗೆ ತೀರ್ಮಾನವನ್ನು ಇನ್ನೂ ತೆಗೆದುಕೊಳ್ಳದೇ ಇರುವುದರಿಂದ ಅವರ ವೇತನವನ್ನು ತಡೆಹಿಡಿದಿರುವುದಕ್ಕಾಗಿ ಅವರಿಗೆ ತೊಂದರೆಯಾಗಿದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ–** ಯಾರ್ಯಾರ ಮೇಲೆ ಅಡ್‌ವರ್ಸ್ ವರದಿ ಬಂದಿದೆಯೋ ಅವರನ್ನು ಸ್ಕ್ರೀನಿಂಗ್ ಕಮಿಟಿಯವರು ಇಂಟರ್‌ವ್ಯೂ ಮಾಡಿ ಒಂದು ತೀರ್ಮಾನವನ್ನು ಕೈಗೊಂಡಿದೆ.

**ಶ್ರೀ ಎನ್. ಹುಚ್ಚಮಾಸ್ತಿಗೌಡ:** ಈ ಬಿ.ಡಿ.ಓ.ಗಳ ಪೈಕಿ ಒಬ್ಬರು ಮಹಿಳಾ ಬಿ.ಡಿ.ಓ. ಇರುವುದರಿಂದ ಅವರಮೇಲೆ ಏನು ಕ್ರಮವನ್ನು ತೆಗೆದುಕೊಂಡಿದ್ದಾರೆ? ಮತ್ತು ಅವರಿಗೆ ಏನು ಸೌಲಭ್ಯಗಳನ್ನು ಒದಗಿಸಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ–** ಈಗ ರಿವರ್ಟ್ ಆಗಿರುವವರಲ್ಲಿ ಯಾರೂ ಮಹಿಳಾ ಬಿ.ಡಿ.ಓ. ಇಲ್ಲ. ಸ್ಕೀಮ್ ಯಶಸ್ವಿಯಾಗದೆ ಇರುವುದರಿಂದ ಆ ಸ್ಕೀಮ್‌ನಲ್ಲಿ ಕೆಲಸ ಮಾಡುತ್ತಿರುವ ರಾಷ್ಟ್ರೀಯ ವಿಸ್ತರಣಾ ಯೋಜನಾ ಅಧಿಕಾರಿಗಳ ಹುದ್ದೆಗಳನ್ನು ಈ ಯೋಜನೆಯಿಂದ ತೆಗೆಯುವುದಕ್ಕೆ ಈ ಸರ್ಕಾರ ಆಲೋಚನೆ ಮಾಡಿದೆ?

**ಶ್ರೀ ಎಸ್. ಸುಬ್ಬಯ್ಯ ನಾಯಕ್–** ಅದು ಯಶಸ್ವಿಯಾಗಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ–** ಯಶಸ್ವಿಯಾಗಿಲ್ಲ ಎನ್ನುವ ಅಭಿಪ್ರಾಯ ಸರಿಯಲ್ಲ. ಏಕೆಂದರೆ, ರಾಷ್ಟ್ರೀಯ ವಿಸ್ತರಣಾ ಯೋಜನೆಯ ಉದ್ದೇಶ ಹಳ್ಳಿಗಳಲ್ಲಿನ ಜನರ ಆರ್ಥಿಕಸ್ಥಿತಿ ಸುಧಾರಿಸಲು ಮತ್ತು ಸಮಾಜ ವಿಕಾಸ ಮಾಡಲು ತೆಗೆದುಕೊಂಡ ಕಾರ್ಯ. ಆದರೆ ಅಲ್ಲಿ ನಾವು ಇವತ್ತು ನಿರೀಕ್ಷಣೆ ಮಾಡಿದಷ್ಟು ಕೆಲಸ ನಡೆಯದೇ ಇರಬಹುದು. ಸಮಾಜದಲ್ಲಿ ಹೆಚ್ಚು ಕೆಲಸವನ್ನು ಅವರು ಮಾಡುತ್ತಿದ್ದಾರೆಂದು ನಾವು ತಿಳಿದುಕೊಂಡಿದ್ದೇವೆ. ಇದು ಬಹಳ ಕಷ್ಟವಾದ ಕೆಲಸ, ಮೊನ್ನೆ ಕೊ–ಆಪರೇಟಿವ್ ಸೆಕ್ಟರಿನಲ್ಲಿ ಅನೇಕ ಲೋಪ ದೋಷಗಳನ್ನು ಇಟ್ಟಿದ್ದಾರೆ. ಅವೆಲ್ಲ ತಮ್ಮಂತಹ ಸಾರ್ವಜನಿಕರೆಲ್ಲರೂ ಮಾಡುವ ಕೆಲಸ. ಇದು ಬಹಳ ದೊಡ್ಡದಾದ ಕೆಲಸ. ಇಂತಹ ಕೆಲಸವನ್ನು ನಾವೂ ಮಾನ್ಯ ಸದಸ್ಯರೂ ಎಲ್ಲರೂ ಸೇರಿ ಮಾಡಿದರೆ, ಈ

ಯೋಜನೆ ಜಯಪ್ರದವಾಗುತ್ತದೆ. ಬರೀ ವಿಸ್ತರಣಾ ಅಧಿಕಾರಿಗಳು ಮಾತ್ರ ಈ ಕೆಲಸ ಮಾಡತಕ್ಕವರೆಂದು ತಿಳಿದುಕೊಂಡರೆ ಅದು ಮಾನ್ಯ ಸದಸ್ಯರ ತಪ್ಪು ಭಾವನೆಯೆಂದು ನಾನು ತಿಳಿದುಕೊಂಡಿದ್ದೇನೆ.

**ಶ್ರೀಮತಿ ರತ್ನಮ್ಮ ಮಾಧವರಾವ್:** ಮಹಿಳಾ ಬಿ.ಡಿ.ಓ. ರಿವರ್ಟ್ ಆಗಿರುವುದು ನಿಜವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಮಹಿಳಾ ಬಿ.ಡಿ.ಓ. ಅಲ್ಲಿಯಾರೂ ಇಲ್ಲ.

**ಶ್ರೀ ಕೆ.ಲಕ್ಕಪ್ಪ** – ಸಮಾಜ ವಿಕಾಸ ಯೋಜನೆ ಬಹಳ ದೊಡ್ಡದು, ರೈತರು ಪ್ರತಿನಿಧಿಯಾಗಿ ಬಂದಿರತಕ್ಕವರು ಇದನ್ನು ಬೇಡ ಎಂದು ಹೇಳುವಾಗ ಈಗಲಾದರೂ ಆ ಯೋಜನೆಯನ್ನು ನಿಲ್ಲಿಸುತ್ತಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಸದಸ್ಯರ ಅಭಿಪ್ರಾಯ ಆ ರೀತಿ ಇರಬಹುದು.

**ಶ್ರೀ ಎಸ್. ವಿ. ಅಗ್ನಿಹೋತ್ರಿ:** ಮುಖ್ಯಮಂತ್ರಿಗಳು ಮಾಡಿದ ಸ್ಟೇ–ಆರ್ಡರ್‌ಗೆ ಈ ರೀತಿ ಮಾಡಿದರೆ ನಮ್ಮಂತಹ ಮಾನ್ಯ ಸದಸ್ಯರ ಗತಿಯೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಉತ್ಸಾಹ ಆಸಕ್ತಿ ಶ್ರದ್ಧೆಯ ನಡತೆಯಿರಬೇಕು.

**ಶ್ರೀ. ಡಿ. ಮುನಿಚಿನ್ನಪ್ಪ (ಬೆಂಗಳೂರು ದಕ್ಷಿಣ).–**

ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಹರಿಜನ ಮತ್ತು ಗಿರಿಜನ ಸಹಕಾರ ಸೇವಾ ಸಂಘಗಳಿಗೆ ಕೊಟ್ಟಿರುವ ಹಣ

(a) ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿರುವ ಎರಡು ಹರಿಜನ ಮತ್ತು ಗಿರಿಜನ ಗೃಹ ಸಹಕಾರ ಸೇವಾ ಸಂಘಗಳಿಗೆ ಕೊಡಲ್ಪಟ್ಟ ಹಣ.

(b) ಮನೆಗಳನ್ನು ಕಟ್ಟಲು ಈ ಸಂಘಗಳು ಅರ್ಜಿಗಳಿಗೆ ಕೊಟ್ಟಿರುವಂತಹ ಹಣ.

(c) ಮೇಲಿನ ಸಂಘಗಳಿಗೆ ಹಣವನ್ನು ವಂತಿಗೆಯಾಗಿ ಕೊಟ್ಟಿದ್ದರು.

(d) ಮನೆ ಇರುವವರೇ ಸಂಘಗಳಿಂದ ಹಣ ಪಡೆದು ಕೊಂಡಿರುವುದು ವಾಸ್ತವವೇ.

(e) ಇದು ನಿಜವಾದಲ್ಲಿ, ಇದರ ಬಗ್ಗೆ ತೆಗೆದು ಕೊಂಡಿರುವಂತಹ ಕ್ರಮ.

**ಶ್ರೀ ಡಿ. ಮುನಿಚಿನ್ನಪ್ಪ:** ಮನೆ ಇಲ್ಲದವರಿಗೆ ಸಾಲಕೊಡಬೇಕೆಂಬುದು ಸರ್ಕಾರದ ಪಾಲಿಸಿ ಇದೆ. ಇದರಲ್ಲಿ ನೂರಕ್ಕೆ 90 ಜನರಿಗೆ ಮನೆ ಇರುವವರಿಗೇ ಸಾಲಕೊಟ್ಟಿದ್ದಾರಲ್ಲಾ ಇದು ಸರ್ಕಾರದ ನೀತಿಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಮನೆ ಇದ್ದವರಿಗೇ ಕೊಟ್ಟಿದ್ದಾರೆ ಎಂಬುದು ಇದುವರೆಗೂ ಸರ್ಕಾರದವರ ಗಮನಕ್ಕೆ ಬಂದಿಲ್ಲ ಅಂಥಾದ್ದು ಇದ್ದರೆ, ನಮಗೆ ಬರಹದ ಮೂಲಕ ತಿಳಿಸಿದರೆ ಸರಿಯಾದ ಕ್ರಮ ಅವರ ಮೇಲೆ ತೆಗೆದುಕೊಳ್ಳುತ್ತೇವೆ.

**ಶ್ರೀ ಡಿ. ಮುನಿಚಿನ್ನಪ್ಪ:** ಕೆಂಪೆಗೌಡ ಸ್ಟ್ಯಾಚ್ಯೂ ಕಟ್ಟಿದ್ದಾರಲ್ಲಾ ಅದೇ ಕಂಟ್ರ್ಯಾಕ್ಟ್‌ರಿಗೆ ಸಾಲ ಕೊಟ್ಟಿದ್ದಾರೆ. ಈ ರೀತಿ ಅಂತಹವರಿಗೆ ಸಾಲ ಕೊಡುವುದು ಸರ್ಕಾರದವರ ಪಾಲಿಸಿಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಮನೆ ಇದ್ದವರಿಗೆ ಕೊಡುವುದು ಸರ್ಕಾರದ ಪಾಲಿಸಿ ಅಲ್ಲ. ಸರ್ಕಾರದ ಪಾಲಿಸಿ ಪ್ರಕಾರ ಯಾರಿಗೆ ಮನೆ ಇಲ್ಲವೋ ಅಂಥವರಿಗೇ ಕೊಡಬೇಕು. ತಾವು ಹೇಳುವಂತೆ 82 ಜನರಲ್ಲಿ ಯಾರಾದರೂ ಅಂಥವರಿಗೆ ಮನೆ ಇದ್ದಂಥವರಿಗೆ ಸಾಲ ಕೊಟ್ಟಿದ್ದರೆ ಅದನ್ನು ನಮ್ಮ ಗಮನಕ್ಕೆ ತಂದರೆ ಆ ಸಾಲವನ್ನು ರೀ ಕನ್‌ವೇ ಮಾಡಿ ವಾಪಸು ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ.

**ಶ್ರೀ ಡಿ. ಮುನಿಚಿನ್ನಪ್ಪ:** 82 ಜನರಲ್ಲಿ ಸುಮಾರು 8–10 ಜನಕ್ಕೆ ಮನೆ ಇಲ್ಲದೇ ಇರಬಹುದು ಮಿಕ್ಕವರೆಲ್ಲರಿಗೂ ಮನೆ ಇವೆ, ಈ ವಿಚಾರದಲ್ಲಿ ಮಾನ್ಯ ಮುಖ್ಯ ಮಂತ್ರಿಗಳಿಗೂ ಸಹ ಕಾಗದ ಬರೆದಿದ್ದೇನೆ.

**ಸಭಾಪತಿಗಳು** – ಹೆಸರು ತಿಳಿಸಿ ಕಾಗದ ಬರೆಯಿರಿ, ತನಿಖೆ ಮಾಡುತ್ತಾರೆ.

**ಶ್ರೀ ಡಿ. ಮುನಿಚಿನ್ನಪ್ಪ** – ಬರೆದಿದ್ದೇನೆ ಆದ್ದರಿಂದ ಈ ವಿಚಾರದಲ್ಲಿ ತನಿಖೆ ಮಾಡಿಸುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಖಂಡಿತವಾಗಿಯೂ ತನಿಖೆ ಮಾಡಿಸುತ್ತೇನೆ.

**ಶ್ರೀ ಸಿದ್ದಯ್ಯ ಕಾಶೀಮಠ್:** ಮನೆ ಕಟ್ಟುವುದಕ್ಕೆ ಸಾಲ ಕೊಡುವಾಗ ಅವರ ಮೇಲೆ ಕೆಲವು ನಿರ್ಬಂಧಗಳನ್ನು ಹಾಕಿ ಕೊಡುತ್ತಾರೆ ಅಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಹೌದು, ಅವರ ಹತ್ತಿರ ಸೈಟು ಇರಬೇಕು, ಸೈಟು ಇಲ್ಲದೇ ಇದ್ದರೆ ಅದನ್ನು ತೆಗೆದು ಕೊಳ್ಳುವುದಕ್ಕೆ ಬೇರೆ ರೂಪದಲ್ಲಿ ಸಾಲ ಕೊಡುತ್ತಾರೆ. 1500–3000 ರೂಪಾಯಿಗಳವರೆಗೂ ಸಾಲ ಕೊಡಲಾಗುತ್ತದೆ ಅದನ್ನು ಅವರು 20 ವರ್ಷದಲ್ಲಿ ತೀರಿಸಬೇಕೆಂದು ಇದೆ. ಷೇರ್ ಬಂಡವಾಳವೂ ಕೂಡ 10 ರೂಪಾಯಿನ ಒಂದು ಷೇರು ಇದೆ.

**ಶ್ರೀ ಎಚ್. ಆರ್. ಕೇಶವಮೂರ್ತಿ** – ಗ್ರಾಮಾಂತರ ಪ್ರದೇಶಗಳಲ್ಲಿ ಅದರಲ್ಲೂ ಈ ತಾಲ್ಲೂಕಿಗೆ ಸಂಬಂಧಪಟ್ಟ ಹಾಗೆ ದುಡ್ಡು ತೆಗೆದುಕೊಂಡು ಹೋಗಿ ಅನೇಕ ಸಂದರ್ಭಗಳಲ್ಲಿ ದುರ್ವಿನಿಯೋಗವಾಗುತ್ತಾ ಇದೆ. ಇದನ್ನು ತಪ್ಪಿಸುವುದಕ್ಕೆ ನೇರವಾಗಿ ದುಡ್ಡು ಕೊಡುವುದನ್ನು ನಿಲ್ಲಿಸಿ ಹೌಸ್ ಬಿಲ್ಡಿಂಗ್ ಸ್ಕೀಮ್ ಮಾಡಿ ಪ್ರೀ ಫ್ಯಾಬ್ರಿಕೇಟೆಡ್ ಮನೆಗಳನ್ನು ಒದಗಿಸುವುದು ಒಳ್ಳೆಯದಲ್ಲವೇ? ಈ ರೀತಿ ದೇಶಾದ್ಯಂತ ಒಂದು ವ್ಯವಸ್ಥೆಯನ್ನು ಏಕೆ ಮಾಡಬಾರದು.

**ಶ್ರೀ ಕೊಂಡಜ್ಜಿ ಬಸಪ್ಪ** – ಸೊಸೈಟಿಗಳ ಮ್ಯಾನೇಜ್‌ಮೆಂಟ್‌ನವರು ಈ ಸಾಲವನ್ನು ಕೊಡುತ್ತಾ ಇದ್ದಾರೆ. ಇಂತಹ ಅನ್ಯಾಯಗಳನ್ನು ಮಾಡಿದರೆ ಅವರ ಗಮನಕ್ಕೆ ಬರುತ್ತದೆ ಆಡಳಿತ ಅವರ ಕೈಯಲ್ಲೇ ಇರುತ್ತದೆ. ಏನಿದ್ದರೂ ಸೂಪರ್‌ವೈಸರಿ ಡ್ಯೂಟೀಸ್ ಮಾತ್ರ ಇಲಾಖೆಯವರು ಮಾಡುತ್ತಾ ಇದ್ದಾರೆ. ಸಾಲ ಕೊಡುವವರು ಇಲಾಖೆಯವರಲ್ಲ. ಆದ್ದರಿಂದ ಮ್ಯಾನೇಜ್‌ಮೆಂಟ್‌ನವರು ಮನೆ ಇಲ್ಲದವರಿಗೆ ಸಾಲಕೊಡಬೇಕೆಂಬುದನ್ನು ತಿಳಿದುಕೊಳ್ಳಬೇಕು. ಅದರಂತೆ ಕೊಡಬೇಕು. ತಾವು ಹೇಳುತ್ತಾ ಇರುವಂತೆ ಮನೆ ಇರುವವರಿಗೂ ಸಾಲ ಕೊಟ್ಟಿದ್ದು ಹಣ ದುರುವ್ಯಯವಾಗುತ್ತಾ ಇದ್ದರೆ ಅದನ್ನು ಸರ್ಕಾರದವರ ಗಮನಕ್ಕೆ ತಂದರೆ ಸೂಕ್ತವಾದಂಥ ಕ್ರಮವನ್ನು ತೆಗೆದುಕೊಳ್ಳುತ್ತೇವೆ.

**ಸಭಾಪತಿ** – ಪ್ರೀ – ಫ್ಯಾಬ್ರಿಕೇಟೆಡ್ ಮನೆಗಳು ತುಂಬಾ ಕಡಿಮೆ ಬೆಲೆಯುಳ್ಳದ್ದು.

**ಶ್ರೀ ಎಚ್. ಆರ್. ಕೇಶವಮೂರ್ತಿ**– ಇದು ಕಡಿಮೆ ಬೆಲೆಯ ಪ್ರಶ್ನೆಯಲ್ಲ ಆದರೆ ಅಲ್ಲಿ ಸರ್ಕಾರ ಕೊಟ್ಟಿರುವ ಹಣ ಒಳ್ಳೆಯದಕ್ಕೆ ಬಳಕೆಯಾಗುತ್ತದೆ.

**ಶ್ರೀ ಡಿ. ಮುನಿಚಿನ್ನಪ್ಪ** – ನಾನೇ ಒಂದು ಕಡೆ ನಿವೇಶನವನ್ನು ತೋರಿಸಿಕೊಟ್ಟೆ ಅಲ್ಲಿ 60–80 ಸೈಟ್‌ನ್ನು ಮಾಡಿ 4 ಸಂಸಾರಕ್ಕೆ ವಿಂಗಡಿಸಿದ್ದಾರೆ ಈ ರೀತಿ ಹಣವನ್ನು ತೆಗೆದುಕೊಂಡು ಸರ್ಕಾರದ ದುಡ್ಡು ಹಾಳಾಗುತ್ತಾ ಇರುವುದನ್ನು ದಯವಿಟ್ಟು ತನಿಖೆ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವಿಚಾರ ತಿಳಿಸಿದ್ದೀರಿ. ಬರಹದ ಮೂಲಕ ತಿಳಿಸಿದರೆ ಖಂಡಿತವಾಗಿಯೂ ತನಿಖೆ ಮಾಡಿಸಿ ಸೂಕ್ತ ಕಂಡ ಕಾರ್ಯಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಡಿ. ಮುನಿಚಿನ್ನಪ್ಪ** – ಬೆಂಗಳೂರು ಸೌತ್ ತಾಲ್ಲೂಕಿನಲ್ಲಿ ಎರಡು ಸೊಸೈಟಿಗಳು ಇವೆ. ಈ ಎರಡರಲ್ಲಿ ಒಬ್ಬ ಬೋವಿ ಜನಾಂಗದವನಿಗೂ ಸಾಲ ಕೊಟ್ಟಿಲ್ಲ. ನಾನೂ ಕೂಡ ಅಲ್ಲಿ ಒಬ್ಬ ಷೇರ್ ಹೋಲ್ಡರ್ ಅಲ್ಲಿಗೆ 60–70 ಜನ ಷೇರು ಹೋಲ್ಡ್‌ರುಗಳನ್ನು

ಕಲೆಕ್ಟ್ ಮಾಡಿಕೊಟ್ಟಿದ್ದೇನೆ.ಇದಕ್ಕೆ ಗಮನಕೊಟ್ಟು ಇನ್ನು ಮುಂದಾದರೂ ಜನರಿಗೆ ಸಹಾಯ ಮಾಡಿಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ**– ಒಂದು ಸೊಸೈಟಿಯಲ್ಲಿ 82 ಜನ, ಇನ್ನೊಂದರಲ್ಲಿ 10 ಜನಕ್ಕೆ ಕೊಟ್ಟಿದ್ದಾರೆ, ತಾವು ಹೇಳುವ ಅರ್ಥ ತಮ್ಮ ಜನಾಂಗದವರೊಬ್ಬರಿಗೂ ಕೊಟ್ಟಿಲ್ಲ ಎಂದು ಆ ರೀತಿ ಏನಾದರೂ ಬೋವಿ ಅಥವಾ ಲಂಬಾಣಿ ಜನಾಂಗದವರಿಗೆ ಕೊಡದಿದ್ದರೆ, ಅವರು ಸದಸ್ಯರಾಗಿದ್ದೂ, ಅವರ ಅರ್ಜಿ ಬಂದಿದ್ದರೆ ಅವರಿಗೆ ಮಂಜೂರು ಮಾಡಿ ಎಂದು ಸೂಚನೆ ಕೊಡುತ್ತೇವೆ.

**ಶ್ರೀ ಎನ್. ನಂಜೇಗೌಡ:** ಅನೇಕ ಸೊಸೈಟಿಗಳಿಂದ ಹಣಕ್ಕಾಗಿ ಅರ್ಜಿ ಬಂದಿದ್ದರೂ ಕೂಡ ಅವು ರಿಜಿಸ್ಟರಾಗಿದ್ದರೂ ಅವಕ್ಕೆ ಕೊಡದಿರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ**– ಈ ಎರಡು ಸೊಸೈಟಿಗಳಿಗೆ ಒಂದಕ್ಕೆ 19 ಸಾವಿರ ಚಿಲ್ಲರೆ, ಇನ್ನೊಂದಕ್ಕೆ ಒಂದು ಲಕ್ಷ ಚಿಲ್ಲರೆ ರೂಪಾಯಿಗಳನ್ನು ಕೊಟ್ಟಿದೆ. ಒಂದು ಸೊಸೈಟಿ ಹಣ ಡ್ರಾ ಮಾಡಿಲ್ಲ. ಇನ್ನೊಂದು 19 ಸಾವಿರ ಚಿಲ್ಲರೆ ಹಣವನ್ನು ಪೂರ್ಣವಾಗಿ ಡ್ರಾ ಮಾಡಿದೆ. ಈಗಿರುವ ಅಲಾಟ್‌ಮೆಂಟ್ ಕಡಿಮೆ. ಈ ವರ್ಷ 6 ಲಕ್ಷ ರೂಪಾಯಿ ಮಾತ್ರ ಅಲಾಟ್‌ಮೆಂಟ್ ಇತ್ತು. ಎಲ್. ಐ.ಸಿ. ಯಿಂದ ಬರಬೇಕಾದ ಹಣಕ್ಕೆ ನಾವು ಗ್ಯಾರಂಟಿ ಕೊಟ್ಟು ವ್ಯವಹಾರ ನಡೆಸಲಾಗುತ್ತದೆ. ಒಂದು ಕೋಟಿ ರೂಪಾಯಿ ಕೇಳಿದೆ. ಅದಕ್ಕೆ ಇಂಡಿಯಾ ಸರಕಾರದ ಅನುಮತಿ ಬೇಕು. ಆ ಹಣ ಬಂದ ತಕ್ಷಣ ಎಲ್ಲರಿಗೂ ಸಹಾಯಮಾಡಲು ಅನುಕೂಲವಾಗಬಹುದು.

**ಶ್ರೀ ಎನ್. ನಂಜೇಗೌಡ** – ಬಂದಿರುವ ಹಣವನ್ನು ಎಲ್ಲ ಸೊಸೈಟಿಗಳಿಗೂ ಸಮನಾಗಿ ಹಂಚುವುದು ನ್ಯಾಯವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಹಾಗೆ ಮಾಡುವುದು ಕಷ್ಟ. ಬಂದ ಹಣವನ್ನು ಅವಶ್ಯಕತೆ ನೋಡಿ ಹಂಚಬೇಕಾಗುತ್ತದೆ. ಕೆಲವರು ಮೊದಲು ಕೇಳಿದವರಿಗೆ ಮೊದಲು ಕೊಡಬೇಕೆಂದು ಹೇಳುತ್ತಾರೆ, ತಾವು ಹೇಳುವುದೇ ಒಂದು ರೀತಿ. ಎಲ್ಲ ವಿಚಾರಗಳನ್ನು ಗಮನಿಸಿ ಸಾಧ್ಯವಾದಷ್ಟು ಮಟ್ಟಿಗೆ ಎಲ್ಲರಿಗೂ ಸರಿಯಾಗಿ ಹಂಚಲು ಪ್ರಯತ್ನಮಾಡುತ್ತೇವೆ.

**ಶ್ರೀ ಎಂ.ಎನ್. ಕೃಷ್ಣಸಿಂಗ್:** ತಾವು ಹೇಳಿದ ಹಾಗೆ ಮಾಡಿದರೆ ಬಾಯಿದ್ದವನು ಬರದಲ್ಲಿ ಬದುಕಿದ ಎಂದಾಗುವುದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಅದು ತಮ್ಮ ಅಭಿಪ್ರಾಯ. ಕೆಲವು ಕಡೆ ರಿಕಾರ್ಡು ಅಸಿಸ್ಟೆಂಟ್ ರಿಜಿಸ್ಟ್ರಾರರಿಂದ, ರಿಜಿಸ್ಟ್ರಾರರಿಗೆ ಬರುತ್ತದೆ. ಕೆಲವು ವೇಳೆ ಬಾರದೆ

ಇರುವ ಸಂದರ್ಭವೂ ಇರುತ್ತದೆ, ಸರಕಾರದಲ್ಲಿ ಅಥವಾ ರಿಜಿಸ್ಟ್ರಾರರಲ್ಲಿ ಪೆಂಡಿಂಗ್ ಇದೆ ಎಂದು ಹೇಳುತ್ತಾರೆ. ರಿಜಿಸ್ಟ್ರಾರರಿಂದ ಶಿಫಾರಸಾಗಿ ಬಂದರೆ ಹಣವಿದ್ದರೆ ಕೊಡುತ್ತೇವೆ.

**ಶ್ರೀ ಸಂಜೀವನಾಥ :** ಕಾಂಗ್ರೆಸ್ ವ್ಯಕ್ತಿಗಳ ಅರ್ಜಿದಾರರು ಮಾತ್ರ ಲೋನ್ ನೀಡಿರುವುದು ವಾಸ್ತವವೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಇದು ಸರಿಯಲ್ಲ.

**ಶ್ರೀ ಡಿ. ಮುನಿಚಿನ್ನಪ್ಪ:** ಈಗ ಹಳೆಯುಮನೆಯುನ್ನು ಕೊಟ್ಟ ಹಣದಲ್ಲಿ ರಿಪೇರಿಮಾಡುತ್ತಿದ್ದಾರೆ, ಹೊಸತು ಕಟ್ಟುತ್ತಿಲ್ಲ. ಇದನ್ನು ನೋಡಿ ಸೂಕ್ತ ಕ್ರಮ ಕೈಗೊಳ್ಳುತ್ತೀರಾ?

**ಶ್ರೀ ಎನ್. ನಂಜೇಗೌಡ:** ಈಗ ಉಳಿದಿರುವ ಸುಮಾರು 60 ಸಾವಿರ ರೂಪಾಯಿಗಳನ್ನು ವಿತ್‌ಡ್ರಾಮಾಡಿ ತಮ್ಮ ಟೇಬಲ್ ಮೇಲಿರುವ ರಿಕಾರ್ಡಿನಲ್ಲಿ ನಮೂದಾಗಿರುವ ಸೊಸೈಟಿಗಳಿಗೆ ಹಂಚುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ**– ಹಾಗೆ ಮಾಡುವುದಕ್ಕಾಗುವುದಿಲ್ಲ. ಕೆಲಸ ಪ್ರಾರಂಭವಾದಾಗ ಅರ್ಧ ಹಣ ಕೊಡುತ್ತೇವೆ, ರೂಫಿಂಗ್ ಲೆವಲ್ಲಿಗೆ ಬಂದಾಗ ಉಳಿದ ಅರ್ಧವನ್ನು ಕೊಡುತ್ತೇವೆ. ಆದುದರಿಂದ ಮಾನ್ಯ ಸದಸ್ಯರು ಹೇಳಿದ ಹಾಗೆ ಮಾಡುವುದಕ್ಕಾಗುವುದಿಲ್ಲ.

**ಶ್ರೀ ಆರ್. ಎನ್. ಲಕ್ಷ್ಮೀಪತಿ** – ಈಗ ಕೊಡುತ್ತಿರುವ ಹಣ ನಿಮ್ಮ ವರ್ಗದವರಿಗೆ ಸಾಲದಿರುವುದರಿಂದ ಎಲ್. ಐ. ಸಿ. ನಿಂದ ತರಿಸಿಕೊಡಬೇಕು. ಹಾಗೆ ತರಿಸಲು ಮಾಡಿರುವ ಪ್ರಯತ್ನ ಯಾವ ಹಂತದಲ್ಲಿ ಇದೆ.

**ಶ್ರೀ ಕೊಂಡಜ್ಜಿ ಬಸಪ್ಪ**– ಬಡ್ಡಿ ದರ ಕಡಿಮೆ ಮಾಡುವ ವಿಚಾರ ವ್ಯವಹಾರದಲ್ಲಿದೆ, ಎಲ್. ಐ.ಸಿ ನವರು ಕಡಿಮೆಮಾಡಲು ಸಾಧ್ಯವಿಲ್ಲವೆಂದು ಹೇಳುತ್ತಿದ್ದಾರೆ. ಆದಾದಮೇಲೆ ಇಂಡಿಯಾ ಸರಕಾರದ ಅನುಮತಿ ಪಡೆಯಬೇಕು. ಈ ವಿಚಾರದಲ್ಲಿ ರಿಸರ್ವ್ ಬ್ಯಾಂಕಿನೊಂದಿಗೆ ಹಣಕಾಸಿನ ಇಲಾಖೆ ವ್ಯವಹಾರ ನಡೆಸುತ್ತಿದೆ.

**ಶ್ರೀ ಡಿ. ಮುನಿಚಿನ್ನಪ್ಪ:** ಒಂದು ಸೊಸೈಟಿಯ ಪ್ರೆಸಿಡೆಂಟರು ಹಿಂದಿನ ಗೃಹಖಾತೆಯ ಉಪಮಂತ್ರಿಗಳೆಂಬುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಬಂದಿದೆ.

**ಶ್ರೀ ಡಿ.ಮುನಿಚಿನ್ನಪ್ಪ:** ಅದೇ ಸೊಸೈಟಿಯಲ್ಲಿ ನಾನು ಹೇಳಿದಂತೆ ಅವ್ಯವಸ್ಥೆಯಾಗಿರುವುದು. ಮೈನಾರಿಟಿ ಕಮ್ಯೂನಿಟಿಗಳಾದ ಲಂಬಾಣಿ, ಬೋವಿ ಮತ್ತು ಕೊರಚರಿಗೆ ಒಂದು ಸೊಸೈಟಿ ಮಂಜೂರುಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ**– ಹಾಗೆ ಪ್ರತ್ಯೇಕ ಸೊಸೈಟಿ ಮಾಡುವುದಕ್ಕಾಗುವುದಿಲ್ಲ. ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ಗೆ ಒಂದು ಸೊಸೈಟಿ ಇರಬೇಕೆಂಬುದು ನಮ್ಮ ತತ್ವ, ಅದರ ಸದಸ್ಯರಾಗಿ ಅರ್ಜಿ ಹಾಕಿದರೆ ಸಾಲ ಸಿಕ್ಕುವ ಹಾಗೆ ವ್ಯವಸ್ಥೆಮಾಡೋಣ.

**ಶ್ರೀ ಎಂ. ಎನ್. ಕೃಷ್ಣಸಿಂಗ್:** ಒಂದೇ ಜನಾಂಗ ಕೆಲವು ಕಡೆ ಇದ್ದರೆ ಏನು ಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ**– ಈಗ ತಾಲ್ಲೂಕು ಮಟ್ಟದಲ್ಲಿ ಸೊಸೈಟಿ ಮಾಡುವುದು. ಒಂದು ತಾಲ್ಲೂಕಿನಲ್ಲಿ ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ಗೆ ಒಂದು ಸೊಸೈಟಿ ಇರಬೇಕೆಂದಿದೆ. ಒಂದು ವೇಳೆ ತಾವು ಹೇಳುವಂತಿರುವ ಕಡೆ ಒಂದು ಕಾಲೋನಿ ಪ್ರತ್ಯೇಕವಾಗಿದ್ದರೆ ತಮ್ಮ ಸಲಹೆ ವಿಚಾರಮಾಡಬಹುದು.

**ಶ್ರೀ ಸಿದ್ದಯ್ಯ ಕಾಶೀಮಠ್** – ಬಡ್ಡಿ ದರ ಜಾಸ್ತಿ ಇರುವುದನ್ನು ಕಡಿಮೆಮಾಡಲು ಸಾಧ್ಯವೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಈಗ ಶೇಕಡ 2 ರೂಪಾಯಿ ಛಾರ್ಜುಮಾಡುವುದು. ಶೇಕಡ 5 ಇರುವುದರಲ್ಲಿ 3ರನ್ನು ಸೋಷಿಯಲ್ ವೆಲ್‌ಫೇರ್ ಇಲಾಖೆ ಕೊಡುವುದು. ಶೇಕಡ 2 ಕೂಡ ಜಾಸ್ತಿ ಎಂದರೆ ಪರಿಶೀಲಿಸೋಣ.

## ರಾಜ್ಯದಲ್ಲಿರುವ ಸಾರಿಗೆ ಸಹಕಾರ ಸಂಘಗಳು

11ನೇ ಮಾರ್ಚ್ 1965

**ಶ್ರೀ ರಾಜಗೋಪಾಲ್ (ಕೆ.ಜಿ.ಎಫ್).–**

(a) ರಾಜ್ಯದಲ್ಲಿ ಸಾರಿಗೆ ಸಹಕಾರಿ ಸಂಘಗಳ ಸಂಖ್ಯೆ

(b) ಪ್ರವಾಸೋದ್ಯಮವನ್ನು ಅಭಿವೃದ್ಧಿ ಪಡಿಸಲು ಕಳೆದ ಮೂರು ವರ್ಷಗಳಲ್ಲಿ ಈ ಸಂಘಗಳಿಗೆ (ಸೊಸೈಟಿಗಳಿಗೆ) ಹಂಚಿಕೆ ಮಾಡಿರುವ ಕಾರುಗಳ ಸಂಖ್ಯೆ.

**ಶ್ರೀ. ಎಸ್. ರಾಜಗೋಪಾಲ್** : ನಾನು 10 ಸೊಸೈಟಿಗಳ ಹೆಸರುಗಳನ್ನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ :**

(a) 10

(b) 01–02–1962 ರಿಂದ 31–12–1965 ರವರೆಗೆ 136.

**ಶ್ರೀ ಕೊಂಡಜ್ಜಿ ಬಸಪ್ಪ:** ಬೆಂಗಳೂರು ನಗರದಲ್ಲಿ ನಾಲ್ಕು ಸಹಕಾರ ಸಂಘಗಳಿವೆ.

ಮೊದಲನೆಯದು ಪ್ರವಾಸಿಗರ ಮತ್ತು ಸಾರಿಗೆ ಸಹಕಾರ ಸಂಘ ನಿಯಮಿತ ಚಾಮರಾಜಪೇಟೆ.

ಎರಡನೆಯದು : ಬೆಂಗಳೂರು ರಾಷ್ಟ್ರೀಯ ಸಹಕಾರ ಪ್ರವಾಸಿಗರ ಮತ್ತು ಸಾರಿಗೆ ಸಹಕಾರಗಳ ನಿಯಮಿತ, ನರಸಿಂಹರಾಜ ರೋಡ್.

ಮೂರನೆಯದು: ಬೆಂಗಳೂರು ಜಿಲ್ಲಾ ಟ್ಯಾಕ್ಸಿ ಚಾಲಕರ ಸಹಕಾರ ಸಂಘ, ಚಾಮರಾಜಪೇಟೆ, ಬೆಂಗಳೂರು.

ನಾಲ್ಕನೆಯದು: ಮಲ್ಲೇಶ್ವರಂ ಸ್ಕೂಟರ್ಸ್ ಮತ್ತು ಟ್ಯಾಕ್ಸಿ ಚಾಲಕರ ಸಾರಿಗೆ ಸಂಘ ಮಲ್ಲೇಶ್ವರಂ ಮತ್ತು ಬೀದರ್, ಮೈಸೂರು, ಕೂರ್ಗ್, ಚಿಕ್ಕಮಗಳೂರಿನಲ್ಲಿ ಒಂದೊಂದು ಮತ್ತು ಬೆಳಗಾಂ ಜಿಲ್ಲೆಯಲ್ಲಿ ಎರಡು.

**ಶ್ರೀ ಎಸ್. ರಾಜಗೋಪಾಲ್:** ಈ ಸಹಕಾರ ಸಂಘಗಳಿಗೆ ಕಾರುಗಳನ್ನು ಹಂಚಿಕೆ ಮಾಡಲು ಸರ್ಕಾರ ಅಂಗೀಕರಿಸಿರುವ ನೀತಿ (ಪಾಲಿಸಿ)ಯನ್ನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಸಾಮಾನ್ಯವಾಗಿ, ರಸ್ತೆ ಸಾರಿಗೆಯ 'ಸಾರಿಗೆ ಆಯುಕ್ತರು' ಈ ಸಾರಿಗೆ ಸಹಕಾರ ಸಂಘಗಳಿಗೆ ಕಾರುಗಳನ್ನು ಹಂಚಿಕೆ ಮಾಡಲು ಶಿಫಾರಸ್ಸು ಮಾಡುತ್ತಾರೆ. ಅವರ ಶಿಫಾರಸ್ಸಿನ ಮೇಲೆ, ಸರ್ಕಾರವು ಹಂಚಿಕೆಯನ್ನು ಮಾಡುತ್ತದೆ. ಇದರಲ್ಲಿ 50% ಸೊಸೈಟಿಯ ಲೋನ್‌ನ್ನು ಕೊಡಬಹುದು/ಕಾರಿನ ಬೆಲೆಯ 2/3 ರಷ್ಟನ್ನು ಕೇಂದ್ರ ಸಹಕಾರ ಬ್ಯಾಂಕ್ ಕೊಡಬಹುದು.

**ಶ್ರೀ ಜಿ. ದುಗ್ಗಪ್ಪ :** ಪ್ರತಿಯೊಂದು ಸೊಸೈಟಿಯಲ್ಲಿರುವ ಸದಸ್ಯರುಗಳ ಸಂಖ್ಯೆಯನ್ನು ಸರ್ಕಾರ ಹೇಳಬೇಕು?

**ಶ್ರೀ ಕೊಂಡಜ್ಜಿ ಬಸಪ್ಪ :** ಚಾಮರಾಜಪೇಟೆ ಸಹಕಾರ ಸಂಘದಲ್ಲಿ 243 ಸದಸ್ಯರು. ರಾಷ್ಟ್ರೀಯ ಸಹಕಾರ ಪ್ರವಾಸಿಗ ಮತ್ತು ಸಾರಿಗೆ ಸಹಕಾರ ಸಂಘ, ನರಸಿಂಹರಾಜ ರೋಡ್‌ನಲ್ಲಿ 193 ಸದಸ್ಯರು ಟ್ಯಾಕ್ಸಿ ಚಾಲಕರ ಸಹಕಾರ ಸಂಘ ಚಾಮರಾಜಪೇಟೆಯಲ್ಲಿ 101 ಸದಸ್ಯರು, ಮಲ್ಲೇಶ್ವರಂ ಸಹಕಾರ ಸಂಘದಲ್ಲಿ 116 ಸದಸ್ಯರು ಬೀದರ್ ಸೊಸೈಟಿಯಲ್ಲಿ 16 ಸದಸ್ಯರು, ಮೈಸೂರು ಮತ್ತು ಚಿಕ್ಕಮಗಳೂರು ಸೊಸೈಟಿಗಳು ಇತ್ತೀಚೆಗೆ ಪ್ರಾರಂಭವಾಗಿವೆ ಮತ್ತು ಇದುವರೆಗೂ ಅವು ಕಾರ್ಯ ನಿರ್ವಹಿಸುತ್ತಿಲ್ಲ.

**ಶ್ರೀ ಸಿದ್ದಯ್ಯ ಕಾಶೀಮಠ :** ಈ ಕಾರುಗಳು ನಗದು/ಲೋನಿನ ಆಧಾರದ ಮೇಲೆ ಹಂಚಿಕೆಯಾಗಿದೆಯೆಂದು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ :** ಅವುಗಳನ್ನು ಸೊಸೈಟಿಗಳಿಗೆ ಹಂಚಿಕೆ ಮಾಡಲಾಗಿದೆ. ಅದರಲ್ಲಿ ಶೇಕಡ 50% ರಷ್ಟು ಕಾರುಗಳನ್ನು ಲೋನಿನ ಆಧಾರದ ಮೇಲೆ ಸಹಕಾರ–ಸಂಘಗಳ ಸದಸ್ಯರುಗಳಿಗೆ ಹಂಚಿಕೆ ಮಾಡಲಾಗಿದೆ.

**ಶ್ರೀ ಕೆ. ಲಕ್ಕಪ್ಪ** – ಈ ಸಹಕಾರ ಸಂಘಗಳು 1962 ರಿಂದ ಎಷ್ಟು ಸಾರ್ತಿ ಆಡಿಟ್ಟಾಗಿವೆ ? ಲೆಕ್ಕಪತ್ರಗಳೆಲ್ಲಾ ಸಮರ್ಪಕವಾಗಿವೆಯೇ ?

**ಶ್ರೀ ಕೊಂಡಜ್ಜಿ ಬಸಪ್ಪ :** ಈ ಪ್ರಶ್ನೆಯಿಂದ ಅದು ಉದ್ಭವವಾಗುವುದಿಲ್ಲ.

**ಶ್ರೀ ಎಸ್.ರಾಜಗೋಪಾಲ:** ಬೆಂಗಳೂರಿನಿಂದ 125 ಮೈಲಿಯ ದೂರದಲ್ಲಿ MYD 5510 ನಂಬರಿನ ಕಾರು ಅಪಘಾತಕಿಡಾಗಿರುವುದು ಸರ್ಕಾರಕ್ಕೆ ತಿಳಿದಿದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬೇಕು.

**ಸಭಾಪತಿ:** ಇದು ಹೇಗಾಯಿತು?

**ಶ್ರೀ ಎಸ್. ರಾಜಗೋಪಾಲ್ :** ಬೆಂಗಳೂರಿನಿಂದ ಬೇರೆ ಸ್ಥಳಗಳಿಗೆ ಹೋಗಲು ಆ ಕಾರಿಗೆ ಪರ್ಮಿಟ್ ಇರಲಿಲ್ಲ.

**ಸಭಾಪತಿ:** ಈ ಪ್ರಶ್ನೆಯು ಸಹಕಾರ ಸಂಘಗಳ ಸಂಖ್ಯೆ ಮತ್ತು ಹಂಚಿಕೆ ಮಾಡಿರುವ ಕಾರುಗಳಿಗೆ ಸಂಬಂಧಿಸಿದೆ.

**ಶ್ರೀ ಎಸ್. ರಾಜಗೋಪಾಲ:** ಪರ್ಮಿಟ್‌ಗಳು ಸಹ ಸೇರಿವೆ. ಪರ್ಮಿಟ್ ಇಲ್ಲದೇನೇ ಬೆಂಗಳೂರಿನಿಂದ ಹೊರಕ್ಕೆ ತೆಗೆದುಕೊಂಡು ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದನ್ನು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ :** ಇದನ್ನು ಸರ್ಕಾರದ ಗಮನಕ್ಕೆ ತಂದಿಲ್ಲ.

**ಶ್ರೀ ಕೆ.ಪಿ. ರೇವಣಸಿದ್ದಪ್ಪ:** ಕೋ–ಆಪರೇಟಿವ್ ಬೇಸಿಸ್ ಮೂಲಕ ನಡೆಸತಕ್ಕವರು ಲೈಸನ್ಸ್ ಇಲ್ಲದೆ ಪರ್ಮಿಟ್ ಇಲ್ಲದೆ ಕಾರುಗಳನ್ನು ಮಾರಾಟ ಮಾಡಬಹುದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಇಲ್ಲ.

**ಶ್ರೀ ವಿ.ಎಂ. ದೇವ್:** ಈ ಸೊಸೈಟಿಗಳಿಗೆ ಮಾರಾಟ ಮಾಡಿದ ಕಾರುಗಳನ್ನು ಅಥವಾ ಅಲಾಟ್ ಮಾಡಿದ ಕಾರುಗಳನ್ನು ಬೇರೆಯವರಿಗೆ ಮಾರಾಟ ಮಾಡಬಾರದೆಂದು ಕಂಡೀಷನ್ ಹಾಕಲಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ :** ಸಾರ್ವಜನಿಕರಿಗೆ ಸಾರಿಗೆಯಾಗಿ ಉಪಯೋಗಿಸಬೇಕೆಂಬ ಕಂಡೀಷನ್ ಇದೆ. ಆದರೆ ಸೊಸೈಟಿಗಳಿಗೆ ಹಂಚಿಕೆ ಮಾಡಿರುವ ಕಾರುಗಳಲ್ಲಿ ಸೊಸೈಟಿಗಳೇ ಶೇಕಡ 50 ರಷ್ಟು ಕಾರುಗಳನ್ನು ಸಾರ್ವಜನಿಕ ಉಪಯೋಗಕ್ಕೆ ಇಟ್ಟುಕೊಳ್ಳಬೇಕು ಮತ್ತು ಉಳಿದ ಶೇಕಡ 50 ರಷ್ಟು ಕಾರುಗಳನ್ನು ಹೈರ್ ಪರ್ಚೇಸ್ ~ಧಾನದ ಮೂಲಕ ಸೊಸೈಟಿಯ ಸದಸ್ಯರುಗಳಿಗೆ ಹಂಚಿಕೆ ಮಾಡಲಾಗಿದೆ.

~ವ ಸದಸ್ಯರು ಕಾರುಗಳನ್ನು ಹೈರ್ ಪರ್ಚೇಸ್ ವಿಧಾನ ಮೂಲಕ ~ೊಂಡಿದ್ದಾರೆ ಅವರುಗಳು ಬೆಲೆಯ ಮುಂಗಡವಾಗಿ ಕಾರಿನ ಬೆಲೆಯ $^1/_3$ ~ಡುತ್ತಾರೆ ಮತ್ತು ಕಾರಿನ ಬೆಲೆಯ 2/3 ರಷ್ಟು ಸೊಸೈಟಿಯೇ ನೇರವಾಗಿ ~ಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ನ ಮುಖಾಂತರ ಸೊಸೈಟಿಗೆ

~ಸಿದ್ದಪ್ಪ: ಈ ಟೂರಿಸ್ಟ್ ಸೆಂಟರುಗಳನ್ನು ತಾಲ್ಲೂಕ್ ಇಲ್ಲವೇ ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ಮಾಡಬೇಕೆಂಬ

**ಶ್ರೀ ಕೊಂಡಜ್ಜಿ ಬಸಪ್ಪ** – ಪ್ರೇಕ್ಷಣೀಯ ಸ್ಥಳಗಳಿದ್ದರೆ ಇವುಗಳನ್ನು ಪ್ರಾರಂಭ ಮಾಡಬಹುದು.

**ಶ್ರೀ ಜಿ.ವಿ. ಗೌಡ** – ಈ ಸೊಸೈಟಿಗಳಿಗೆ ಸರ್ಕಾರ ಏನಾದರೂ ಹಣ ಕೊಟ್ಟಿದಿಯೇ?

**ಶ್ರೀ ಕೊಂಡಜ್ಜಿ ಬಸಪ್ಪ** : ನಾವು ಇದುವರೆಗೂ ಯಾವುದೇ ಹಣಕಾಸಿನ ಸಹಾಯವನ್ನು ನೀಡಿಲ್ಲ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ** – ಶ್ರವಣ ಬೆಳಗೊಳಕ್ಕೂ ಬೇಲೂರಿಗೂ ಮಧ್ಯೆ ತಿಪಟೂರು ಇರುವುದರಿಂದ ಇಲ್ಲಿ ಒಂದು ಟೂರಿಸ್ಟ್ ಸೆಂಟರನ್ನು ತೆರೆಯುವುದಕ್ಕಾಗುವುದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ**– ಅಲ್ಲಿ ತೆರೆಯುವುದಕ್ಕಿಂತ ಹಾಸನದಲ್ಲಿ ಮಾಡಿದರೆ ಒಳ್ಳೆಯದೆಂದು ಕಾಣುತ್ತದೆ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ**– ಇವರುಗಳಿಗೆ ಕೊಡತಕ್ಕ ಕೋಟಾ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ**– ಕಳೆದ ಮೂರು ವರ್ಷಗಳಿಂದ ಬಂದದ್ದು 320 ಕಾರುಗಳು, ಅವುಗಳಲ್ಲಿ 136 ನ್ನು ಸೊಸೈಟಿಗಳಿಗೆ ಕೊಡಲಾಗಿದೆ.

**ಶ್ರೀ ಜಿ.ವಿ. ಗೌಡ** : ಈ ಯಾವುದಾದರೂ ಸೊಸೈಟಿಗಳು ಅವುಗಳೇ ರೂಟ್ಸ್‌ನಲ್ಲಿ ಸಂಚರಿಸಲು ಪರ್ಮಿಟ್ ನೀಡಿರುವ ಬಗ್ಗೆ ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ** : ವಾಸ್ತವವಾಗಿ ಮಡಿಕೇರಿ ಸಾರಿಗೆ ಸಹಕಾರ ಸಂಘವು 5 ಪ್ರಯಾಣಿಕರ ಸಾರಿಗೆ ಬಸ್ಸುಗಳನ್ನು ಓಡಿಸುತ್ತಿದೆ.

**ಶ್ರೀ ಎಸ್. ರಾಜಗೋಪಾಲ:** ಸರ್, ಈ ಸೊಸೈಟಿಗಳಿಗೆ ಮಾನ್ಯತೆಯನ್ನು ನೀಡುವಾಗ ಷರತ್ತುಗಳನ್ನು ಹೇಳಲು ಸರ್ಕಾರಕ್ಕೆ ಸಾಧ್ಯವಾಗುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** : ಅವರು ಕನಿಷ್ಟ ಪಕ್ಷ ಹತ್ತು ಸಾವಿರ ರೂಪಾಯಿಗಳನ್ನು ಷೇರು ಬಂಡವಾಳ ಸಂಗ್ರಹಿಸಲೇಬೇಕು ಎಂಬ ಷರತ್ತಿದೆ. ಕಾಯ್ದೆಯಡಿಯಲ್ಲಿ ಹತ್ತು ಸದಸ್ಯರು ಸಹಕಾರ ಸಂಘಗಳನ್ನು ಸಂಘಟಿಸಬಹುದು. ಸಾಮಾನ್ಯವಾಗಿ ನಾವು ಅಪೇಕ್ಷಿಸುವುದೇನೆಂದರೆ ಡ್ರೈವರುಗಳು ಮತ್ತು ಆಸಕ್ತಿಯಿರುವ ಇತರ ಸಾರ್ವಜನಿಕ ಸದಸ್ಯರು ಈ ಸಹಕಾರ ಸಂಘಗಳನ್ನು ಪ್ರಾರಂಭಿಸುವುದು.

**ಶ್ರೀ ಬಿ. ನಂಜಪ್ಪ** – ಈ ಟೂರಿಸ್ಟ್ ಕಾರುಗಳನ್ನು ಕೆಲವು ಖಾಸಗಿ ಜನಗಳಿಗೆ ಅಲಾಟ್ ಮಾಡಿರುವುದು ತಮ್ಮ ಗಮನಕ್ಕೆ ಬಂದಿದೆಯೇ ?

**ಶ್ರೀ ಕೊಂಡಜ್ಜಿ ಬಸಪ್ಪ** : ಬಂದಿಲ್ಲ, ಅದನ್ನು ಗಮನಕ್ಕೆ ತಂದರೆ ನಾವು ಅದನ್ನು ತಡೆಗಟ್ಟಲು ಸೂಕ್ತವಾದ ಕ್ರಮ ಕೈಗೊಳ್ಳುತ್ತೇವೆ.

**ಶ್ರೀ ಜಿ.ವಿ.ಗೌಡ:** ಬಸ್ಸುಗಳನ್ನು ಓಡಿಸಲು ಪರ್ಮಿಟ್ ನೀಡಿರುವ ಈ ಸೊಸೈಟಿಯು ಇದನ್ನು ಸಮರ್ಥವಾಗಿ ನಿಭಾಯಿಸುವುದೇ ಮತ್ತು ಹೌದು ಎಂದಲ್ಲಿ ಅಂಥ ಸೊಸೈಟಿಗಳಿಗೆ ಬಸ್ಸುಗಳ ಸಂಖ್ಯೆಯನ್ನು ಹೆಚ್ಚಿಸಲು ಸರ್ಕಾರ ಉತ್ತೇಜನ ನೀಡುವುದೇ;

**ಶ್ರೀ ಕೊಂಡಜ್ಜಿ ಬಸಪ್ಪ** : ಪ್ರಯಾಣಿಕರ ಸೇವೆಯನ್ನು ನಡೆಸುತ್ತಿರುವ ಈ ಸಹಕಾರ ಸಂಘವು 1963–64ರಲ್ಲಿ ಹತ್ತು ಸಾವಿರದ ನಾಲ್ಕು ನೂರು ರೂಪಾಯಿಗಳ ಲಾಭವನ್ನು ಗಳಿಸಿದೆ ಮತ್ತು ತುಂಬಾ ತೃಪ್ತಿದಾಯಕವಾಗಿ ನಡೆಸುತ್ತಿದೆ.

## ಜಿಲ್ಲಾ ಬೋರ್ಡುಗಳ ಆಸ್ತಿ ಮತ್ತು ಹೊಣೆಗಾರಿಕೆ

1ನೇ ಏಪ್ರಿಲ್ 1963

**ಶ್ರೀ ಪರಮೇಶ್ವರಯ್ಯ (ತರೀಕೆರೆ):**

(a) ಹಳೇ ಮೈಸೂರಿನಲ್ಲಿರುವ ಡಿಸ್ಟ್ರಿಕ್ಟ್ ಬೋರ್ಡ್‌ಗಳ ಅಸೆಟ್ಸ್ ಮತ್ತು ಲೈಯಬಲಿಟೀಸ್ ತಯಾರಿ ನಡೆದಿರುವುದೇ (ಜಿಲ್ಲಾವಾರು ಮಾಹಿತಿ ಒದಗಿಸಬೇಕು);

(b) ಈ ಡಿಸ್ಟ್ರಿಕ್ಟ್ ಬೋರ್ಡ್‌ಗಳ ಅಸೆಟ್ಸ್ ಮತ್ತು ಲೈಯಬಿಲಿಟೀಸ್‌ನ್ನು ತನ್ನ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಪ್ರತಿಯೊಂದು ತಾಲ್ಲೂಕು ಬೋರ್ಡ್‌ಗೆ ಹಂಚಿಕೆ ಮಾಡಲಾಗಿದೆಯೇ;

(c) ಹೌದು ಎಂದಲ್ಲಿ, ಯಾವ ಆಧಾರದ ಮೇಲೆ ಅಸೆಟ್ಸ್ ಮತ್ತು ಲೈಬಿಲಿಟೀಸ್‌ನ್ನು ಲೆಕ್ಕ ಮಾಡಲಾಗಿದೆ ಮತ್ತು ತಾಲ್ಲೂಕು ಬೋರ್ಡ್‌ಗಳ ಮಧ್ಯೆ ಯಾವ ಆಧಾರದ ಮೇಲೆ ಹಂಚಿಕೆ ಮಾಡಲಾಗಿದೆ. (ತಾಲ್ಲೂಕುವಾರು ವಿವರಗಳನ್ನು ಒದಗಿಸಬೇಕು)

(d) ರಾಜ್ಯದಲ್ಲಿರುವ ಯಾವುದೇ ತಾಲ್ಲೂಕು ಬೋರ್ಡ್ ಹೆಚ್ಚು ಹೊರೆಯನ್ನು ವಿರೋಧಿಸಿದೆಯೋ ಅಥವಾ ಇತರೇ ಯಾವುದೇ ಸರಿಯಾದ ಸಲಹೆಗಳನ್ನು ಮಾಡಿದೆಯೇ;

(e) ಹೌದು ಎಂದಲ್ಲಿ, ಈ ವಿಷಯದಲ್ಲಿ ಯಾವ ಕ್ರಮವನ್ನು ಕೈಗೊಳ್ಳಲಾಗಿದೆ ಅಥವಾ ಕ್ರಮಕೈಗೊಳ್ಳಲು ಪ್ರಸ್ತಾಪಿಸಲಾಗಿದೆ;

**ಶ್ರೀ ಕೊಂಡಜ್ಜಿ ಬಸಪ್ಪ** (ಸಹಕಾರ ಉಪಮಂತ್ರಿ):

(ಶ್ರೀ ರಾಮಕೃಷ್ಣ ಹೆಗಡೆ (ಸಹಕಾರ ಮತ್ತು ಅಭಿವೃದ್ಧಿ ಮಂತ್ರಿ) ಯವರ ಪರವಾಗಿ).

(a) ಮತ್ತು (b) ಹೌದು. ಹಳೇ ಮೈಸೂರು ಪ್ರದೇಶದಲ್ಲಿರುವ ಕೆಳಗಿನ ಡಿಸ್ಟ್ರಿಕ್ಟ್ ಬೋರ್ಡ್‌ಗಳಿಗೆ (ಜಿಲ್ಲಾ) ಆರ್ಡರ್‌ಗಳನ್ನು ನೀಡಲಾಗಿದೆ.

(i) ಚಿಕ್ಕಮಗಳೂರು (iv) ಮಂಡ್ಯ

(ii) ಕೋಲಾರ (v) ಶಿವಮೊಗ್ಗ

(iii) ತುಮಕೂರು (vi) ಮೈಸೂರು

(2) ಇತರೆ ಡಿಸ್ಟ್ರಿಕ್ಟ್ ಬೋರ್ಡ್‌ಗಳಿಗೆ ಸಂಬಂಧಿಸಿದೆ. ಪ್ರಸ್ತಾವನೆಗಳು (Proposal) ಪರಿಶೀಲನೆಯಲ್ಲಿವೆ.

(c) ಸಾಮಾನ್ಯವಾಗಿ, ಗ್ರಾಮೀಣ ಜನಸಂಖ್ಯೆ ಆಧಾರದ ಮೇಲೆ, ಹಿಂದಿನ ಡಿಸ್ಟ್ರಿಕ್ಟ್ ಬೋರ್ಡ್‌ಗಳು ಸಂಸ್ಥೆಗಳನ್ನು ಮತ್ತು ರೋಡ್‌ಗಳನ್ನು ಪೋಷಿಸುತ್ತಿದ್ದು; 01–11–1959 ರಂದು ಅಸ್ತಿತ್ವದಲ್ಲಿರುವ ಬಿಲ್ಸ್ ಮತ್ತು ಕಂಟ್ರಾಕ್ಟ್‌ಗಳು ಮತ್ತು ತೆರಿಗೆ ಬಾಕಿಗಳು ಇತ್ಯಾದಿಗಳು ಉತ್ತರಾಧಿಕಾರ ಹೊಂದಿದ ತಾಲ್ಲೂಕು ಬೋರ್ಡ್‌ಗಳಿಗೆ ತಮ್ಮ ಸ್ಥಳದ ಅನುಸಾರವಾಗಿ ಹೋಗುತ್ತವೆ.

(d) ಹೌದು: ಈ ವಿಷಯಕ್ಕೆ ಕೆಲವು ತಾಲ್ಲೂಕು ಬೋರ್ಡ್‌ಗಳು ನಿವೇದನೆ ಮಾಡಿವೆ.

(e) ಮೈಸೂರು ಗ್ರಾಮ ಪಂಚಾಯ್ತಿ ಮತ್ತು ಲೋಕಲ್ ಬೋರ್ಡ್ ಕಾಯ್ದೆ 1959ರ ವಿಧಿ 242(ii)(d)ರ ಅಡಿಯಲ್ಲಿ, ಹಿಂದಿನ ಡಿಸ್ಟ್ರಿಕ್ಟ್ ಬೋರ್ಡ್‌ಗಳ ಅಸೆಟ್ಸ್ (ಆಸ್ತಿ) ಮತ್ತು ಲೈಯಾಬಿಲಿಟೀಸ್ (ಹೊಣೆಗಾರಿಕೆಗಳು), ತಾಲ್ಲೂಕು ಬೋರ್ಡ್‌ಗಳಿಗೆ ಹಸ್ತಾಂತರವಾಗುತ್ತವೆ. ಮತ್ತು ತಾಲ್ಲೂಕು ಬೋರ್ಡ್‌ಗಳು ತಮ್ಮ ಹೊಣೆಗಾರಿಕೆಯನ್ನು ತೀರಿಸಲು ಸಾಕಷ್ಟು ಸಮಯವನ್ನು ನೀಡಲು ಪ್ರಸ್ತಾಪಿಸಿದೆ.

**ಶ್ರೀ ಕೊಂಡಜ್ಜಿ ಬಸಪ್ಪ** :ಸರ್, ಇದು ಬಹುದೊಡ್ಡ ಫೈಲು (ಕಡತ). ಇದು ತುಂಬಾ ವಿವರಗಳನ್ನು ಒಳಗೊಂಡಿದೆ. ಇದನ್ನು ಸದನದ ಮುಂದೆ ಇಡುತ್ತೇನೆ.

**ಸಭಾಧ್ಯಕ್ಷರು:** ಮಾನ್ಯ ಸದಸ್ಯರು ನಾನಾ (ಬಹು) ವಿವರಗಳನ್ನು ಕೇಳಿದರೆ ಉತ್ತರಿಸಲು ಕಷ್ಟವಾಗುತ್ತದೆ. ಒಂದು ಪಕ್ಷ ಇವರು ಯಾವುದೇ ನಿರ್ದಿಷ್ಟ ತಾಲ್ಲೂಕು ಅಥವಾ ಜಿಲ್ಲಾ ಮಾಹಿತಿ ಬೇಕಾದರೆ ಅವರು ಕೇಳಲಿ.

**ಶ್ರೀ. ಟಿ.ಆರ್. ಪರಮೇಶ್ವರಯ್ಯ:** ಸರ್, ನನಗೆ ಚಿಕ್ಕಮಗಳೂರು ಜಿಲ್ಲೆಯ ಮಾಹಿತಿಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಆದಾಗ್ಯೂ ಇದು ತುಂಬಾ ದೊಡ್ಡ ಫೈಲು (ಕಡತ) ಸರ್. (Place it on the Table) ಇದನ್ನು ಸದನದ ಮುಂದಿಡುತ್ತೇನೆ.

**ಶ್ರೀ ಟಿ. ಆರ್. ಪರಮೇಶ್ವರಯ್ಯ:** ಸರ್, ಈ ಅಂಕಿಅಂಶಗಳಿಲ್ಲದೇ, ನಾನು ಪೂರಕಪ್ರಶ್ನೆಗಳನ್ನು ಕೇಳಲಾಗುವುದಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್, ಒಂಭತ್ತು ಶೀರ್ಷಿಕೆಗಳಲ್ಲಿ ಆಸ್ತಿಗಳಿವೆ. ಅಲ್ಲಿ ಸುಮಾರು 50 ಟೈಪ್ ಮಾಡಿದ ಪ್ರತಿಯೊಂದು ಜಿಲ್ಲೆಗೂ ಅಲ್ಲಿ ದೊಡ್ಡ ಫೈಲು ಇದೆ.

**ಸಭಾಧ್ಯಕ್ಷರು** : ಮಾನ್ಯ ಸದಸ್ಯರು ಇದನ್ನು ನೋಡಲಿ ಮತ್ತು ಹೆಚ್ಚಿನ ಅವಶ್ಯ ಮಾಹಿತಿಗೆ ಮಂತ್ರಿಯವರಿಗೆ ಬರೆಯಲಿ, ಅವರೇ ಅವಶ್ಯ ಮಾಹಿತಿಯನ್ನು ನೀಡುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಯೋಚಿಸಿಲ್ಲ. ನಾವು ಡಿವ್ಹಿಜನಲ್ ಕಮೀಶನರ್‌ರವರಿಗೆ ಕೊಟ್ಟಿರುವ ಪತ್ರದಲ್ಲಿ, ಯಾವ ತತ್ವಗಳ ಮೇಲೆ ಹಂಚಿಕೆ ಮಾಡಬೇಕೆಂದು ಸ್ಪಷ್ಟವಾಗಿ ಹೇಳಿದ್ದೇವೆ. ಸಂಪೂರ್ಣ ಫೈಲನ್ನು ಸದನದ ಮುಂದೆ ಇಡುತ್ತೇನೆ.

**ಸಭಾಧ್ಯಕ್ಷರು** : ಮಾನ್ಯ ಸದಸ್ಯರು ಅರ್ಧ ಡಜನ್ ಪೂರಕ ಪ್ರಶ್ನೆಗಳನ್ನು ಒಟ್ಟಿಗೆ ಇಡಲಿ. ಅವರಿಗೆ ಮಾಹಿತಿಯನ್ನು ಕೊಡಬೇಕೋ ಅಥವಾ ಸದನದ ಮುಂದೆ ಇಡಬೇಕೋ ಎಂದು ನಾನು ನೋಡುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಬಡ್ಡಿಯನ್ನು ಕೊಡಬೇಕು ಮತ್ತು ಅವರು ಅದನ್ನು ಕೊಡಬೇಕು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** : ಪೂರಕ ಪ್ರಶ್ನೆಯಾಗಿ(ಕ)ಗೆ, ಇದಕ್ಕೆ ಯಾವ ವಿಚಾರದಲ್ಲಿ ನಿವೇದನೆಗಳನ್ನು ಸ್ವೀಕರಿಸಿದೆ ಎಂದು ನಾನು ತಿಳಿದುಕೊಳ್ಳಬೇಕು?

**ಶ್ರೀ ಕೊಂಡಜ್ಜಿ ಬಸಪ್ಪ:** "ಹೌದು, ಈ ವಿಚಾರವಾಗಿ ಕೆಲವು ತಾಲ್ಲೂಕು ಬೋರ್ಡ್‌ಗಳನ್ನು ನಿವೇದನೆ ಮಾಡಿಕೊಂಡಿವೆ." ಸ್ವೀಕರಿಸಿರುವ ನಿವೇದನೆಗಳು ಡಿಸ್ಪೆನರಿಗಳಿಗೆ ಕೊಡುಗೆ ಸಹಾಯ ನೀಡುವುದಕ್ಕೆ ಸಂಬಂಧಿಸಿದೆ. ಅಲ್ಲಿ ಬಹುದೊಡ್ಡ ಮೊತ್ತ ಸುಮಾರು 60,000 ಸಾವಿರದಿಂದ ಒಂದು ಲಕ್ಷದವರೆಗೆ ಬಾಕಿ ಇದೆ. ಆ ನಿವೇದನೆಗಳಲ್ಲಿ ಹಣವನ್ನು ಬಿಟ್ಟುಕೊಡಲು ಕೇಳಿಕೊಂಡಿವೆ ಮತ್ತು ಸರ್ಕಾರವು ಇತ್ತೀಚಿಗೆ ಹೊರಡಿಸಿದ ಆದೇಶದಲ್ಲಿ, ಅವರು 10 ವಾರ್ಷಿಕ ಸಮ ಕಂತುಗಳಲ್ಲಿ ಪಾವತಿಸಲು ತಿಳಿಸಿದೆ.

**ಶ್ರೀ ಜಿ.ವಿ.ಗೌಡ:** ಅಸೆಟ್ಸ್ ಮತ್ತು ಲೈಯಬಿಲಿಟೀಸ್‌ನ್ನು ಸಮಗ್ರ ಕ್ಷೇತ್ರದಲ್ಲಿ ಹಂಚಿಕೆ ಮಾಡಲಾಗಿದೆಯೇ ಎಂದು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ದಕ್ಷಿಣ ಕನ್ನಡ, ಬೆಳಗಾಂ, ಧಾರವಾಡ, ಉತ್ತರ ಕನ್ನಡ, ರಾಯಚೂರು, ಬೀದರ್ ಜಿಲ್ಲೆಗಳನ್ನು ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಇಲ್ಲದ ಕೂರ್ಗ್‌ನಲ್ಲಿ ಮತ್ತು ನಿಮ್ಮ ಜಿಲ್ಲೆಯಲ್ಲಿಯೂ ಅಸೆಟ್ಸ್ ಮತ್ತು ಲೈಬಿಲಿಟೀಸನ್ನು ಹಂಚಿಕೆ ಮಾಡಿದ್ದೇವೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಅದರ ಅವಶ್ಯಕತೆಯಿಲ್ಲ.

**ಶ್ರೀ ಡಿ.ಎಮ್. ಸಿದ್ದಯ್ಯ:** ಮೈಸೂರು ಡಿಸ್ಟ್ರಿಕ್ಟ್ ಬೋರ್ಡ್‌ನಲ್ಲಿ ಅಸೆಟ್ಸ್ ಮತ್ತು ಲೈಬಿಲಿಟೀಸ್ ಹಂಚಿಕೆಯಾಗಿರುವುದರ ಬಗ್ಗೆ ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು, ಅಲ್ಲಿ ದೊಡ್ಡ ಲಿಸ್ಟ್ ಇದೆ. ಮತ್ತು ಅದರಿಂದ ನೀವು ಪರಿಶೀಲಿಸಬಹುದು.

**ಶ್ರೀ ಎಚ್. ಡಿ. ದೇವೇಗೌಡ:** ಆರ್ಟಿಫಿಷಿಯಲ್ ಸಿಲ್ಕನ್ನು ಕಾಳಸಂತೆಯಲ್ಲಿ ಮಾರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಈ ಸಹಕಾರ ಸಂಘದ ಅಧ್ಯಕ್ಷರು ಒಂದು ಲಕ್ಷ ರೂಪಾಯಿ ಮೌಲ್ಯದ ಬಹುಮಾನವನ್ನು ಆ ಸೊಸೈಟಿಯಿಂದ ಸ್ವೀಕರಿಸಿರುವುದಕ್ಕೆ ನಿರ್ದಿಷ್ಟ ದೂರು ಬಂದಿರುವುದು ವಾಸ್ತವವಲ್ಲವೇ.

**ಶ್ರೀ ಕೊಂಡಜ್ಜಿ ಬಸಪ್ಪ–** ಕೆಲವು ನಿಶ್ಚಿತ ನಷ್ಟಗಳನ್ನು ರೈಟ್ ಆಫ್ ಮಾಡಿಕೊಳ್ಳಲು ಅವರಿಗೆ ಅಧಿಕಾರವನ್ನು ನೀಡುವ ನಡಾವಳಿಯನ್ನು ಪಾಸು ಮಾಡಲು ಸಾಮಾನ್ಯ ಸಭೆ ಶಕ್ತವಾಗಿದೆ. ಅವರು ಸಾಮಾನ್ಯ ಸಭೆಯಲ್ಲಿ ನಷ್ಟಗಳನ್ನು ರೈಟ್ ಆಫ್ ಮಾಡಲು ನಡಾವಳಿಯನ್ನು ಮಾಡಿದ್ದಾರೆ ಹಾಗೂ ಸರ್ಕಾರಕ್ಕೆ ಯಾವುದೇ ಅಂತಹ ಶಿಫಾರಸ್ಸುಗಳನ್ನು ಮಾಡಿಲ್ಲ. ಅದರ ಅಗತ್ಯವಿಲ್ಲ.

**ಶ್ರೀ. ಜಿ. ವಿ. ಗೌಡ :–** ಯಾವುದೇ ಆಡಿಟ್ (ಲೆಕ್ಕಪರಿಶೋಧನೆ) ನಡೆದಿದೆಯೇ ಮತ್ತು ಲೆಕ್ಕಪರಿಶೋಧನೆಯಿಂದ ಹಣದ ದುರ್ಬಳಕೆ ಮತ್ತು ಕಡಿಮೆಯಾಗಿರುವುದು ಇತ್ಯಾದಿ ಪತ್ತೆಮಾಡಲಾಗಿದೆಯೇ. ಹೌದು ಎಂದಲ್ಲಿ, ಎಷ್ಟು ಪ್ರಮಾಣದ ಹಣ ಒಳಗೊಂಡಿದೆ?

**ಶ್ರೀ ಕೊಂಡಜ್ಜಿ ಬಸಪ್ಪ :** 62–63ರ ಲೆಕ್ಕ ಪರಿಶೋಧನೆಯು ಕೆಲವು ಅಕ್ಷಮತೆಗಳನ್ನು ಹೊರಗೆಡವಿದೆ. ಇದು ಯಾವುದೇ ಹಣದ ಕೊರತೆಯನ್ನು/ ಹಣದ ದುರ್ಬಳಕೆಯನ್ನು ಪತ್ತೆ ಮಾಡಿಲ್ಲ.

**ಶ್ರೀ ಎಚ್.ಡಿ.ದೇವೇಗೌಡ :** ಆಡಿಟ್ ವರದಿಯಲ್ಲಿ 13 ಲಕ್ಷ ರೂಪಾಯಿ ಕೊಟ್ಟಿರುವುದಕ್ಕೆ ಲೆಕ್ಕವಿಲ್ಲವೆಂದು ಬರೆದಿರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ :** ಈ ವಿಷಯದಲ್ಲಿ ತನಿಖೆ ನಡೆಸಲು ನಾವು ಸಹಕಾರ ಸಂಘಗಳ ರಿಜಿಸ್ಟ್ರಾರವರನ್ನು ನೇಮಕ ಮಾಡಿದ್ದೇವೆ. ಅವರ ವರದಿಗೆ ಕಾಯುತ್ತಿದ್ದೇವೆ.

**ಶ್ರೀ ಎಸ್.ಎಮ್.ಕೃಷ್ಣ** : ಆಡಳಿತ ದುರುಪಯೋಗ ಮತ್ತು ನಿಧಿಯ ದುರ್ಬಳಕೆಯಲ್ಲಿ ಸೇರಿಕೊಂಡಿರುವ ಹಣದ ಬಗ್ಗೆ ಸರ್ಕಾರ ಯಾವುದೇ ನಿರ್ಧಾರ ಮಾಡಿದೆಯೇ.

**ಶ್ರೀ ಕೊಂಡಜ್ಜಿ ಬಸಪ್ಪ** : ಅದಕ್ಕಾಗಿಯೇ ನಾವು ಸಹಕಾರ ಸಂಘಗಳ ರಿಜಿಸ್ಟ್ರಾರ್‌ರವರನ್ನು ಈ ವಿಷಯದಲ್ಲಿ ತನಿಖೆ ನಡೆಸಿ ವರದಿಯನ್ನು ನೀಡಲು ನೇಮಕ ಮಾಡಿದ್ದೇವೆ.

**ಶ್ರೀ ಎಸ್.ಎಮ್.ಕೃಷ್ಣ** : 61–62ರ ಲೆಕ್ಕಪರಿಶೋಧನೆ ಸರ್ಕಾರದ ಮೊದಲಿನದು. ಇದರಿಂದ ಹಣದ ದುರ್ಬಳಕೆಯನ್ನು ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ** : ದೂರು ಹಲವಾರು ವರ್ಷಗಳಿಗೆ ಸಂಬಂಧಿಸಿದೆ. ನಾವು ದೂರನ್ನು ಪರಿಶೀಲಿಸಿದ್ದೇವೆ. ರಿಜಿಸ್ಟ್ರಾರ್‌ರವರಿಂದ ಸಂಪೂರ್ಣ ವರದಿಯನ್ನು ಕಾಯುತ್ತಿದ್ದೇವೆ. ಅದನ್ನು ಸ್ವೀಕರಿಸಿದ ನಂತರ, ನಾವು ಅವಶ್ಯ ಕ್ರಮವನ್ನು ಕೈಗೊಳ್ಳುತ್ತೇವೆ.

**ಶ್ರೀ ಎಸ್.ಎಮ್.ಕೃಷ್ಣ** : ಈ ನಿರ್ಧಿಷ್ಟ ಸಂಘದಲ್ಲಿ ಆಡಳಿತದ ದುರುಪಯೋಗ ಮತ್ತು ಹಣ(ನಿಧಿ) ದುರ್ಬಳಕೆಯಾಗಿರುವುದರ ಬಗ್ಗೆ ಸರ್ಕಾರಕ್ಕೆ ಈಗ ಮನವರಿಕೆಯಾಗಿದೆ. ಸರ್ಕಾರವು ರಿಜಿಸ್ಟ್ರಾರ್‌ರವರಿಂದ ವರದಿ ಬರುವವರೆಗೂ ಸಂಘವನ್ನು ಸೂಪರ್‌ಸೀಡ್ ಮಾಡುವ ಸಾಧ್ಯತೆಗಳ ಬಗ್ಗೆ ಪರಿಶೀಲಿಸುವುದೇ.

**ಶ್ರೀ ಕೊಂಡಜ್ಜಿ ಬಸಪ್ಪ** : ವರದಿಯನ್ನು ಸ್ವೀಕರಿಸುವವರೆಗೂ ಸರ್ಕಾರವು ಅಂಥ ನಿರ್ಧಾರವನ್ನು ತೆಗೆದುಕೊಳ್ಳುವುದಿಲ್ಲ. ತನಿಖೆ ಅಧಿಕಾರಿಯನ್ನು ನೇಮಕ ಮಾಡಿರುವುದು ಸಂಘದ ವಿರುದ್ಧ ದೂರು ಮಾಡಲಾಗಿದೆ ಎಂದರ್ಥವಲ್ಲ?

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ**: ದುರಾಡಳಿತ, ಹಣದ ದುರುಪಯೋಗ ಇತ್ಯಾದಿಗಳ ವಿಚಾರದಲ್ಲಿ ಕೇಂದ್ರ ಉಣ್ಣೆ ಸಹಕಾರ ಸಂಘದಲ್ಲಿ ಎಷ್ಟು ಮಟ್ಟಿಗೆ ದುರಾಡಳಿತ ನಡೆದಿದೆಯೋ ಇಲ್ಲಿಯೂ ಅಷ್ಟೇ ನಡೆದು ಈ ಸಂಘದ ಅಧ್ಯಕ್ಷರ ಷಷ್ಟ್ಯಬ್ದಿಯ ಸಮಯದಲ್ಲಿ ಅವರಿಗೆ ಕೊಟ್ಟ ಹಣವೆಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ** : ಈ ಪ್ರಶ್ನೆಯಿಂದ ಅದು ಉದ್ಭವವಾಗುವುದಿಲ್ಲ.

**ಶ್ರೀ ಸಿ. ಜೆ. ಮುಕ್ಕಣ್ಣಪ್ಪ**: ಆ ಸಂಘದ ದುರಾಡಳಿತದಿಂದ ಬಂದ ಹಣವನ್ನು ಕೊಟ್ಟರೆಂದು ಹೇಳುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ** : ನಮಗೆ ಅದರ ಬಗ್ಗೆ ಗೊತ್ತಿಲ್ಲ.

**ಶ್ರೀ ಸಿ.ಜಿ. ಮುಕ್ಕಣ್ಣಪ್ಪ:** ಮೈಸೂರು ನೇಕಾರರ ಸಂಘದ ಅಧ್ಯಕ್ಷರ ಷಷ್ಟ್ಯಬ್ಧಿಯ ಸಮಯದಲ್ಲಿ ಎಷ್ಟು ಹಣವನ್ನು ಅವರಿಗೆ ಆ ಕೇಂದ್ರ ಸಂಘವು ಬಹುಮಾನವಾಗಿ ಕೊಟ್ಟಿತು ಮತ್ತು ಆ ಹಣ ಇದರಲ್ಲಿ ಸೇರಿದೆಯೇ?ಹಾಗಿದ್ದರೆ ಅದೆಷ್ಟು ?

**ಶ್ರೀ ಕೊಂಡಜ್ಜಿ ಬಸಪ್ಪ :** ಸರ್ಕಾರಕ್ಕೆ ಸಲ್ಲಿಸಿರುವ ಅರ್ಜಿಯು ಎಲ್ಲವನ್ನು ಒಳಗೊಂಡಿದೆ ಮತ್ತು ಅದನ್ನೆ ತನಿಖೆ ಮಾಡುತ್ತಿದ್ದೇವೆ. ಕೆಲವು ಆಪಾದನೆಗಳನ್ನು ಮಾಡಲಾಗಿದೆ. ರಿಜಿಸ್ಟ್ರಾರ್‌ರವರು ತನಿಖೆಯನ್ನು ನಡೆಸುತ್ತಿದ್ದಾರೆ. ಅವರಿಂದ ವರದಿಯನ್ನು ಸ್ವೀಕರಿಸಿದ ತಕ್ಷಣವೇ , ನಾವು ನಿಯಮಗಳ ಪ್ರಕಾರ ಅವಶ್ಯವಾದ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆ.

**ಶ್ರೀ ಎಚ್. ಡಿ. ದೇವೇಗೌಡ** – ಬಂದಿರುವ ದೂರಿನಲ್ಲಿ, ಅಧ್ಯಕ್ಷರ 60 ನೆಯ ಹುಟ್ಟು ಹಬ್ಬದ ಸಂಬಂಧವಾಗಿ ಚಂದಾ ವಸೂಲು ಮಾಡಿರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಸಭಾಧ್ಯಕ್ಷರು :** ಮುಖ್ಯ ಪ್ರಶೆಯಿಂದ ಈ ಅಂಶವು ಹೇಗೆ ಉದ್ಭವಿಸಿತು? 'ಸೆಸ್' ರೂಪದಲ್ಲಿ ಸಂಘದ ಹೊರಗಿನಿಂದ ವಸೂಲು ಮಾಡಲಾಗಿದೆ ಹಾಗೆ ಇದು ಯಾವುದಕ್ಕೂ ಸಂಬಂಧಿಸಿಲ್ಲ. ಇದಕ್ಕೆ ಪ್ರತ್ಯೇಕ ಪ್ರಶ್ನೆಯನ್ನು ನೀಡಿ.

**ಶ್ರೀ ಎಸ್.ಎಮ್.ಕೃಷ್ಣ :** ರಿಜಿಸ್ಟ್ರಾರ್‌ರವರಿಂದ ವರದಿಯನ್ನು ಸ್ವೀಕರಿಸಿದ ನಂತರ ಈ ಸದನದ ಮುಂದೆ ಇಡಬೇಕು ಎಂಬುದರ ಬಗ್ಗೆ ಈ ಸದನಕ್ಕೆ ಸರ್ಕಾರವು ಆಶ್ವಾಸನೆ ನೀಡಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಸದನದ ಮುಂದೆ ತರುವ ಅವಶ್ಯಕತೆಯಿಲ್ಲ. ಸಹಕಾರ– ಸಂಘಗಳ ಕಾಯ್ದೆಯಡಿಯಲ್ಲಿ ಯಾವ ಕ್ರಮಗಳನ್ನು ತೆಗೆದುಕೊಳ್ಳಬೇಕೋ ಆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆ.

**ಶ್ರೀ ಎಸ್.ಎಮ್.ಕೃಷ್ಣ :**ವರದಿಯನ್ನು ಸದನದ ಮುಂದೆ ಇಡಲು/ತರಲು ಸರ್ಕಾರಕ್ಕಿರುವ ತೊಂದರೆ ಏನು?

**ಸಭಾಧ್ಯಕ್ಷ:** ವರದಿಯನ್ನು ಇನ್ನು ಬರೆದಿಲ್ಲ. ಅದು ಬಂದ ನಂತರ ಪ್ರತ್ಯೇಕ ಪ್ರಶ್ನೆಯನ್ನು ಕೊಡಿ/ಇಡಿ.

**ಶ್ರೀ ಕೆ. ಲಕ್ಕಪ್ಪ** – ಸಹಕಾರ ಕ್ಷೇತ್ರದಲ್ಲಿ ಸರಕಾರದ ನೀತಿ ವಿಫಲವಾಗಿ ಭ್ರಷ್ಟಾಚಾರ, ಹಣದ ದುರುಪಯೋಗ ಮುಂತಾದವು ಆಗುತ್ತಿರುವುದರಿಂದ ಈ ಬಗ್ಗೆ ಒಂದು ಜ್ಯುಡಿಷಿಯಲ್ ಎನ್‌ಕ್ವೈರಿಯನ್ನು ಮಾಡುವುದಕ್ಕೆ ಸರಕಾರದವರು ಒಪ್ಪುತ್ತಾರೆಯೇ?

**ಅಧ್ಯಕ್ಷರು**– ಅದು ಬಹಳ ಜನರಲ್ ಆಯಿತು.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ:** ಅಲ್ಲಿ ಸಂಘದ ಹಣ ದುರುಪಯೋಗವಾಗುತ್ತಿದೆಯೆ ಇಲ್ಲವೆ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಅಲ್ಲಿನ ಅಧ್ಯಕ್ಷರನ್ನು ಬರ್ತ್‌ರಫ್ ಮಾಡಿದ್ದೀರ ಅಥವಾ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ರೀತಿಯನ್ನು ಅಧ್ಯಕ್ಷರು ಅಥವಾ ನಿರ್ದೇಶಕರು ಅಮಾನತ್ತಿನಲ್ಲಿಟ್ಟಿಲ್ಲ. ನಾವು ತನಿಖೆಯನ್ನು ನಡೆಸಿ, ಪೂರ್ಣ ನಿಕಾಯಯುವನ್ನು ಸೂಪರ್‌ಸೀಡ್ ಮಾಡುವುದರ ಬಗ್ಗೆ ತಿಳಿದು ಕೊಳ್ಳುತ್ತೇವೆ.

**ಸಭಾಧ್ಯಕ್ಷರು:** ಇದು ಹೇಗೆ ಉದ್ಭವಿಸಿತು.

**ಶ್ರೀ ಮುಕಣ್ಣಪ್ಪ:** ಇದು ಹಣದ (ನಿಧಿಯ) ದುರ್ಬಳಕೆಯಾಗಿದೆ.

**ಸಭಾಧ್ಯಕ್ಷರು:** ಯಾವ ಹಣ (ನಿಧಿ)? ಪ್ರೆಸೆಂಟೇಷನ್ (ಬಹುಮಾನ) ಕೊಟ್ಟಿರುವುದರ ಬಗ್ಗೆ ಪೂರಕ ಮಾಹಿತಿಯನ್ನು ಕೇಳುವುದು ಈ ಪ್ರಶ್ನೆಯ ವ್ಯಾಪ್ತಿಯ ಹೊರಗಣೆ ಇದೆ.

**ಶ್ರೀ ಮುಕಣ್ಣಪ್ಪ:** ಅಧ್ಯಕ್ಷರಿಗೆ ಪ್ರೆಸೆಂಟೇಷನ್‌ನ್ನು ನಿಧಿಯಿಂದ ಕೊಟ್ಟಿರುವುದು ಮತ್ತು ಸಂಘದ ಹಣವನ್ನು ದುರುಪಯೋಗ ಮಾಡಿಕೊಂಡಿರುವುದರ ಬಗ್ಗೆ ದೂರಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಆ ವಿಷಯದ ಬಗ್ಗೆ ನನಗೆ ಗೊತ್ತಿಲ್ಲ. ದೂರಿನ ಸ್ವರೂಪ ಏನೇ ಆಗಿದ್ದರೂ, ಅವೆಲ್ಲವನ್ನು ರಿಜಿಸ್ಟ್ರಾರ್‌ರವರಿಗೆ ತನಿಖೆ ನಡೆಸಲು ಒಪ್ಪಿಸಲಾಗಿದೆ. ವರದಿಯನ್ನು ಸ್ವೀಕರಿಸಿದ ತಕ್ಷಣ, ಕ್ರಮವನ್ನು ತೆಗೆದುಕೊಳ್ಳುತ್ತೇವೆ.

**ಶ್ರೀ ಸಂಜೀವನಾಥ ಐತಾಳ:** ಸಂಘದ ನಿರ್ದೇಶಕರು ಒಂದು ರಾಜಕೀಯ ಪಕ್ಷಕ್ಕೆ ಸೇರಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ.

**ಶ್ರೀ ಕೊಂಡಜ್ಜಿ ಬಸಪ್ಪ:** ಇದರ ಬಗ್ಗೆ ನನಗೆ ಗೊತ್ತಿಲ್ಲ.

**ಶ್ರೀ. ಜಿ.ವಿ. ಗೌಡ:** ಈ ಎಲ್ಲಾ ದೂರುಗಳಿಂದ, ಸರ್ಕಾರವು ರಿಜಿಸ್ಟ್ರಾರ್‌ವರಿಗೆ ತನಿಖೆಯನ್ನು ತ್ವರಿತವಾಗಿ ನಡೆಸಿ, ತನ್ನ ವರದಿಯನ್ನು ನೀಡಲು ಕೇಳುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿ

**ಶ್ರೀ ಎಚ್. ಡಿ. ದೇವೇಗೌಡ** – ಆಗಿರುವ ನಷ್ಟವನ್ನು ಮನ್ನಾ ಮಾಡಬೇಕೆಂದು ಈ ಸಹಕಾರ ಸಂಘದಿಂದ ಸಂಬಂಧಪಟ್ಟ ಮಂತ್ರಿಗಳಿಗೆ ಮನವಿ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಕೆಲವು ನಷ್ಟಗಳನ್ನು ಅವರೇ ರೈಟ್ ಆಫ್ ಮಾಡುವುದಕ್ಕೆ ಸಂಬಂಧಿಸಿದಂತೆ ನಿರ್ಧಾರ ತೆಗೆದುಕೊಂಡು ಅಂಗೀಕರಿಸಲು ಜನರಲ್ ಬಾಡಿಗೆ ಅಧಿಕಾರವಿದೆ. ಅವರು ಸರ್ವಸದಸ್ಯರ ಸಭೆಯಲ್ಲಿ ನಷ್ಟಗಳನ್ನು ರೈಟ್ ಆಫ್ ಮಾಡುವುದಕ್ಕೆ ರೆಸೊಲ್ಯೂಷನ್ ಮಾಡಿದ್ದಾರೆ ಅವರು ಸರ್ಕಾರಕ್ಕೆ ಯಾವುದೇ ಶಿಫಾರಸ್ಸನ್ನು ಮಾಡಿಲ್ಲ ಮತ್ತು ಅದರ ಅವಶ್ಯಕತೆಯಿಲ್ಲ.

**ಶ್ರೀ ಎಸ್. ರಾಜಗೋಪಾಲ:** ಅಧಿಕಾರಿಗಳು ತನಿಖೆ ನಡೆಸಲು ಸರ್ಕಾರ ರೆಫರ್ ಮಾಡುವುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** 27.02.64 ರಂದು ರೆಫರ್ ಮಾಡಲಾಗಿದೆ.

**ಶ್ರೀ ಎಸ್. ಶಿವಪ್ಪ:** ಸಂಘದಲ್ಲಿ ಮೆಲ್ನೋಟಕ್ಕೆ ಕಾಣುವ ನಿಧಿಯ(ಹಣದ) ದುರುಪಯೋಗ ಕೇಸ್ ಬಗ್ಗೆ ಸರ್ಕಾರಕ್ಕೆ ತೃಪ್ತಿಯಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಹೇಗೆ ಹೇಳುವುದಕ್ಕೆ ಆಗುತ್ತದೆ, ಏಕೆಂದರೆ ದೂರು ಅರ್ಜಿಗಳನ್ನು ನಾವು ಸ್ವೀಕರಿಸಿದ್ದೇವೆ, ಅಲ್ಲಿದೆ ಕೇಸ್. ನಾವು ರಿಜಿಸ್ಟ್ರಾರ್‌ರವರಿಗೆ ತನಿಖೆಗಾಗಿ ವಿಷಯವನ್ನು ರೆಫರ್ ಮಾಡಿದ್ದೇವೆ.

**ಶ್ರೀ ಎಸ್.ಶಿವಪ್ಪ:** ಮೇಲ್ನೋಟಕ್ಕೆ ಕಾಣುವ ಪ್ರಕರಣವಿರದಿದ್ದಲ್ಲಿ, ಸರ್ಕಾರವು ಹೇಗೆ ಐ.ಎ.ಎಸ್. ಮಟ್ಟದ ಅಧಿಕಾರಿಯನ್ನು ಈ ವಿಷಯದ ತನಿಖೆಗೆ ನೇಮಕ ಮಾಡಿದೆ?

**ಸಭಾಧ್ಯಕ್ಷರು:** ವಾಸ್ತವವೇನೆಂದರೆ, ತನಿಖೆಗೆ ಆದೇಶ ನೀಡಲಾಗಿದೆ ಮತ್ತು ಯಾರ ಕೈಯಲ್ಲಿ ಸಂಘದ ಆಡಳಿತ/ವ್ಯವಹಾರ ಇದೆಯೇ ಅವರನ್ನು ಅಮಾನತ್ತಿನಲ್ಲಿ ಇಡಬಹುದೇ? ಸರ್ಕಾರವು ತನಿಖೆಯ ಮುಗಿಯುವವರೆಗೂ ಚೇರಮನ್‌ರವರನ್ನು ಅಮಾನತ್ತಿನಲ್ಲಿಡುವುದರ ಬಗ್ಗೆ ಯೋಚಿಸಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಂತಹ ಕ್ರಮಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ.

**ಶ್ರೀ ರಾಮಕೃಷ್ಣ ಹೆಗಡೆ:** ನಾನು ಉಪಮಂತ್ರಿಯವರ ಮಾತಿಗೆ ಒಂದೆರಡು ಮಾತುಗಳನ್ನು ಸೇರಿಸಲು ಇಚ್ಛಿಸುತ್ತೇನೆ. ಯಾವುದೇ ಸಹಕಾರ ಸಂಸ್ಥೆಯ ಆಡಳಿತದಲ್ಲಿ ನಿಧಿ (ಹಣದ) ದುರುಪಯೋಗಕ್ಕೆ ಸಂಬಂಧಿಸಿದಂತೆ ಯಾವಾಗಲಾದರೂ ದೂರುಗಳು ಬಂದಲ್ಲಿ, ನಾವು ಒಂದೇ ಸಾರಿ ಅಲ್ಲಿ ದುರುಪಯೋಗವಾಗಿದೆ ಎಂದುಕೊಳ್ಳುವುದಿಲ್ಲ. ಇದನ್ನು ವಿಚಾರಿಸುತ್ತೇವೆ/ತನಿಖೆಮಾಡಿಸುತ್ತೇವೆ. ಅಲ್ಲಿ ಮೇಲ್ನೋಟಕ್ಕೆ ಕಾಣುವ ಪ್ರಕರಣವಿದೆ ಎಂದು ವಿರೋಧ ಪಕ್ಷದ ನಾಯಕರು ಹೇಳಿದರು. ಅದು ಬರೀ–

ಇರಬಹುದು ಎಂಬ ಅಭಿಪ್ರಾಯ. ನಾವು ಅದನ್ನು ಒಪ್ಪುವುದಿಲ್ಲ. ಪ್ರಾಥಮಿಕ ವಿಚಾರಣೆಯ ನಂತರವೇ ಅಲ್ಲಿ ಮೇಲ್ನೋಟದ ಪ್ರಕರಣವಿದೆ/ಇಲ್ಲ ಎಂಬುದನ್ನು ತಿಳಿದುಕೊಳ್ಳಲು ಸಾಧ್ಯ. ತನಿಖೆಯಲ್ಲಿ ಏನಾದರೂ ಮೇಲ್ನೋಟಕ್ಕೆ ಕಾಣುವ ಪ್ರಕರಣ ಮತ್ತು ಆರೋಪದಲ್ಲಿ ಹುರುಳಿದೆ ಎಂದು ಕಂಡುಬಂದಲ್ಲಿ ನಾವು ಮುಂದಿನ ಕ್ರಮ ತೆಗೆದುಕೊಳ್ಳುತ್ತೇವೆ. ಸಂಘದ ಚೇರ್‌ಮನ್ ಅಥವಾ ಯಾವುದೇ ನಿರ್ದೇಶಕರನ್ನು ಅಮಾನತ್ತಿನಲ್ಲಿಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಮತ್ತು ನಮಗೆ ಅಂತಹ ಅಧಿಕಾರವಿಲ್ಲ. ಇದು ಒಂದು ಚುನಾಯಿತ ಡೆಮಾಕ್ರೆಟಿಕ್ ಸಂಸ್ಥೆ.

**ಶ್ರೀ ಜಿ.ವಿ. ಗೌಡ:** ಲೆಕ್ಕ ಪರಿಶೋಧನೆ ವರದಿಯ ಸಿರಿಯಸ್ ಇರೆಗ್ಯೂಲ್ಯಾರೀಟಿಸ್ ಮತ್ತು ಶಾರ್ಟೇಜ್‌ಗಳನ್ನು ಬಯಲು ಮಾಡದೆ/ಹೊರಗೆಡವಿದೆ. ಅಲ್ಲಿ ಮೇಲ್ನೋಟದ ಪ್ರಕರಣವಿದೆ ಎಂದು ಇದು ಹೇಳುವುದಿಲ್ಲವೇ? ಕುಣಿಗಲ್ ಸಂಘದ ಪ್ರಕರಣದಲ್ಲಿ ವಿಚಾರಣೆ ಇಲ್ಲದೆಯೇ ಅಮಾನತ್ತಿಲ್ಲಿಡಲಾಗಿತ್ತು.

**ಶ್ರೀ ಕೊಂಡಜ್ಜಿ ಬಸಪ್ಪ:** ಸೂಪರ್ ಸೆಷನ್ ಪ್ರಕರಣದಲ್ಲಿ, ತನಿಖೆಯ ನಂತರ ಮಾಡಿದಲ್ಲಿ ಮತ್ತು ಪ್ರಕರಣ ಬಂದಲ್ಲಿ ಷೋಕಾಸ್ ನೋಟಿಸನ್ನು ಸಂಬಂಧಿಸಿದ ಮ್ಯಾನೇಜ್‌ಮೆಂಟ್‌ವರೆಗೆ ಅವರ ಕೇಸನ್ನು ವಿವರಿಸಲು ನೀಡಲಾಗುವುದು. ವಿವರಣೆಯನ್ನು ಪಡೆದುಕೊಂಡ ನಂತರ, ವಿವರಣೆಯ ತೃಪ್ತಿದಾಯಕವಾಗದಿದ್ದಲ್ಲಿ ಸಂಬಂಧಿಸಿದ ಪ್ರಾಧಿಕಾರವು ಸೂಪರ್ ಸೀಡಿಗಾಗಿ ಹೆಚ್ಚಿನ ಮುಂದಿನ ಕ್ರಮ ಕೈಗೊಳ್ಳುವುದು.

**ಶ್ರೀ ಎಚ್. ಡಿ. ದೇವೇಗೌಡ:** 1962–63 ನೆಯ ಸಾಲಿನ ಅಡಿಟ್ ವರದಿಯಲ್ಲಿ ಸಲಹೆ ಮಾಡಿದ ಪ್ರಕಾರ ಈ ಸೊಸೈಟಿ ಸೂಪರ್‌ಸೀಡ್ ಮಾಡುವುದಕ್ಕೆ ಇಷ್ಟು ದಿವಸ ಏಕೆ ಕ್ರಮ ತೆಗೆದುಕೊಳ್ಳಲಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವಿಷಯವನ್ನು ಕಳೆದ ಸಾರಿ ಬಜೆಟ್‌ನಲ್ಲಿ ಸದನದ ಗಮನಕ್ಕೆ ತರಲಾಯಿತು. ಅಲ್ಲಿ ಸಾಕಷ್ಟು ಆಡಿಟ್ ಸಿಬ್ಬಂದಿ ಇಲ್ಲ ಮತ್ತು ಆಡಿಟ್ ವರದಿಯು ವಿಳಂಬವಾಯಿತು. ಕೆಲವು ದೂರುಗಳಿದ್ದವು ಮತ್ತು ಆಡಿಟ್ ವರದಿ ಸ್ವೀಕರಿಸಿ ನಂತರ ತಕ್ಷಣವೇ ಈ ವಿಷಯವನ್ನು ತನಿಖೆಗಾಗಿ ರಿಜಿಸ್ಟ್ರಾರ್‌ರವರಿಗೆ ರೆಫರ್ ಮಾಡಲಾಯಿತು.

# ಲ್ಯಾಂಡ್ ಮಾರ್ಟ್‌ಗೇಜ್ ಬಗ್ಗೆ

2ನೇ ಮಾರ್ಚ್ 1965

**ಶ್ರೀ ವೀರಭದ್ರಪ್ಪ ಈರಪ್ಪ (ಯಲಬರ್ಗಾ)**

A. ಯಲಬುರ್ಗಾ ತಾಲ್ಲೂಕು ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕಿನ ಡೈರೆಕ್ಟರ್ ಮತ್ತು ಪ್ರಮೋಟರ್‌ರವರು ಸಂಘದ ಸದಸ್ಯರಿಂದ ಸಂಗ್ರಹಿಸಿದ ಎನ್‌ರೋಲ್‌ಮೆಂಟ್ ಶುಲ್ಕವನ್ನು ಬ್ಯಾಂಕಿಗೆ ಜಮಾ ಮಾಡಿಲ್ಲ ಎಂಬ ವಿಷಯ ಅವರ ಗಮನಕ್ಕೆ ಬಂದಿದೆಯೇ?

B. ಯಾವಾಗ ಮತ್ತು ಎಷ್ಟು ಮೊತ್ತದ ಹಣವನ್ನು ಸಂಗ್ರಹಿಸಲಾಗಿದೆ ಮತ್ತು ಯಾರಿಂದ ಸಂಗ್ರಹಿಸಲಾಗಿದೆ, ಆ ವ್ಯಕ್ತಿಗಳ ಸಂಖ್ಯೆಯೆಷ್ಟು?

C. ಇದಕ್ಕೆ ಸಂಬಂಧಿಸಿದಕ್ಕೆ ಅವರು ತೆಗೆದುಕೊಂಡ ಕ್ರಮ.

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ)**

A. ಹೌದು – ಪ್ರಮೋಟರ್‌ನಿಂದ

B. 28.01.1960 ರಿಂದ 26.02.1960 ರವರೆಗೆ 47 ವ್ಯಕ್ತಿಗಳಿಂದ ಒಟ್ಟು 523–11 ರೂಪಾಯಿಗಳನ್ನು ಸಂಗ್ರಹಿಸಿಲಾಗಿದೆ.

C. ಹಣವನ್ನು ವಸೂಲು ಮಾಡಲು ಬೇಕಾದ ಅವಶ್ಯವಾದ ಕ್ರಮಕ್ಕೆ ಸೊಸೈಟಿಯು ಕಾನೂನು ಸಲಹೆಯನ್ನು ಪಡೆಯಲು ತಿಳಿಸಲಾಗಿದೆ.

**ಶ್ರೀ ವೀರಭದ್ರಪ್ಪ ಈರಪ್ಪ** – ಸ್ವಾಮಿ, ಈ ವಿಷಯ ಸರ್ಕಾರದವರ ಗಮನಕ್ಕೆ ಬಂದು ಎಷ್ಟು ದಿವಸ ಆಯಿತು?

**ಶ್ರೀ ಕೊಂಡಜ್ಜಿ ಬಸಪ್ಪ** – ಸುಮಾರು ಎರಡು ಮೂರು ವರ್ಷ ಆಯಿತು.

**ಶ್ರೀ ವೀರಭದ್ರಪ್ಪ ಈರಪ್ಪ:** ಇಷ್ಟು ದಿವಸ ಆದರೂ ಯಾವ ಕಾರ್ಯಕ್ರಮವನ್ನೂ ತೆಗೆದುಕೊಳ್ಳದೇ ಇರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ನಡೆದಿರುವುದು, ಮುಂಚೆ ವಸೂಲು ಮಾಡಿರುವ ಹಣದ ಬಗ್ಗೆ. ಆದ್ದರಿಂದ ಇದು ರಿಜಿಸ್ಟ್ರಾರ್ ಅವರ ಪೆರೊಲಿನಲ್ಲಿ ಬರುತ್ತದೆಯೇ ಎಂಬ ಪ್ರಶ್ನೆ ಉದ್ಭವಿಸಿದೆ. ಒಂದು ಡಿಸ್ಪ್ಯೂಟ್ ಕೂಡ ಹಾಕಿ ಅದು ಡಿಸ್‌ಮಿಸ್ ಆಗಿದೆ 47 ಜನ ಇಂಡಿವಿಜುಯಲ್ಸ್ ಸಬ್‌ಸ್ಕ್ರೈಬ್ ಮಾಡಿದ್ದಾರೆ. ಆದ್ದರಿಂದ ಯಾವ

ರೀತಿ ಕ್ರಮ ತೆಗೆದುಕೊಳ್ಳಬೇಕು ಎಂಬ ಪ್ರಶ್ನೆಯನ್ನು ಪರಿಶೀಲನೆ ಮಾಡುತ್ತಾ ಇದ್ದೇವೆ.

**ಶ್ರೀ ಜಿ.ವಿ. ಗೌಡ:** ಈಗಲೂ ಕೂಡ ಅವರನ್ನು ಡೈರೆಕ್ಟರ್ ಆಗಿ ನೇಮಕ ಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಮುಂಚೆ ಆದಂತಹ ಒಂದು ಪ್ರಸಂಗ.

**ಶ್ರೀ ಆರ್. ಎಸ್. ಪಾಟೀಲ** – ಅವರನ್ನು ಹಾಗೆಯೇ ಬಿಟ್ಟು ಬಿಡಲಾಗುತ್ತದೆಯೇ ಅಥವಾ ಅವರ ಮೇಲೆ ಏನಾದರೂ ಕ್ರಮ ತೆಗೆದುಕೊಳ್ಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಪ್ರಮೋಟರ್ಸ್ ಮಾಡಿರುವ ಕೆಲಸ. ಪ್ರಮೋಟರ್ಸ್ 47 ಜನರಿಂದ ವಸೂಲು ಮಾಡಿದ ಹಣವನ್ನು ಜಮಾ ಮಾಡಿಲ್ಲ. ಸೊಸೈಟಿ ರಿಜಿಸ್ಟರ್ ಆದಮೇಲೆ ಸೊಸೈಟಿಗಳಿಗೆ ಸಂಬಂಧಪಟ್ಟ ಆಕ್ಟ್ ಪ್ರಕಾರ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ, ವ್ಯವಹಾರದಲ್ಲಿ ಸಂವಿಧಾನದಲ್ಲಿ ಏನಾದರೂ ಕುಂದು ಕೊರತೆ ಇದ್ದರೆ ಅಂತಹ ಸಂದರ್ಭದಲ್ಲಿ ಸೆಕ್ಷನ್ 70 ರ ಪ್ರಕಾರ ಕ್ರಮ ತೆಗೆದುಕೊಳ್ಳುವುದಕ್ಕೆ ಅಧಿಕಾರವಿದೆ. ಸೊಸೈಟಿ ರಿಜಿಸ್ಟರ್ ಆಗುವುದಕ್ಕೆ ಮುಂಚೆ ಆದ ಕೆಲಸ ಹೇಗೆ ಅಂತಲೇ ಲೀಗಲ್ ಒಪಿಯನ್ ತೆಗೆದುಕೊಳ್ಳಬೇಕಾಗುತ್ತದೆ. ಅವರಿಂದ ಒಪೀನಿಯನ್ ಬಂದ ಮೇಲೆ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಅಂಗಡಿ ಚನ್ನಬಸಪ್ಪ** : ಭಾರತ ದಂಡ ಸಂಹಿತೆಯ (ಐ.ಪಿ.ಎಸ್.) ಕಲಂ 420 ರಡಿಯಲ್ಲಿ ಸರ್ಕಾರ ಕ್ರಮ ತೆಗೆದುಕೊಳ್ಳವುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದಕ್ಕೆ ಅವಕಾಶ ಇರಬಹುದು. ಅದನ್ನು ಯೋಚನೆ ಮಾಡುತ್ತೇನೆ.

**ಸಭಾಧ್ಯಕ್ಷರು:** ಇವರು ಡೈರೆಕ್ಟರ್ ಆಗುವುದಕ್ಕಿಂತ ಮುಂಚೆ ಸಂಗ್ರಹಿಸಲಾಗಿದೆ.

**ಶ್ರೀ ಜಿ.ವಿ. ಗೌಡ:** ಪ್ರಮೋಟರ್ ಆಗಿ ಇವರು ಸಂಗ್ರಹಿಸಿದ್ದು, ನೋಂದಣಿ (ರಿಜಿಸ್ಟರ್) ನಂತರದಲ್ಲಿ ಇವರನ್ನು ಡೈರಕ್ಟರ್ ಆಗಿ ಮಾಡಿದ್ದು. ಆದ್ದರಿಂದ ರಿಜಿಸ್ಟ್ರಾರ್‌ರವರು ಕ್ರಮವನ್ನು ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ, ಇವರು ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕಿನ ಡೈರೆಕ್ಟರ್ ಆಗಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ** – "ಈ ಸದನಕ್ಕೆ ಆಗಲೇ ಒಪ್ಪಿಸಿದ್ದೇನೆ, ರಿಜಿಸ್ಟ್ರಾರ್‌ರವರ ಮುಂದೆ ವಿವಾದದ ಅರ್ಜಿಯನ್ನು ಇಟ್ಟಿದ್ದೇವೆ. ಅವರು ಅರ್ಜಿಯನ್ನು ವಜಾ ಮಾಡಿದ್ದಾರೆ.

**ಶ್ರೀ ಎನ್. ನಂಜೇಗೌಡ** – ಸೊಸೈಟಿ ರಿಜಿಸ್ಟರ್ ಆಗಬೇಕಾದರೆ ದುಡ್ಡು ವಸೂಲು ಮಾಡಿ ಆಮೇಲೆ ತಾನೆ ರಿಜಿಸ್ಟರ್ ಆಗಬೇಕು?

**ಶ್ರೀ ಕೊಂಡಜ್ಜಿ ಬಸಪ್ಪ** – ಹೌದು, ಹಣ ವಸೂಲು ಮಾಡಿ ಜಮಾ ಆಗಿರುವುದರಲ್ಲಿ ಕೆಲವು ಭಾಗ ಜಮಾ ಆಗಿಲ್ಲ ಅಂತ ಪ್ರಶ್ನೆ ಇರುವುದು.

**ಶ್ರೀ ಜಿ.ವಿ.ಗೌಡ:** ಡೈರಕ್ಟರ್ ಆಗಿ ಮುಂದುವರಿಯಲು ಅವರಿಗೆ ಅನರ್ಹತೆ ಉಂಟಾಗುವುದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ಪ್ರತ್ಯೇಕವಾಗಿ ಪರಿಶೀಲಿಸುತ್ತೇವೆ. ಆದರೆ, ಈಗಿನ ಪ್ರಶ್ನೆಯೆಂದರೆ ಹಣ ವಸೂಲಿ ಮಾಡಬಹುದೇ ಎಂಬುದು.

**ಶ್ರೀ ಬಿ. ಕೆ. ಪುಟ್ಟಯ್ಯ** – ಇದು 1960 ನೇ ಇಸವಿಯಲ್ಲಿ ನಡೆದಿರುವುದು, 5 ವರ್ಷ ಆದರೂ ಇನ್ನೂ ತೀರ್ಮಾನವಾಗದೇ ಇರುವುದಕ್ಕೆ ಕಾರಣವೇನು?

**ಸಭಾಧ್ಯಕ್ಷರು:** ಮಧ್ಯಸ್ಥಗಾರರು ಸ್ವಲ್ಪ ಸಮಯ ತೆಗೆದುಕೊಂಡಿದ್ದಾರೆ. ಮುಂದಿನ ಪ್ರಶ್ನೆಯನ್ನು ಕೈಗೆತ್ತಿಕೊಳ್ಳಬಹುದು.

## ವಿವಿಧೋದ್ದೇಶ ಸಹಕಾರ ಸಂಘ

**5ನೇ ಮಾರ್ಚ್ 1965**

**ಶ್ರೀಮತಿ ರತ್ನಮ್ಮ ಮಾಧವ ರಾವ್ (ಶಿವಮೊಗ್ಗ) :–**

1. ಶಿಕಾರಿಪುರದ ವಿವಿಧೋದ್ದೇಶ ಸಹಕಾರ ಸಂಘವು 22.04.1958ರಲ್ಲಿ ನಡೆದ ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ಲಿಕ್ವಿಡೇಟ್ ಮಾಡಬೇಕು.

2. ಹೌದು ಎಂದಲ್ಲಿ, ಇದುವರೆಗೂ ಇದಕ್ಕೆ ಸಂಬಂಧಿಸಿದಂತೆ ಕ್ರಮ ಕೈಗೊಳ್ಳದಿರುವುದಕ್ಕೆ ಕಾರಣಗಳು.

1. ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ)

3. ಹೌದು

4. ಸಂಘವು ನಂತರದಲ್ಲಿ ಮತ್ತೇ ನಡೆಸಿಕೊಂಡು ಹೋಗುವ ಪರವಾಗಿ ಮನವಿಮಾಡಿದರು.

**ಶ್ರೀಮತಿ ರತ್ನಮ್ಮ ಮಾಧವರಾವ್** – ಸ್ವಾಮಿ, ನನ್ನ ಪ್ರಶ್ನೆಗೆ ಉತ್ತರವಾಗಿ ಶಿಕಾರಿಪುರದ ವಿವಿಧೋದ್ದೇಶ ಸಹಕಾರ ಸಂಘವನ್ನು ಮುಚ್ಚಬೇಕೆಂದು ನಿರ್ಣಯಿಸಿದ್ದರು ಎಂದು ಹೇಳಿದ್ದೀರಿ ಅದಕ್ಕೆ ಕಾರಣವೇನು? ಮತ್ತು ಆ ಬಗ್ಗೆ ಸರ್ಕಾರದವರು ಏನು ಕ್ರಮ ತೆಗೆದುಕೊಂಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಸೊಸೈಟಿಯ ಜನರಲ್ ಬಾಡಿ ಮೀಟಿಂಗ್‌ನಲ್ಲಿ ಅದನ್ನು ಲಿಕ್ವಿಡೇಟ್ ಮಾಡಬೇಕು ಅದರ ಕೆಲಸ ಕಾರ್ಯಗಳು ಸರಿಯಾಗಿ ನಡೆಯುತ್ತಿಲ್ಲ ಎಂದು ತೀರ್ಮಾನ ಮಾಡಿದ್ದರು. ಆ ಸೊಸೈಟಿಯನ್ನು ಲಿಕ್ವಿಡೇಟ್ ಮಾಡುವುದಕ್ಕಿಂತ ಮುಂಚೆ ಕಾನೂನು ಪ್ರಕಾರ ಸ್ಟ್ಯಾಚ್ಯೂಟರಿ ಎನ್‌ಕ್ವೈರಿ ಮಾಡಬೇಕೆಂದು ಅದಕ್ಕೆ ಒಬ್ಬರು ಅಧಿಕಾರಿಗಳನ್ನು ನೇಮಕ ಮಾಡಿದ್ದೆವು ಅದರ ರಿಪೋರ್ಟ್ ಬರುವುದರಲ್ಲಿಯೇ ಪುನಃ ಆ ಸೊಸೈಟಿಯ ಸೆಕ್ರೆಟರಿಯವರು ರಿಜಿಸ್ಟ್ರಾರ್ ಅವರಿಗೆ ಒಂದು ಕಾಗದವನ್ನು ಬರೆದು ಆ ಸೊಸೈಟಿಯನ್ನು ಕನ್‌ಸ್ಯೂಮರ್ಸ್ ಸೊಸೈಟಿಯಾಗಿ ರಿವೈವ್ ಮಾಡುತ್ತೇವೆ, ಅದನ್ನು ರೀಕನ್‌ಸಿಡರ್ ಮಾಡುತ್ತೇವೆ. ಅದನ್ನು ಲಿಕ್ವಿಡೇಟ್ ಮಾಡಬೇಡಿ ಎಂದು ಹೇಳಿದ್ದಾರೆ. ಆದ್ದರಿಂದ ಈಗ ನಾವು ಅದನ್ನು ಕಾದು ನೋಡುತ್ತಿದ್ದೇವೆ.

**ಶ್ರೀ ಬಿ. ಬೈರಪ್ಪಾಜಿ:** ಈ ಸಹಕಾರ ಸಂಘದಲ್ಲಿ ದುರುಪಯೋಗವಾಗಿರತಕ್ಕ ಹಣ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ಈ ಪ್ರಶ್ನೆಯು ಉದ್ಭವಿಸುವುದಿಲ್ಲ ಸದಸ್ಯರು ಪ್ರತ್ಯೇಕ ಪ್ರಶ್ನೆಯನ್ನು ಇಟ್ಟಲ್ಲಿ, ನಾನು ಮಾಹಿತಿಯನ್ನು ಪಡೆದುಕೊಳ್ಳುತ್ತೇನೆ.

**ಶ್ರೀ ಕೆ. ಲಕ್ಕಪ್ಪ:** ಆ ಸಹಕಾರ ಸಂಘದ ಲೆಕ್ಕಪತ್ರಗಳು ಆಡಿಟ್ ಅದದ್ದು ಯಾವಾಗ?

**ಶ್ರೀ ಕೊಂಡಜ್ಜಿ ಬಸಪ್ಪ:** 1960–61 ನೇ ಇಸವಿಯಲ್ಲಿ.

**ಶ್ರೀ ಬಿ. ಬೈರಪ್ಪಾಜಿ:** ಆ ಸಹಕಾರ ಸಂಘದ ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನ ಮಾಡಿದ ಪ್ರಕಾರ ಆ ಸಂಘದ ಆಸ್ತಿಯನ್ನು ದಾಮಾಷಾ ಪ್ರಕಾರ ಲೇಣಿದಾರರಲ್ಲಿ ಹಂಚತಕ್ಕ ಮೊಬಲಗೆಷ್ಟು? ಆ ಮೊಬಲಗನ್ನು ಲೇಣಿದಾರರಿಗೆ ಪಾವತಿ ಮಾಡಲು ಈಗ ತಾವು ಕ್ರಮವನ್ನು ತೆಗೆದುಕೊಂಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಸೊಸೈಟಿ ಇನ್ನೂ ಲಿಕ್ವಿಡೇಟ್ ಆಗಿಲ್ಲ ಎಂದು ವರ್ತಮಾನ ಬಂದಿದೆ. ಆ ಕೇಸ್‌ನ್ನು ಎನ್‌ಕ್ವೈರಿ ಮಾಡಬೇಕೆಂದು ಅದಕ್ಕೆ ಒಬ್ಬರು ಆಫೀಸರನ್ನು ನೇಮಿಸಿ ಅವರಿಂದ ಸ್ಟಾಚ್ಯೂಟರಿ ಎನ್‌ಕ್ವೈರಿ ರಿಪೋರ್ಟ್ ಬರುವುದರಲ್ಲಿ ಅದನ್ನು ರೀಕನ್‌ಸಿಡರ್ ಮಾಡುತ್ತೇವೆ. ಅದನ್ನು ಕನ್‌ಸ್ಯೂಮರ್ ಸೊಸೈಟಿಯಾಗಿ ಪರಿವರ್ತನೆ ಮಾಡಿಕೊಳ್ಳುತ್ತೇವೆ ಅದನ್ನು ಲಿಕ್ವಿಡೇಟ್ ಮಾಡಿ ಎಂದು ಆ ಸೊಸೈಟಿಯವರು ಮನವಿ ಮಾಡಿಕೊಂಡಿದ್ದಾರೆ ಅವರು ಅದನ್ನು ರಿವೈವ್ ಮಾಡುವುದಕ್ಕೆ ಸಾಧ್ಯವಿದೆಯೇ ಹೇಗೆ ಎಂಬುದನ್ನು ನಾವು ಕಾದು ನೋಡುತ್ತಿದ್ದೇವೆ.

**ಶ್ರೀ ಕೆ. ಲಕ್ಕಪ್ಪ:** ಆ ಸಂಘದಲ್ಲಿ ಹಣದ ದುರುಪಯೋಗ ನಡೆದಿದೆ. ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಲ್ಲಿ ಏನು ನಡೆದಿದೆ. ಅದಕ್ಕೆ ಯಾರು ಯಾರು ಜವಾಬ್ದಾರರು ಎಂಬ ಬಗ್ಗೆ ಸ್ಟ್ಯಾಚ್ಯೂಟರಿ ಎನ್‌ಕ್ವೈರಿ ಮಾಡಬೇಕು.

**ಶ್ರೀ ಎನ್. ನಂಜೇಗೌಡ** – ಆ ಸೊಸೈಟಿಯಿಂದ ಶೇರ್ ಕ್ಯಾಪಿಟಲ್ ಎಷ್ಟು ಬರಬೇಕಾಗುತ್ತದೆ ಎಂಬುದನ್ನು ನೋಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಸೊಸೈಟಿಯವರು ಅದನ್ನು ರಿವೈವ್ ಮಾಡಿಕೊಳ್ಳುತ್ತೇವೆ, ಅದನ್ನು ರೀಕನ್‌ಸಿಡರ್ ಮಾಡುತ್ತಿದ್ದೇವೆ, ಅದನ್ನು ಲಿಕ್ವಿಡೇಟ್ ಮಾಡಬೇಡಿ ಎಂದು ಮನವಿ ಮಾಡಿಕೊಂಡಿದ್ದಾರೆ. ಆದ್ದರಿಂದ ಅದನ್ನು ನಾವು ಕಾದುನೋಡುತ್ತಿದ್ದೇವೆ.

**ಶ್ರೀ ಎನ್. ನಂಜೇಗೌಡ:** ಅದು ಜನರಲ್ ಬಾಡಿಯವರ ತೀರ್ಮಾನವೇ ಅಥವಾ ಆ ಸಂಘದ ಸೆಕ್ರೆಟರಿಯವರ ತೀರ್ಮಾನವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಸೊಸೈಟಿಯ ಸೆಕ್ರೆಟರಿಯವರು ಬರೆದಿದ್ದಾರೆ.

**ಶ್ರೀ ಎನ್. ನಂಜೇಗೌಡ:** ಜನರಲ್ ಬಾಡಿಯವರು ಮಾಡಿದಂತಹ ತೀರ್ಮಾನವನ್ನು ಅವರು ಓವರ್ ರೂಲ್ ಮಾಡುವುದಕ್ಕಾಗುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ವಿಷಯದಲ್ಲಿ ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕೆ ಜನರಲ್ ಬಾಡಿಯನ್ನು ಕರೆಯುತ್ತೇವೆ. ಸ್ವಲ್ಪ ಕಾಯಬೇಕೆಂದು ಹೇಳಿದ್ದಾರೆ. ಆದ್ದರಿಂದ ಅದನ್ನು ಕಾದು ನೋಡುತ್ತಿದ್ದೇವೆ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ:** ಈ ಸಹಕಾರ ಸಂಘದ ಸರ್ವ ಸದಸ್ಯರ ಸಭೆ 22–04–1958ರಲ್ಲಿ ನಡೆದಿದೆ, ಮತ್ತೆ ಇಲ್ಲಿಯವರೆಗೂ ಆ ಸಂಘದ ಸರ್ವಸದಸ್ಯರ ಸಭೆ ನಡೆದಿಲ್ಲ. ಆದರೂ ಕೂಡ ಅದರ ಮೇಲೆ ಸರ್ಕಾರದವರು ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ ಅದರ ಉದ್ದೇಶ ಏನು, ಮತ್ತು ಅದರಲ್ಲಿ ಏನೋ ರಾಜಕೀಯ ಕೈವಾಡ ಇರಬೇಕಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ತುಂಬಾ ತಡವಾಗಿರುವುದಕ್ಕೆ ಮತ್ತು ಈ ವಿಷಯದಲ್ಲಿ ತಕ್ಷಣ/ಶೀಘ್ರವಾಗಿ ಕ್ರಮ ಕೈಗೊಳ್ಳದಿರುವ ಬಗ್ಗೆ ಅಧಿಕಾರಿ ಮತ್ತು ಅಧಿಕಾರಿಗಳಿಂದ ನಾವು ವಿವರಣೆ ಕೇಳಿದ್ದೇವೆ.

**ಶ್ರೀ ಕೆ. ಲಕ್ಕಪ್ಪ** – ಸಹಕಾರ ಸಂಘಗಳಲ್ಲಿ ಹಣ ದುರುಪಯೋಗವಾಗಿರುವ ನೂರು ಪ್ರಶ್ನೆಗಳು ಈ ಸಭೆಯಲ್ಲಿ ಬರುತ್ತಿವೆ, ಸಹಕಾರ ಸಂಘದ ನೀತಿ ವಿಫಲವಾಗಿರುವುದು ಇದಕ್ಕೆ ಕಾರಣ ಅಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಪ್ರಶ್ನೆಗೆ ನಾನು ಉತ್ತರಿಸುವುದಿಲ್ಲ.

# ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ಕೊಳವೆ ಬಾವಿ

**7ನೇ ಏಪ್ರಿಲ್ 1963**

**ಶ್ರೀ ಡಿ. ಮುನಿಚಿನ್ನಪ್ಪ**

A. ಬೆಂಗಳೂರು ದಕ್ಷಿಣ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮಗಳ ಪ್ರದೇಶದಲ್ಲಿ ಎಚ್. ಎ.ಎಲ್. ಕಾರ್ಖಾನೆಯವರು ಒಂದೇ ಸ್ಥಳದಲ್ಲಿ ಎಂಟು ಹತ್ತು ಕೊಳವೆ ಬಾವಿಗಳನ್ನು ತೆಗಿಸಿ ಪಂಪ್‌ಗಳನ್ನು ಹಾಕಿರುವುದರಿಂದ ಆ ಪ್ರದೇಶದಲ್ಲಿರತಕ್ಕ ಜನಗಳಿಗೆ ವಿಶೇಷವಾಗಿ ಬೇಸಿಗೆಯಲ್ಲಿ ಕುಡಿಯುವ ನೀರಿಲ್ಲದೆ ಬಹಳ ತೊಂದರೆಯಾಗಿದೆ ಎನ್ನುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ?

B. ಹಿಂದೆ ನನ್ನ ಪ್ರಶ್ನೆಗೆ ಉತ್ತರವಾಗಿ ಹೇಳಿದ್ದೀರಾ ಎಲ್ಲಿಬೇಕಾಗುವುದೋ ಅಲ್ಲಿ ಎರಡು ವರ್ಷದ ಅವಧಿಯೊಳಗೆ ಕೊಳವೆ ಬಾವಿಗಳನ್ನು ತೆಗೆಸುವುದಾಗಿ ಈ ಹಿಂದೆ ಸರ್ಕಾರವು ನನ್ನ ಪ್ರಶ್ನೆಗೆ ಉತ್ತರವಾಗಿ ಹೇಳಿದೆ.

C. ಹೌದು ಎಂದಲ್ಲಿ, ತೆಗೆಸಿರುವ ಕೊಳವೆ ಬಾವಿಗಳೆಷ್ಟು.

ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):

A. ಇಲ್ಲ.

B. ಹೌದು ಎಲ್ಲಿ ಸಾಮಾನ್ಯ ಬಾವಿಗಳಿಂದ ಕುಡಿಯುವ ನೀರನ್ನು ಕೊಡಲಾಗುವುದಿಲ್ಲವೋ ಅಲ್ಲಿ.

C. ಯಾವುದೂ ಇಲ್ಲ.

**ಶ್ರೀ ಡಿ. ಮುನಿಚಿನ್ನಪ್ಪ** – ಸ್ವಾಮಿ, ನನ್ನ ಪ್ರಶ್ನೆಗೆ ಉತ್ತರವಾಗಿ ಬೆಂಗಳೂರು ದಕ್ಷಿಣ ತಾಲ್ಲೂಕಿನ ಸುತ್ತಮುತ್ತಲಿನ ಗ್ರಾಮಗಳ ಪ್ರದೇಶದಲ್ಲಿ ಎಚ್.ಎ.ಎಲ್. ಕಾರ್ಖಾನೆಯವರು ಒಂದೇ ಸ್ಥಳದಲ್ಲಿ ಎಂಟು ಹತ್ತು ಕೊಳವೆ ಬಾವಿಗಳನ್ನು ತೆಗೆಸಿ ಪಂಪುಗಳನ್ನು ಹಾಕಿರುವುದರಿಂದ ಆ ಪ್ರದೇಶದಲ್ಲಿರತಕ್ಕ ಜನಗಳಿಗೆ ಕುಡಿಯುವ ನೀರಿಲ್ಲದೆ ಬಹಳ ತೊಂದರೆಯಾಗಿದೆ ಎನ್ನುವ ವಿಷಯ ಸರ್ಕಾರದ ಗಮನಕ್ಕೆ ಬಂದಿಲ್ಲ ಎಂದು ಅಪ್ಪಣೆ ಕೊಡಿಸಿದ್ದೀರಿ. ಆ ಬಗ್ಗೆ ಆ ಪ್ರದೇಶದ ಜನಗಳು ಸರ್ಕಾರಕ್ಕೆ ಮನವಿ ಮಾಡಿಕೊಂಡ ರೆಕಾರ್ಡ್ ಈಗ ಸುಮಾರು ಒಂದು ವರ್ಷದಿಂದಲೂ ಡಿವಿಜನಲ್ ಕಮೀಷನರ್ ಆಫೀಸಿನಲ್ಲಿ ಪೆಂಡಿಂಗ್ ಇದೆ. ಆ

ಪ್ರದೇಶದಲ್ಲಿ ಜನಗಳಿಗೆ ಕುಡಿಯುವ ನೀರಿನ ತೊಂದರೆ ಇರುವ ಕಡೆ ಒಂದು ಕೊಳವೆ ಬಾವಿಯನ್ನು ಒದಗಿಸಿಕೊಟ್ಟಿಲ್ಲ. ಇದರಿಂದ ಅಲ್ಲಿನ ಜನಗಳಿಗೆ ಕುಡಿಯುವ ನೀರಿಗೆ ಬಹಳ ತೊಂದರೆಯಾಗಿದೆ. ತಾವು ವಿಮಾನ ನಿಲ್ದಾಣಕ್ಕೆ ಹೋಗುವಾಗ ಕೋಡಿಹಳ್ಳಿ ಹತ್ತಿರ ಸ್ವಲ್ಪ ಮುಂದಕ್ಕೆ ಹೋಗಿ ಅಲ್ಲಿ ಎಡ ಭಾಗದಲ್ಲಿ ನೋಡಿದರೆ ತಮಗೆ ಗೊತ್ತಾಗುತ್ತದೆ. ಅಲ್ಲಿ ಒಂದೇ ಕಡೆ ಎಚ್. ಎ. ಎಲ್. ನವರು 8 ಕೊಳವೆ ಬಾವಿಗಳನ್ನು ತೆಗೆಸಿ, ಅವುಗಳ ಪಂಪು ಸೆಟ್ಟುಗಳನ್ನು ಹಾಕಿದ್ದಾರೆ. ಇದರಿಂದ ಆ ಸುತ್ತಮುತ್ತ ಇರತಕ್ಕ ಗ್ರಾಮಗಳಿಗೆ ಸುಮಾರು 30–40 ಸಾವಿರ ಜನಗಳಿಗೆ ಕುಡಿಯುವ ನೀರಿಗ ಬಹಳ ತೊಂದರೆಯಾಗಿದೆ, ಆದ್ದರಿಂದ ಆ ಪ್ರದೇಶದಲ್ಲಿ ನಲ್ಲಿಗಳನ್ನು ಹಾಕಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಎಚ್. ಎ. ಎಲ್. ಮತ್ತು ಐ.ಟಿ. ಐ. ಅಥಾರಿಟಿಯವರನ್ನು ನಾವು ಕೇಳಿಕೊಂಡಿದ್ದೇವೆ.ಟ್ಯಾಪ್‌ಗಳ ಮುಖಾಂತರ ಆ ಪ್ರದೇಶದಲ್ಲಿರತಕ್ಕ ಹಳ್ಳಿಗಳಿಗೆ ನೀರನ್ನು ಒದಗಿಸಬೇಕೆಂದು ನಾವು ಅವರನ್ನು ಪ್ರಾರ್ಥನೆ ಮಾಡಿಕೊಂಡಿದ್ದೇವೆ. ಆ ಮೇಲೆ ಕೊಳವೆ ಬಾವಿಗಳನ್ನು ಒದಗಿಸುವ ವಿಚಾರವನ್ನು ಮಾನ್ಯ ಸದಸ್ಯರು ಹೇಳಿದರು. ಆ ವಿಚಾರದಲ್ಲಿ ಹೇಳುವುದಾದರೆ, ಸಾಧಾರಣ ಬಾವಿಗಳನ್ನು ತೆಗೆಸಿ ಅವುಗಳ ಮೂಲಕ ಜನಗಳಿಗೆ ನೀರನ್ನು ಒದಗಿಸಲು ಸಾಧ್ಯವಾಗದಿದ್ದರೆ ಅಂಥಾ ಕಡೆಗಳಲ್ಲಿ ಕೊಳವೆ ಬಾವಿಗಳನ್ನು ತೆಗೆಸಿ ಅವುಗಳ ಮೂಲಕ ನೀರನ್ನು ಒದಗಿಸಲಾಗುವುದು. ಕೋಡಿಹಳ್ಳಿಗೆ ರೂರಲ್‌ವಾಟರ್ ಸಪ್ಲೈ ಸ್ಕೀಮಿನಲ್ಲಿ ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸಲು ಒಂದು ಪ್ರಪೋಜಲ್ ಕಳುಹಿಸಿದ್ದಾರೆ. ಅದು ಮಂಜೂರಾಗಿ ಬಂದ ಮೇಲೆ ಅದನ್ನು ತೆಗೆದುಕೊಳ್ಳುತ್ತೇವೆ.

**ಶ್ರೀ ಡಿ. ಮುನಿಚಿನ್ನಪ್ಪ:** ಆ ಪ್ರದೇಶದಲ್ಲಿ ಎರಡು ಮೂರು ಕಡೆ ಕುಡಿಯುವ ನೀರಿಗೆ ಬಹಳ ತೊಂದರೆ ಇದೆ. ಆದ್ದರಿಂದ ಆ ಬಗ್ಗೆ ಸರ್ಕಾರದವರು ದಯವಿಟ್ಟು ಅವರಿಗೆ ಸಹಾಯಮಾಡಬೇಕು. ಆ ಪ್ರದೇಶದಲ್ಲಿ ಅನೇಕ ಜನಗಳು ಜಮೀನನ್ನು ಕಳೆದುಕೊಂಡಿದ್ದಾರೆ. ಅಂಥವರಿಗೆ ಕುಡಿಯುವ ನೀರನ್ನಾದರೂ ಕೊಡದೆ ಹೋದರೆ ಬಹಳ ಕಷ್ಟವಾಗುತ್ತದೆ, ಆದ್ದರಿಂದ ಆ ಬಗ್ಗೆ ಸರ್ಕಾರದವರು ಪ್ರಯತ್ನ ಮಾಡಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ಕಾರಕ್ಕೆ ತೊಂದರೆಗಳ/ಕಷ್ಟದ ಬಗ್ಗೆ ಗೊತ್ತಿದೆ.

# ರಾಜ್ಯ ಕೃಷಿ ಸಹಕಾರಿ ಸಂಘಗಳು

**22ನೇ ಏಪ್ರಿಲ್ 1965**

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ (ತಿಪಟೂರು):**

A. ರಾಜ್ಯದಲ್ಲಿ ಸ್ಥಾಪಿತವಾಗಿರುವ ಸಹಕಾರ ಕೃಷಿ ಸಂಘಗಳ ಸಂಖ್ಯೆ ಮತ್ತು ಪ್ರತಿಯೊಂದು ಸಂಘಗಳ ಸೇರಿರುವ ಭೂಮಿಯ ವಿಸ್ತೀರ್ಣ.

B. ಪ್ರತಿಯೊಂದು ಸಂಘದಲ್ಲಿ ಯಾವಾಗಿನಿಂದ ಎಷ್ಟು ವರ್ಷ ಜೊತೆಯಾಗಿ ಕಾರ್ಯನಿರ್ವಹಿಸಿದ ಸದಸ್ಯರುಗಳ ಸಂಖ್ಯೆ.

C. ಇತ್ತೀಚೆಗೆ ಕೆಲವು ಸದಸ್ಯರುಗಳು ಸ್ವತಃ ಸಂಘದಿಂದ ಹೊರಉಳಿದಿದ್ದಾರೆ ಎಂಬುದು ಅವರಿಗೆ ತಿಳಿದಿದೆಯೇ ಮತ್ತು ಹೌದು ಎಂದಲ್ಲಿ, ಅದಕ್ಕೆ ಕಾರಣಗಳು.

**ಶ್ರೀ ಕೊಂಡಜ್ಜಿ ಬಸಪ್ಪ(ಸಹಕಾರ ಶಾಖೆಯ ಉಪಮಂತ್ರಿ):**

A. ಮತ್ತು

B.ವೈಡ್ ಹೇಳಿಕೆಯನ್ನು ಸದನದ ಮೇಜಿನ ಮೇಲಿಟ್ಟಿದ್ದೇನೆ

C. ಇಲ್ಲ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ** – ಸ್ವಾಮಿ, ನಮ್ಮ ರಾಜ್ಯದಲ್ಲಿ ಸ್ಥಾಪಿಸಿರುವ ಸಹಕಾರಿ ಕೃಷಿ ಸಂಘಗಳು ಎಷ್ಟು ಮತ್ತು ಅವುಗಳಲ್ಲಿ ಯಾವ ಯಾವ ಸಂಘಗಳಿಗೆ ಸಾಲ, ಅನುದಾನ ಮತ್ತು ಉಪಕರಣಗಳನ್ನು ಎಷ್ಟೆಷ್ಟು ಕೊಟ್ಟಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ಸಹಕಾರಿ ಕೃಷಿ ಸಂಘಗಳು ನಮ್ಮ ರಾಜ್ಯದಲ್ಲಿ ಎಷ್ಟಿವೆ ಎನ್ನುವ ವಿಷಯವನ್ನು ಈ ಮಾನ್ಯ ಸಭೆಯ ಮೇಜಿನ ಮೇಲೆ ಇಟ್ಟಿರುವ ತಃಖ್ತೆಯಲ್ಲಿ ಕೊಡಲಾಗಿದೆ. ಆದರೆ ಅನುದಾನ ಉಪಕರಣಗಳು ಮತ್ತು ಸಾಲಗಳನ್ನು ಯಾವ ಯಾವ ಸೊಸೈಟಿಗಳಿಗೆ ಎಷ್ಟೆಷ್ಟು ಕೊಟ್ಟಿದೆ ಎನ್ನತಕ್ಕ ವಿಚಾರಗಳು ಗೊತ್ತಿಲ್ಲ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ** – ಹಾಗಾದರೆ ತಿಪಟೂರು ತಾಲ್ಲೂಕುನಲ್ಲಿರತಕ್ಕ ಸೊಸೈಟಿಗಳಿಗೆ ಯಾವ ಯಾವ ಸೊಸೈಟಿಗೆ ಏನೇನು ಕೊಟ್ಟಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ತಿಪಟೂರು ತಾಲ್ಲೂಕಿನಲ್ಲಿರತಕ್ಕ ಸೊಸೈಟಿಗಳಿಗೆ ಕೊಟ್ಟಿರತಕ್ಕದ್ದು ಬಹಳ ದೊಡ್ಡ ಪಟ್ಟಿ ಇದೆ.

**ಸಭಾಧ್ಯಕ್ಷರು:** ಈ ಸದಸ್ಯರು ನನ್ನನ್ನು ಭೇಟಿಯಾಗಿದ್ದರು ಮತ್ತು ಅವರು ಕೊಟ್ಟಂತಹ ಪ್ರಶ್ನೆಯ ಕೆಲವು ಭಾಗವನ್ನು ಕತ್ತರಿಸಲಾಗಿದೆ ಎಂದು ನನಗೆ ಹೇಳಿದರು. ಅಸಲು ಪ್ರಶ್ನೆಯನ್ನು ಕೇಳಿದ್ದೇನೆ. ನಾನು ಅದನ್ನು ಇಲ್ಲಿ ಪಡೆದು ಕೊಂಡಿದ್ದೇನೆ ಮತ್ತು ನಾನು ಸದಸ್ಯರಿಗೆ ಮತ್ತು ಸದನಕ್ಕೆ ಹೇಳಿದ್ದೇನೆ, ಇವರ ಅಸಲು ಪ್ರಶ್ನೆಯನ್ನು ಭಾಷಾಂತರ ಮಾಡಿದಾಗ (ಅ) ಯಿಂದ (ಉ)ವರೆಗೆ ಆಗಿದೆ. ಸಾಮಾನ್ಯವಾಗಿ ಪ್ರಶ್ನೆಗಳು ತುಂಬಾ ಉದ್ದವಾಗಿರಬಾರದು.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ** – ಸ್ವಾಮಿ, ತಾವು ಅನುಭವಿಗಳು ಈ ಪ್ರಶ್ನೆಯಲ್ಲಿ ಮುಖ್ಯವಾಗಿರತಕ್ಕ ವಿಷಯವನ್ನು ಕಟ್ ಮಾಡುವ ಬದಲು ಯಾವ ಯಾವ ಸೊಸೈಟಿಗಳಿಗೆ ಎಷ್ಟೆಷ್ಟು ಅನುದಾನವನ್ನು ಕೊಟ್ಟಿದೆ, ಮತ್ತು ಯಾವ ಯಾವ ಸೊಸೈಟಿಗೆ ಎಷ್ಟೆಷ್ಟು ಜಮೀನಿನ ವಿಲೇವಾರಿ ಮಾಡಿದೆ. ಆ ಜಮೀನಿನಲ್ಲಿ ಅವರೇಜ್ ಒಂದು ಎಕರೆಗೆ ಉತ್ಪತ್ತಿ ಏನು ಎಂಬುದನ್ನು ಅದರಲ್ಲಿ ಸೇರಿಸಿದ್ದರೆ ಚೆನ್ನಾಗಿತ್ತು.

**ಸಭಾಧ್ಯಕ್ಷರು** :ಸದಸ್ಯರು ನನ್ನನ್ನು ರೇವಣ್ಣ ಸಿದ್ದಪ್ಪ ಆಗಲು ಬಯಸುತ್ತಾರೆ ಮತ್ತು ಅವರ ಮನಸ್ಸಿನಲ್ಲಿರುವುದು ನನ್ನ ಮನಸ್ಸಿಗೆ ತೆಗೆದುಕೊಂಡು ವಿಷಯವನ್ನು ತೀರ್ಮಾನವನ್ನು ಮಾಡುವುದು. ಇದನ್ನು ಅವರೇ ಯಾಕೆ ಮಾಡಬಾರದು?

**ಶ್ರೀ ಕೆ.ಪಿ. ರೇವಣಸಿದ್ದಪ್ಪ:** ನೀವು ನುರಿತ ಸಂಸದೀಯರು ಸಾರ್, ಇದನ್ನು ನೀವು ಚೆನ್ನಾಗಿ ತಿಳಿದುಕೊಂಡಿದ್ದೀರಾ.

**ಸಭಾಧ್ಯಕ್ಷರು:** ನಾನು (ಅ) ಯಿಂದ (ಇ) ಖಂಡ/ಕ್ಲಾಸ್‌ಗಳನ್ನು ಸೇರಿಸಿಕೊಂಡಿದ್ದೇನೆ/ ಒಪ್ಪಿಕೊಂಡಿದ್ದೇನೆ. ಅವರ ಖಂಡ/ಕ್ಲಾಸ್(ಈ)ನಲ್ಲಿ ರಾಜ್ಯದಲ್ಲಿರುವ ಪ್ರತಿಯೊಂದು ಸಂಘದಲ್ಲಿ ಸರಾಸರಿ ಇಳುವರಿಯನ್ನು ಮತ್ತು ಮುಂದಿನ ಕ್ಲಾಸ್/ಖಂಡದಲ್ಲಿ ಹಲವಾರು ಸೊಸೈಟಿಗಳು ಮೇಲ್ವಿಚಾರಕರಿಗೆ, ಲೋನ್, ಟಿ.ಎ ಮತ್ತು ಡಿ.ಎ ಎಂದು ಖರ್ಚು ಮಾಡಿರುವ ಹಣದ ಬಗ್ಗೆ ಕೇಳಿದ್ದಾರೆ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ:** ಮಾವಿನಕೆರೆ ಸೊಸೈಟಿಗೆ ನೀವು ಕೊಟ್ಟಿರತಕ್ಕಂಥ ಸಾಲ, ಅನುದಾನ ಮತ್ತು ಮೆಷನರಿ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ** – ಪ್ರತಿಯೊಂದು ಸೊಸೈಟಿಗೂ ಫೈನಾನ್ಸಿಯಲ್ ಅಸಿಸ್ಟೆನ್ಸ್ ಕೊಡತಕ್ಕದು ಎರಡು ಸಾವಿರ ರೂಪಾಯಿ. ಷೇರ್ ಕ್ಯಾಪಿಟಲ್ ಮತ್ತು ಮ್ಯಾಚಿಂಗ್ ಕಾಂಟ್ರಿಬ್ಯೂಷನ್ 2 ಸಾವಿರ ರೂಪಾಯಿ ಹಾಕಿದರೆ ನಾವು 2 ಸಾವಿರ ರೂಪಾಯಿ ಕೊಡುತ್ತೇವೆ. ಮೀಡಿಯಮ್ ಟರ್ಮ್ ಲೋನ್ 5 ಸಾವಿರ ರೂಪಾಯಿ ಕೊಡುತ್ತೇವೆ.

ಸಬ್‌ಸಿಡಿ ಫಾರ್‌ಕನ್‌ಸ್ಟ್ರಕ್ಷನ್ ಆಫ್ ಕ್ಯಾಪಿಟಲ್ ಷೇರ್ ಮೂರನೆ-ಎರಡು ಅಂಶ ಕೊಡುತ್ತೇವೆ. ಮೆನೇಜಿರಿಯಲ್ ಸಬ್‌ಸಿಡಿ 1,200 ರೂಪಾಯಿ. ಇದು ಮೂರು ವರ್ಷಕ್ಕೆ ಸ್ಪ್ರೆಡ್ ಆಗುತ್ತದೆ. 5-4-2 ಸಾವಿರ, ಈ ರೀತಿ 11,200ರೂಪಾಯಿ ಫೈನಾನ್ಷಿಯಲ್ ಅಸಿಸ್ಟೆನ್ಸ್ ಕೊಡುತ್ತೇವೆ. ಯಾವ ಯಾವ ಇಲಾಖೆಯಿಂದ ಸಹಾಯ ಬೇಕೊ ಅದನ್ನು ಕೊಡುತ್ತಾರೆ. ಉದಾಹರಣೆಗೆ, ಇರಿಗೇಷನ್ ಫೆಸಿಲಿಟೀಸ್ ಅಕಾಮಡೇಷನ್ನನ್ನು ಡಿಸ್ಟ್ರಿಕ್ಟು ಬ್ಯಾಂಕ್ ಮುಖಾಂತರ ಕೊಟ್ಟಿದ್ದೇವೆ. ಹೀಗೆಯೇ ಪೌಲ್ಟ್ರಿ ಮತ್ತು ಡೈರಿಫಾರಂ ಮಾಡಿಕೊಂಡರೆ, ಸಂಬಂಧಪಟ್ಟ ಇಲಾಖೆ ಸಹಾಯ ಕೊಡಬೇಕೆಂದು ವಿಧೇಯಕ ಮಾಡಿಕೊಂಡಿದ್ದಾರೆ. ಈ ರೀತಿ ಸಹಾಯ ಪಡೆದುಕೊಂಡಿದ್ದಾರೆ.

ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ- ಒಂದು ಎಕರೆಗೆ ಎಷ್ಟು ಬರಬೇಕೆಂದು ಅಂದಾಜು ಮಾಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ನಮ್ಮ ಅಭಿಪ್ರಾಯದಲ್ಲಿ ಕನಿಷ್ಟ ಪಕ್ಷ 25 ಪರ್ಸೆಂಟು ಹೆಚ್ಚಿಗೆ ಆಹಾರ ಧಾನ್ಯಗಳನ್ನೂ, ಆಹಾರ ಪದಾರ್ಥಗಳನ್ನೂ, ಕಮರ್ಷಿಯಲ್ ಕ್ರಾಪ್‌ಗಳನ್ನು ಉತ್ಪತ್ತಿ ಮಾಡಬೇಕೆಂದು ಆಶೆಪಟ್ಟು ಈ ರೀತಿ ಸಹಾಯ ಮಾಡಲಾಗುತ್ತಿದೆ.

ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ – ಹೆಚ್ಚು ಬೆಳೆಯುವ ಬದಲು, ಇದರಿಂದ ಜನರಿಗೆ ತೊಂದರೆಯಾಗುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ತಮ್ಮ ಅಭಿಪ್ರಾಯ, ಕೃಷಿ ಸಹಕಾರಿ ಸಂಘಗಳು 330 ಇವೆ; ಒಂದೊಂದು ಭೂಮಿ ಗುಣ ಒಂದೊಂದು ತರಹ ಇದೆ; ಮಳೆ ಒಂದೇ ತರಹ ಎಲ್ಲ ಕಡೆಯೂ ಬರುವುದಿಲ್ಲ' ಹವ ಒಂದೊಂದು ಕಡೆ ಒಂದೊಂದು ತರಹ ಇರುತ್ತದೆ. ಬಿತ್ತನೆ ಬೀಜಗಳಲ್ಲಿಯೂ ವ್ಯತ್ಯಾಸವಿರುತ್ತದೆ. ಹೀಗೆ ನಾನಾ ವಿಧವಾದ ಕಾರಣಗಳನ್ನು ಬೆಳೆ ಹೊಂದಿಕೊಂಡಿರುತ್ತದೆ. ಆದ್ದರಿಂದ ಎಕರೆವಾರು ಎಷ್ಟು ಆದಾಯ ಬರಬೇಕೆಂದು ನಿಗದಿ ಮಾಡತಕ್ಕಂಥಾದ್ದು ಕಷ್ಟ. ಅದಕ್ಕೆ ಅಡ್ಮಿನಿಸ್ಟ್ರೇಟಿವ್ ಮೆಷಿನರಿಯೂ ಬೇಕು, ಅದು ಈಗ ಇಲ್ಲ. 330 ಸಂಘಗಳಿಗೂ ಒಂದೇ ಮೇನೇಜ್‌ಮೆಂಟ್ ಇದ್ದರೆ, ಅಂದಾಜು ಮಾಡಲಿಕ್ಕೆ ಸಾಧ್ಯವಾದೀತು. ಕೊ-ಆಪರೇಟೀವ್ ಬಗ್ಗೆ ಬಹುಶಃ ವ್ಯಕ್ತ ಪಡಿಸಿದ್ದೀರಿ. ಮುಂದೆ ಒಂದು ಕ್ರಮವನ್ನು ತೆಗೆದುಕೊಂಡು, ಸ್ಟ್ಯಾಟಿಸ್ಟಿಕ್ಸ್ ಕಲೆಕ್ಟ್ ಮಾಡುವುದಕ್ಕೆ ಸರ್ಕಾರ ಪ್ರಯತ್ನ ಪಡುತ್ತದೆ.

**ಶ್ರೀ ಸಿ. ಆರ್. ರಂಗೇಗೌಡ:** ಮಾಗಡಿ ತಾಲ್ಲೂಕು, ಬಗನಿಕೆರೆ ಸರ್ವೋದಯ ಜಾಯಿಂಟ್ ಫಾರ್ಮಿಂಗ್ ಸೊಸೈಟಿ 1959ನೆ ಇಸವಿಯಲ್ಲಿಯೇ ಪ್ರಾರಂಭವಾಯಿತು. 100 ಜನ ಸದಸ್ಯರಿದ್ದಾರೆ. ಇವತ್ತು ಸೊಸೈಟಿ ಕಾರ್ಯ ಮಾಡುತ್ತಾ ಇಲ್ಲ ಅನ್ನುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅನೇಕ ಜಾಯಿಂಟ್ ಫಾರ್ಮಿಂಗ್ ಸೊಸೈಟಿಗಳಿರತಕ್ಕಂಥ ಸಂದರ್ಭಗಳಲ್ಲಿ ಫೂಲ್ ಮಾಡಬಹುದು. ಆದರೆ, ಅವು ಬಿಟ್ಟು ಹೋಗಬೇಕಾದರೆ ನಮ್ಮ ಅಥವಾ ಇಲಾಖೆಯವರ ಪರ್ಮಿಷನ್ ತೆಗೆದುಕೊಂಡು ಬಿಟ್ಟು ಹೋಗಬೇಕು. ನೀವು ಹೇಳಿರುವಂಥಾದ್ದು ಸರ್ಕಾರದ ಗಮನಕ್ಕೆ ಬಂದಿಲ್ಲ. ಕೆಲವುಕಡೆ ಫಾರ್ಮಿಂಗ್ ಸೊಸೈಟಿಗಳಿಗೆ ಇಲಾಖೆಯ ಸ್ವತ್ತು ಸೇರಿರುತ್ತದೆ. ಆದ್ದರಿಂದ ಅವು ಬಿಟ್ಟು ಹೋದ ಅಂಶ ನಮಗೆ ತಿಳಿಯಬೇಕು. ಅಂತೂ ಅವರು ಹೇಳಿದಂಥಾ ನಿದರ್ಶನ ಸರ್ಕಾರದ ಮಟ್ಟದಲ್ಲಿ ತಿಳುವಳಿಕೆಗೆ ಬಂದಿಲ್ಲ.

**ಶ್ರೀ ಸುಶೀಲಾಬಾಯ ಹಿರಾಚಂದ್‌ಷಾ:** ಆಹಾರ ಧಾನ್ಯವಾದ ಗೋಧಿ ಮತ್ತು ಹತ್ತಿ ಬೆಳೆಗೆ ರೋಗ ಬರುತ್ತದೆ. ರೋಗಕ್ಕೆ ಔಷಧಿ ಹಾಕುವುದಕ್ಕೆ ಸೆಂಟರಿನವರು 25 ಪರ್ಸೆಂಟ್ ಕೊಡುತ್ತಾರೆ. ನಮ್ಮ ಸರ್ಕಾರದವರು ಎಷ್ಟು ಪರ್ಸೆಂಟ್ ಸೊಸೈಟಿಗೆ ಒದಗಿಸಿಕೊಡುತ್ತಾರೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಸಹಕಾರ ಸಂಘಗಳಿಗೆ ಕೆಮಿಕಲ್ಸ್, ಸ್ಪ್ರೆಯರ್ಸ್ ಮುಂತಾದುವು ಏನೇನು ಬೇಕೋ ಅವುಗಳನ್ನು ಕೊಟ್ಟು ಸಹಾಯ ಮಾಡಬೇಕೆಂದಿದೆ. ಅವರಿಗೆ ಎಷ್ಟೋ ರೂಪದಲ್ಲಿ ಸಹಾಯ ಮಾಡುತ್ತೇವೆ. ಔಷಧಕ್ಕೆ ಪ್ರತ್ಯೇಕವಾಗಿ ಸೊಸೈಟಿಗಳಿಗೆ ಕೊಡಬೇಕೆಂದು ವಿಧಾಯಕವಾಗಿಲ್ಲ.

**ಶ್ರೀ ಸಿದ್ದಯ್ಯ ಕಾಶಿಮಠ:** ಕೃಷಿ ಸಂಘಗಳ ಮೇಲೆ ಯಾವ ರೀತಿ ಮೇಲ್ವಿಚಾರಣೆ ಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ಪೈಲೆಟ್ ಪ್ರಾಜೆಕ್ಟುಗಳಲ್ಲಿ, ಪೈಲೆಟ್ ಆಫೀಸರೂ ಅಥವಾ ಕೊ–ಆಪರೇಟಿವ್ ಸೀನಿಯರ್ ಇನ್‌ಸ್ಪೆಕ್ಟರೂ ನೋಡುತ್ತಾರೆ. ನಾನ್–ಪೈಲೆಟ್ ಆಫೀಸರೂ ಪ್ರಾಜೆಕ್ಟಿನಲ್ಲಿ, ಎಕ್ಸ್‌ಟೆನ್‌ಷನ್ ಆಫೀಸರುಗಳ ಅಥವಾ ಆಯಾ ತಾಲ್ಲೂಕಿನ ಅಗ್ರಿಕಲ್ಚರ್ ಎಕ್ಸ್‌ಟೆನಷನ್ ಆಫೀಸರುಗಳು ವಿಚಾರಣೆ ಮಾಡುತ್ತಾರೆ. ಟೆಕ್ನಿಕಲ್ ಸಹಾಯ ಇಂಡಸ್ಟ್ರಿಯಲ್ ಎಕ್ಸ್‌ಪರ್ಟುಗಳು ಕೊಡುತ್ತಾರೆ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಸಹಕಾರ ಕೃಷಿ ಸಂಘಗಳು ಸರ್ಕಾರದ ನಿರೀಕ್ಷಣೆ ಮುಟ್ಟುವುದಕ್ಕೋಸ್ಕರ ಏನೇನು ಅನುಕೂಲಗಳನ್ನು ಕಲ್ಪಿಸಿಕೊಡಬೇಕು, ಮೇಲ್ವಿಚಾರಣೆ ಏನು ಮಾಡಬೇಕು ಅನ್ನುವುದಕ್ಕೆ ಏನು ವ್ಯವಸ್ಥೆ ಯೋಚನೆ ಮಾಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆಗಲೇ ಹೇಳಿದ್ದೇವೆ. ನಾವು ಕೊಡತಕ್ಕಂಥ ಫೈನಾನ್ಷಿಯಲ್ ಅಸಿಸ್ಟೆನ್ಸ್ ಅಲ್ಲದೆ, ಇಲಾಖೆಗಳ ಮುಖಾಂತರ ಕ್ಯಾಶ್ ಕ್ರೆಡಿಟ್ ಮುಂತಾದ ಸಹಾಯ ಪಡೆದುಕೊಳ್ಳುವ ಪದ್ಧತಿ ಇದೆ. ಡೈರಿ ಕೋ-ಆಪರೇಟಿವ್, ಪೌಲ್ಟ್ರಿ ಫಾರ್ಮಿಂಗ್ ಮುಂತಾದ ಪ್ರೊಗ್ರಾಂ ಇಟ್ಟುಕೊಳ್ಳಲು ಏನೇನು ಸಹಾಯ ಬೇಕೋ ಅದನ್ನು ಪಡೆದುಕೊಂಡು ಆರ್ಥಿಕ ಅಭಿವೃದ್ಧಿ ಮಾಡಿಕೊಳ್ಳಬೇಕು ಅನ್ನುವುದು ಸರ್ಕಾರದ ಇಚ್ಛೆ.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:** ಮೈಸೂರು ಜಿಲ್ಲೆಯ 1960 ರಿಂದಲೂ 300–400 ಎಕರೆ ಇಟ್ಟುಕೊಂಡಿರುವ ಸೊಸೈಟಿಗಳಿವೆ. 10–11 ಮೆಂಬರುಗಳು ಸೊಸೈಟಿಯಲ್ಲಿದ್ದಾರೆ. ಆ ಸೊಸೈಟಿಗಳಿಗೆ ಬೇಕಾದ ಸಹಾಯ ಮಾಡಿದ್ದೇವೆಂದು ಹೇಳಲಿಲ್ಲ. ಈಗ ಎಕ್ಸ್‌ರೇಟ್ ಬೇಸಿಸ್ ಮೇಲೆ ಬತ್ತವನ್ನು ತೆಗೆದುಕೊಳ್ಳಬೇಕೆಂದು ಸ್ಪೆಷಲ್ ಲೆವಿ ಮಾಡಿದ್ದೀರಿ. 10 ಜನ ಸೇರಿಕೊಂಡು ಸೊಸೈಟಿ ನಡೆಸತಕ್ಕಂಥ ಜನಗಳಿಂದ ಜಾಸ್ತಿ ಧಾನ್ಯ ಶೇಖರಿಸುವುದಕ್ಕೆ ಪ್ರತ್ಯೇಕ ಆರ್ಡರ್ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಎಲ್ಲರಿಗೂ ಒಂದೇ ಆರ್ಡರ್.

**ಶ್ರೀ ಬಿ.ಎಲ್. ಗೌಡ:** ಚಳ್ಳಕೆರೆ ಪೈಲೆಟ್ ಪ್ರಾಜೆಕ್ಟ್ ಸೊಸೈಟಿ ಎಷ್ಟು ಪ್ರಾರಂಭವಾಗಿವೆ? ಒಂದೊಂದು ಸೊಸೈಟಿಯಲ್ಲಿಯೂ ಎಷ್ಟೆಷ್ಟು ಸದಸ್ಯರಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಸದನದ ಮೇಜಿನ ಮೇಲೆ ಉದ್ದನೆಯ ಪಟ್ಟಿಯನ್ನು ಇಟ್ಟಿದ್ದೇನೆ. ಹೇಳಬೇಕಂದರೆ ಹೇಳುತ್ತೇನೆ.

**ಸಭಾಧ್ಯಕ್ಷರು:** ಅವರು ಒಟ್ಟು ಸಂಖ್ಯೆಯನ್ನು ಕೇಳುತ್ತಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಚಿತ್ರದುರ್ಗ ಜಿಲ್ಲೆಯಲ್ಲಿ ಒಟ್ಟು 6 ಇವೆ.

**ಶ್ರೀ ಬಿ.ಎಲ್. ಗೌಡ:** ಒಂದು ಪೈಲೆಟ್ ಪ್ರಾಜೆಕ್ಟ್ ಇದೆ. ಈ ಲಿಸ್ಟಿನಲ್ಲಿ ಕೊಟ್ಟಿಲ್ಲ ಏತಕ್ಕೋಸ್ಕರ ಕೊಟ್ಟಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ತಿಳಿದುಕೊಳ್ಳುತ್ತೇನೆ. ಸರಿಯಿಲ್ಲದ ಮಾಹಿತಿಯನ್ನು ಕೊಟ್ಟಿರಬಹುದು.

**ಸಭಾಧ್ಯಕ್ಷರು:** ನಾನು ಪ್ರಶ್ನೆಯನ್ನು ಮುಂದುವರೆಸುತ್ತೇನೆ.

# ಆಲೂಗಡ್ಡೆ ಬೀಜಗಳ ಮಾರಾಟ

**6ನೇ ಮಾರ್ಚ್ 1965**

**ಶ್ರೀ ಹೆಚ್.ಡಿ. ದೇವೇಗೌಡ (ಹೊಳೇನರಸೀಪುರ):**

A. 1962–63 ಮತ್ತು 1963–64 ರಲ್ಲಿ ಮೈಸೂರು ಸ್ಟೇಟ್ ಮಾರ್ಕೆಟಿಂಗ್ ಕೊ.ಆಪರೇಟಿವ್ ಸೊಸೈಟಿಯು ಆಲೂಗಡ್ಡೆ ಬೀಜಗಳನ್ನು ಮಾರಾಟ ಮಾಡಿದ್ದರಿಂದ ಬರಬೇಕಾದ ಲಾಭ ಅಥವಾ ನಷ್ಟದ ಮೊತ್ತ/ಹಣ.

B. ಯಾವುದೇ ನಷ್ಟವಿದ್ದಲ್ಲಿ, ಅದಕ್ಕೆ ಕಾರಣಗಳು, ನಷ್ಟಕ್ಕೆ ಹೊಣೆಗಾರರಾದವರ ಮೇಲೆ ತೆಗೆದು ಕೊಂಡ ಕ್ರಮ?

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ)**

A.

| ವರ್ಷ | ಲಾಭ | ನಷ್ಟ |
|---|---|---|
| 1962–63 | 19,400 | – |
| 1963–64 | – | 1,25,000 |

B. 1. ವಾಸ್ತವಿಕವಾಗಿ ಸೀಸನ್ ಮುಗಿದ ಮೇಲೆ ಆಲೂಗಡ್ಡೆ ಬೀಜಗಳು ಬಂದವು/ ಬಂದಿದ್ದು.

2. ಬೇಡಿಕೆಯಿಲ್ಲದ ಕಾರಣ ಮಾರುಕಟ್ಟೆ ದರಗಳು ಕಡಿಮೆ.

3. ರೆಡಿ–ಮಾರ್ಕೆಟ್ ಇಲ್ಲದಿರುವುದು, ಹೆಚ್ಚಿನ ಪ್ರಮಾಣದಲ್ಲಿ ಅವುಗಳನ್ನು ಕೊಡುವುದಕ್ಕಿಂತ ಪೂರೈಕೆದಾರರ ವಿರುದ್ಧ ಹೆಚ್ಚುವರಿ ಸಿವಿಲ್‌ಜಡ್ಜ್, ಸಿವಿಲ್ ಸ್ಟೇಷನ್, ಬೆಂಗಳೂರಿನಲ್ಲಿ ವ್ಯಾಜ್ಯವನ್ನು ಹೂಡಲಾಗಿದೆ.

**ಶ್ರೀ ಎಚ್.ಡಿ. ದೇವೇಗೌಡ:** 1963–64 ನೇಯ ಸಾಲಿನಲ್ಲಿ 1,25,000 ರೂಪಾಯಿ ನಷ್ಟ ಎಂದು ತಿಳಿಸಿದ್ದೀರಿ. ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಗೆ ಆಗಿರತಕ್ಕಂಥ ನಷ್ಟ ಮಾತ್ರ ಕಂಡುಬಂದಿದೆ. ಪ್ರೈಮರಿ ಮತ್ತು ತಾಲ್ಲೂಕು ಮಟ್ಟದಲ್ಲಿತರಕ್ಕಂಥ ಕೆಲವು ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಗಳಿಗೆ ಮತ್ತು ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಗೆ ಉಂಟಾಗಿರತಕ್ಕಂಥ ಒಟ್ಟು ನಷ್ಟ 8 ಲಕ್ಷ ರೂಪಾಯಿ ಎಂದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ನಿಮ್ಮ ಪ್ರಶ್ನೆಯಲ್ಲಿ ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಗೆ ಆದ ನಷ್ಟ, ಲಾಭ ಎಷ್ಟು ಎಂದು ಕೇಳಿದ್ದೀರಿ, ಅಷ್ಟು ಮಾತ್ರ ಕೊಟ್ಟಿದೆ ಪ್ರತ್ಯೇಕ ಪ್ರಶ್ನೆ ಕೇಳಿದರೆ ಉತ್ತರ ಕೊಡುತ್ತೇನೆ.

**ಶ್ರೀ ಹೆಚ್.ಡಿ. ದೇವೇಗೌಡ:** ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗೆ ಸೆಂಟ್ರಲ್ ಸ್ಟೇಜು ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯವರು ಆಲೂಗಡ್ಡೆ ಬೀಜಗಳನ್ನು ಸಪ್ಲೈ ಮಾಡಿರತಕ್ಕದ್ದು ಎನ್ನುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ವಿಚಾರದ ಬಗ್ಗೆ– ಇಲ್ಲಿ ಪ್ರಶ್ನೆ ಕೇಳಿರುವುದರಿಂದ ಅದರ ಬಗ್ಗೆ ಮಾತ್ರ ವಿವರಗಳನ್ನು ಕೊಡಲಾಗಿದೆ. ತಾಲ್ಲೂಕು ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯ ಬಗ್ಗೆ ಇಲ್ಲಿ ವಿವರಗಳಿಲ್ಲ.

**ಶ್ರೀ ಎನ್. ಹುಚ್ಚಮಾಸ್ತಿಗೌಡ:** ಆಲೂಗಡ್ಡೆ ಬೀಜಗಳನ್ನು ಕಾಲಕ್ಕೆ ಮುಂಚೆ ಒದಗಿಸುವುದಕ್ಕೆ ಸೊಸೈಟಿಗಳವರು ಪ್ರಯತ್ನ ಮಾಡಲಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವರ್ಷ ಎಂದರೆ 1964–65 ನೇ ಸಾಲಿನಲ್ಲಿ ಸಕಾಲದಲ್ಲಿ ಬೀಜಗಳನ್ನು ಒದಗಿಸಿದ್ದಾರೆ.

**ಶ್ರೀ ಹೆಚ್. ಆರ್. ಕೇಶವಮೂರ್ತಿ:** ಆಲೂಗಡ್ಡೆ ಬೀಜಗಳನ್ನು ವ್ಯಾಪಾರ ಮಾಡಲು ಕೆಲವು ಮುಖಂಡರುಗಳು ಸೊಸೈಟಿಗಳಲ್ಲಿ ಸೇರಿಕೊಂಡು ಬೀಜಗಳನ್ನು ತರಿಸಿ ಅದನ್ನು ಬ್ಲಾಕು ಮಾರ್ಕೆಟ್ಸ್‌ನಲ್ಲಿ ಮಾರಿಕೊಂಡು ಲಾಭ ಸಂಪಾದನೆ ಮಾಡಿಕೊಂಡಿರುವುದು ಸರಕಾರಕ್ಕೆ ದ್ರೋಹ ಮಾಡಿದಂತಾಗಲಿಲ್ಲವೇ ಮತ್ತು ಅದು ಸರಕಾರದ ಗಮನಕ್ಕೆ ಬಂದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** – ಸರಕಾರದ ಗಮನಕ್ಕೆ ಬಂದಿಲ್ಲ.

**ಶ್ರೀ ಹೆಚ್. ಆರ್. ಕೇಶವಮೂರ್ತಿ** – ಸರಕಾರದ ಗಮನಕ್ಕೆ ನಾವು ತಂದರೆ ಅಂತಹವರ ಮೇಲೆ ತಕ್ಕ ಕ್ರಮ ತೆಗೆದುಕೊಳ್ಳುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಖಂಡಿತ ತೆಗೆದುಕೊಳ್ಳುತ್ತೇವೆ.

**ಶ್ರೀ ಕೆ.ಲಕ್ಕಪ್ಪ** – ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯಲ್ಲಿ ಅಧ್ಯಕ್ಷರಾಗಿರುವವರು ಆಲೂಗಡ್ಡೆ ಬೀಜಗಳನ್ನು ತರಿಸಿಲಾಭದಾಯಕವಾಗಿ ಅದನ್ನು ಮಾರದೆ ಅಲ್ಲಿರುವ ಸದಸ್ಯರುಗಳೊಡನೆ ಹೆಚ್ಚು ಬೆಲೆಗೆ ಮಾಡಿ ದುರುಪಯೋಗ ಮಾಡುತ್ತಿದ್ದಾರೆ ಎಂದು ಸರಕಾರಕ್ಕೆ ದೂರುಗಳು ಬಂದಿದ್ದರೂ ಕೂಡ ಇಂತಹ ಅವ್ಯವಸ್ಥೆಗಳನ್ನು ಸರಕಾರದವರು ಇದುವರೆಗೂ ಸರಪಡಿಸದೇ ಇರಲು ಕಾರಣಗಳೇನು?

**ಶ್ರೀ ಕೊಂಡಜ್ಜಿ ಬಸಪ್ಪ** – ಹಾಗೇನಲ್ಲ. ಇದರಲ್ಲಿ ಅಂತಹ ನಷ್ಟವೇನೂ ಆಗಿಲ್ಲ. ಹೋದ ವರ್ಷ ಸ್ವಲ್ಪ ನಷ್ಟವಾಗಿದೆ. ಅದಕ್ಕೆ ಹಿಂದಿನ ಸಾಲಿನಲ್ಲಿ ಲಾಭ ಬಂದಿದೆ ಮತ್ತು ಈ ಸಾಲಿನಲ್ಲಿ ಎಂದರೆ 1964–65 ರಲ್ಲಿ ಮಾತ್ರ 1,25,000 ರೂಪಾಯಿಗಳಷ್ಟು ನಷ್ಟವಾಗಿದೆ ಎಂದು ಉತ್ತರದಲ್ಲೇ ಕೊಟ್ಟಿದೆ. ಇದಕ್ಕೆ ಕಾರಣ ಸಕಾಲದಲ್ಲಿ ರಂಗೂನು ಕಡೆಯಿಂದ ಬರಬೇಕಾದ ಆಲೂಗಡ್ಡೆ ಬೀಜಗಳು ರೈತರಿಗೆ ಇಲ್ಲಿ ತಲುಪಲಿಲ್ಲ. ಆದುದರಿಂದ ರೈತರು ಅದನ್ನು ಉಪಯೋಗಿಸದೆ ಹೋದುದುರಿಂದ ಅವು ಹಾಳಾಗಿ ಹೋದವು, ಆದ್ದರಿಂದ ಸ್ವಲ್ಪ ನಷ್ಟವಾಯಿತು.

**ಶ್ರೀ ಸಿ. ಸಿದ್ದಯ್ಯ ಕಾಶೀಮಠ** – ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯವರು ಈ ಆಲೂಗಡ್ಡೆ ಬೀಜಗಳನ್ನು ಯಾವ ಯಾವ ಊರುಗಳಿಂದ ಆಮದು ಮಾಡುತ್ತಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಬರ್ಮಾ ದೇಶದಲ್ಲಿರುವ ರಂಗೂನು ಕಡೆಯಿಂದ ಸ್ವಲ್ಪ ಭಾಗ ಬರುತ್ತದೆ ಮತ್ತು ಸಿಮ್ಲಾದ ಕಡೆಯಿಂದಲೂ ಸ್ವಲ್ಪ ಬರುತ್ತದೆ.

**ಶ್ರೀ ಕೆ. ಲಕ್ಕಪ್ಪ** – ಸೊಸೈಟಿಗಳವರು ಆಲೂಗಡ್ಡೆ, ಬೀಜಗಳನ್ನು ತರಿಸಿ ವ್ಯಾಪಾರ ಮಾಡುವಾಗ ಸುಮಾರು 8 ಲಕ್ಷದಷ್ಟು ಲಾಸ್‌ಆಗಿದೆ ಎನ್ನುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದರಲ್ಲಿ ಕೊಟ್ಟಿರುವ ಉತ್ತರವನ್ನು ತಾವು ನೋಡಿದರೆ ಎಷ್ಟು ಲಾಭವಾಗಿದೆ ಮತ್ತು ಎಷ್ಟು ನಷ್ಟವಾಗಿದೆ ಎನ್ನುವುದು ಗೊತ್ತಾಗುತ್ತದೆ. ಒಂದು ವರ್ಷ ಮಾತ್ರ ಸ್ವಲ್ಪ ನಷ್ಟವಾಗಿದೆ. ಈ ಸಾಲಿನಲ್ಲಿ ನಮಗೆ ಸುಮಾರು 25 ಸಾವಿರದಷ್ಟು ಲಾಭ ಬಂದಿದೆ.

**ಶ್ರೀ ಹೆಚ್. ಡಿ. ದೇವೇಗೌಡ** – ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯವರು ಆಲೂಗಡ್ಡೆ ಬೀಜಗಳನ್ನು ತರಿಸುತ್ತಿದ್ದರೂ ಅದನ್ನು ರೈತರಿಗೆ ಸರಿಯಾಗಿ ಹಂಚದೆ ಬ್ಲಾಕ್‌ಮಾರ್ಕೆಟ್‌ನಲ್ಲಿ ವ್ಯಾಪಾರ ಮಾಡುತ್ತಿದ್ದಾರೆ. ಇದನ್ನು ತಪ್ಪಿಸಿ ಸರಕಾರದವರು ಸುವ್ಯವಸ್ಥೆಯಿಂದ ಸಕಾಲದಲ್ಲಿ ಈ ಬೀಜಗಳನ್ನು ಹಂಚುವ ಕ್ರಮ ತೆಗೆದುಕೊಳ್ಳುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ :** ಈ ವರ್ಷ ನಾನೇ ವೈಯಕ್ತಿಕವಾಗಿ ಸಿಮ್ಲಾಕ್ಕೆ ಹೋಗುತ್ತೇನೆ. ಕೋ–ಆಪರೇಟಿವ್ ಮಾರ್ಕೆಟಿಂಗ್ ಸೊಸೈಟಿಸ್ ಮತ್ತು ಹಿಮಾಚಲ ಪ್ರದೇಶದ ಅಧಿಕಾರಿಗಳನ್ನು ಭೇಟಿಮಾಡುತ್ತೇನೆ. (ಅಲ್ಲಿ ಯಾರು ವಿವಿಧ ಉತ್ತಮವಾದ

ಬೀಜಗಳನ್ನು ಪೂರೈಕೆ ಮಾಡುತ್ತ ಲಾಭಗಳಿಸುತ್ತಿದ್ದರೋ ಅಂತಹ) ಇನ್ನು ಮುಂದೆ ಸ್ಟೇಟ್ ಕೋ-ಆಪರೇಟಿವ್ ಮಾರ್ಕೆಟಿಂಗ್ ಸೊಸೈಟಿ ಅವರೇ ಬೀಜಗಳನ್ನು ಪೂರೈಸುತ್ತಾರೆ ಮತ್ತು ಇದಕ್ಕೆ ಸಂಬಂಧಿಸಿದಂತೆ ವ್ಯವಸ್ಥೆ ಮಾಡಲಾಗಿದೆ.

**ಶ್ರೀ ಹೆಚ್. ಡಿ. ದೇವೇಗೌಡ:** ಮೈಸೂರು ಸಂಸ್ಥಾನದಲ್ಲಿ ಒಟ್ಟು ಎಷ್ಟು ಆಲೂಗಡ್ಡೆ ಬೀಜಗಳನ್ನು ತರಿಸಿದ್ದಾರೆ ಎನ್ನುವ ಅಂಕಿ ಅಂಶಗಳನ್ನು ಸರಿಯಾಗಿಟ್ಟಿದ್ದಾರೆಯೇ? ಹಾಗಿದ್ದರೆ ಈ ಬೀಜವನ್ನು 80 ರೂಪಾಯಿಗಳಂತೆ ಮಾರಬೇಕೆಂದು ಇದ್ದರೂ ಅದನ್ನು 180 ರೂಪಾಯಿಗಳ ಬೆಲೆಯಲ್ಲಿ ಮಾರಿರುವ ನಿದರ್ಶನಗಳು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎಸ್. ಶಿವಪ್ಪ:** ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಯಲ್ಲಿ ಬಿಗ್ ರಾಕೆಟ್ ನಡೆಯುತ್ತಿರುವುದು ವಾಸ್ತವವಲ್ಲದೇ ಮತ್ತು ಇದರ ಬಗ್ಗೆ ತನಿಖೆ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಂತಹ ಪ್ರಸಂಗವೇನೂ ಕಂಡುಬಂದಿಲ್ಲ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಭತ್ತಗಳನ್ನು ಒದಗಿಸುವ ಕಾಲವಾವುದು ಎನ್ನುವುದನ್ನು ನಿರ್ದಿಷ್ಟಮಾಡಿ ಕಾಲಕ್ಕೆ ಸರಿಯಾಗಿ ಒದಗಿಸುತ್ತಿದ್ದಾರೆಯೇ ಎನ್ನುವುದನ್ನು ಸರಕಾರದವರು ಗಮನಿಸಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಕಾಲಕ್ಕೆ ಸರಿಯಾಗಿ ಬೀಜಗಳನ್ನು ಒದಗಿಸಬೇಕೆಂದು ತಕ್ಕ ಕಾರ್ಯಕ್ರಮವನ್ನು ತೆಗೆದುಕೊಳ್ಳುತ್ತಿದ್ದೇವೆ. ಆದರೆ ಇದರಲ್ಲಿ ಹೇಳಿರುವಂತೆ ಆ ಸಾರಿ ಒಂದು 15 ದಿನಗಳು ಲೇಟಾಗಿ ಬೀಜಗಳು ಬಂದುದರಿಂದ ಅಷ್ಟು ಹೊತ್ತಿಗೆ ರೈತರುಗಳು ಬೇರೆ ಎಲ್ಲಿಂದಲೋ ಬೀಜಗಳನ್ನು ತರಿಸಿ ಬಿತ್ತನೆಮಾಡಿದುದರಿಂದ ನಾವು ತರಿಸಿದ ಬೀಜಗಳು ಹಾಳಾಗಲು ಅವಕಾಶವಾಯಿತು ಮತ್ತು ಸ್ವಲ್ಪ ನಷ್ಟವಾಯಿತು.

**ಶ್ರೀ ಎಸ್. ಶಿವಪ್ಪ:** ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಯವರು ಖರೀದಿಸಿದ್ದನ್ನು ಕೆಡದಂತೆ ಶೇಖರಿಸಲು ಕೋಲ್ಡ್ ಸ್ಟೋರೇಜ್‌ನ ತರಹದ ಯಂತ್ರೋಪಕರಣಗಳಿದೆಯೇ.

**ಶ್ರೀ ಕೊಂಡಜ್ಜಿ ಬಸಪ್ಪ :** ಕೋಲ್ಡ್ ಸ್ಟೋರೇಜು ನಮ್ಮಲ್ಲಿಲ್ಲ. ಈಚೆಗೆ ದೆಹಲಿಯಲ್ಲಿರುವ ಸೆಂಟ್ರಲ್ ರೀಸರ್ಚ್ ಇನ್ಸ್‌ಟಿಟ್ಯೂಟಿನ ಕೋಲ್ಡ್ ಸ್ಟೋರೇಜು ತಜ್ಞರು ಈ ದೇಶಕ್ಕೆ ಬಂದು ಎಲ್ಲೆಲ್ಲಿ ಕೋಲ್ಡ್ ಸ್ಟೋರೇಜುಗಳನ್ನು ಮಾಡಬೇಕು ಎನ್ನುವುದರ ಬಗ್ಗೆ

ಒಂದು ರಿಪೋರ್ಟನ್ನು ಸರಕಾರಕ್ಕೆ ಕೊಟ್ಟಿದ್ದಾರೆ. ಅದನ್ನು ಪರಿಶೀಲನೆ ಮಾಡುತ್ತಲಿದ್ದೇವೆ.

**ಶ್ರೀ ಎಸ್. ಶಿವಪ್ಪ:** ಈ ರೀತಿಯ ಯಂತ್ರೋಪಕರಣವಿಲ್ಲದೆ, ಸ್ಟೇಟ್ ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಯವರು ಕೆಟ್ಟು ಹೋಗುವಂತಹನ್ನು ಖರೀದಿಸಿ ಏನು ಮಾಡುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ಕೋಲ್ಡ್ ಸ್ಟೋರೇಜು ಇಲ್ಲ. ಗೋಡೌನುಗಳಿವೆ. ಅವನ್ನು ತಾಲ್ಲೂಕು ಮಾರ್ಕೆಟಿಂಗ್ ಕೋ–ಆಪರೇಟಿವ್ ಸೊಸೈಟಿಗಳು ಉಪಯೋಗ ಮಾಡಿಕೊಳ್ಳತ್ತಲಿದ್ದಾರೆ.

**ಶ್ರೀ ಹೆಚ್. ಡಿ. ದೇವೇಗೌಡ:** ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗಳ ಮೂಲಕ ಹಂಚಿಕೆಯಾಗುತ್ತಿರುವ ಬೀಜಗಳನ್ನು ತಪ್ಪಿಸಬೇಕಾದರೆ ಸಂಸ್ಥಾನದಲ್ಲಿರುವ ಎಲ್ಲ ಭಾಗಗಳಿಗೂ ಎಷ್ಟು ಬಿತ್ತನೆಗಳು ಬೇಕಾಗಿವೆ ಎನ್ನುವುದನ್ನು ಅಲ್ಲಲ್ಲಿರುವ ಡಿಸ್ಟ್ರಿಕ್ಟ್ ಅಗ್ರಿಕಲ್‌ಚರ್ ಆಫೀಸರುಗಳಿಂದ ರಿಪೋರ್ಟನ್ನು ತರಿಸಿಕೊಂಡು ಸೊಸೈಟಿಗಳಿಗೆ ಎಷ್ಟು ಬೇಕೋ ಅಷ್ಟನ್ನೂ ಹಂಚುವ ಏರ್ಪಾಡು ಮಾಡುತ್ತಾರೆಯೇ? ಇದರ ಜೊತೆಗೆ ಸಹಕಾರ ಸಂಘಗಳಿಗಿಂತ ಸಹಕಾರ ಇಲಾಖೆಯ ಡೈರಕ್ಟರುಗಳು, ಆಗ್ರಿಕಲ್ಚರು ಡೈರೆಕ್ಟರು ಇವುಗಳಲ್ಲಿ ಸದಸ್ಯರಾಗಿ ನೇಮಕಮಾಡಿ ಇವುಗಳಲ್ಲಿ ಏನು ಲೋಪದೋಷಗಳಿವೆ ಎನ್ನುವುದನ್ನು ನೋಡಿಕೊಂಡು ಮುಂಜಾಗರೂಕತೆಯ ಕಾರ್ಯಕ್ರಮವನ್ನು ತೆಗೆದುಕೊಳ್ಳುವುದು ಒಳ್ಳೆಯದಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವ ಯಾವ ಕಾಲಕ್ಕೆ ಎಷ್ಟು ಬಿತ್ತನೆಗಳು ಬೇಕು ಎನ್ನುವುದರ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ವರದಿ ಕಳುಹಿಸಿದ ಮೇಲೆ ಅದಕ್ಕೆ ತಕ್ಕ ಇನ್‌ಸ್ಟ್ರಕ್ಷನ್ನುಗಳನ್ನು ಕೊಟ್ಟು ತಕ್ಕ ಕಾರ್ಯಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ.

# ಸಹಕಾರ ಸಕ್ಕರೆ ಕಾರ್ಖಾನೆಯನ್ನು ಬೇರ್ಪಡಿಸುವ ಬಗ್ಗೆ

18ನೇ ಡಿಸೆಂಬರ್ 1963

**ಶ್ರೀ ಅಲ್ಲಂ ಕರಿಬಸಪ್ಪ (ಕುರುಗೋಡು):-**

A. ಬಳ್ಳಾರಿ ಕೇಂದ್ರ ಸಹಕಾರ ಸ್ಟೋರ್ಸ್ ಲಿಮಿಟೆಡ್‌ನಿಂದ ಕಂಪ್ಲಿ ಕೋ-ಆಪರೇಟಿವ್ (ಸಹಕಾರ) ಸಕ್ಕರೆ ಕಾರ್ಖಾನೆಯನ್ನು 2 ವರ್ಷಗಳ ಹಿಂದೆ ನಡೆದ ತನ್ನ ಸರ್ವಸದಸ್ಯರ ಸಭೆಯಲ್ಲಿ ತೀರ್ಮಾನವನ್ನು ತೆಗೆದುಕೊಂಡು ಅಂಗಿಕರಿಸಿದ್ದು ವಾಸ್ತವವೇ?

B. ಹೌದು ಎಂದಲ್ಲಿ, ಸರ್ಕಾರವು ಇದುವರೆಗೂ ಹೇಳಿದ ತೀರ್ಮಾನವನ್ನು ಏಕೆ ಕಾರ್ಯಗತಗೊಳಿಸಿಲ್ಲ?

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

A. ಹೌದು 31.03.61 ರಲ್ಲಿ

B. ಕಾರಣಗಳು ಕೆಳಗಿನವಂತಿವೆ:-

1. ಎರಡು ಕೋ-ಆಪರೇಟಿವ್‌ನ ಸದಸ್ಯತ್ವ ಒಂದೆ ತರಹ ಇದೆ.

2. ಬಳ್ಳಾರಿ ಕೋ-ಆಪರೇಟಿವ್ ಸೆಂಟ್ರಲ್ ಸ್ಟೋರ್ಸ್ ಲಿಮಿಟೆಡ್‌ನ ಹೆಸರಿನಲ್ಲಿ ಇಂಡಸ್ಟ್ರೀಯಲ್ ಪರವಾನಗಿ, ಕರಾರುಗಳು, ಯಂತ್ರಗಳ ಪೂರೈಕೆ ಮತ್ತು ಹಣಕಾಸಿನ ಸಹಾಯ/ನೆರವನ್ನು ಕಂಪ್ಲಿ ಕೋ-ಆಪರೇಟಿವ್ ಸಕ್ಕರೆ ಕಾರ್ಖಾನೆಗೆ ನೀಡಲಾಗುತ್ತಿದೆ;

3. ಪ್ರಸ್ತಾಪಿಸಿರುವ ಬೇರ್ಪಡಿಸುವಿಕೆಗೆ ಗ್ಯಾರಂಟರ್ಸ್ ಮತ್ತು ಕ್ರೆಡಿಟರ್ ಅಂದರೆ ಐ.ಎಫ್.ಸಿ, ಕೇಂದ್ರ ಸರ್ಕಾರ, ಇತ್ಯಾದಿಗಳಿಂದ ಸಮ್ಮತಿಯನ್ನು ಪಡೆಯಬೇಕಾಗಿದೆ.

4. ಆಸ್ತಿ ಮತ್ತು ಹೊಣೆಗಾರಿಕೆ ಇತ್ಯಾದಿಗಳನ್ನು ವಿಭಜಿಸಲು, ವಿವರವಾದ ಸ್ಕೀಮ್‌ನ್ನು ಮಾಡಬೇಕಾಗಿರುವುದರಿಂದ ಸಮಯದ ಅವಶ್ಯಕತೆ ಇದೆ.

**ಶ್ರೀ ಅಲ್ಲಂ ಕರಿಬಸಪ್ಪ:** ಸರ್, ಬಳ್ಳಾರಿ ಕೇಂದ್ರ ಸಹಕಾರಿ ಸ್ಟೋರ್ಸ್‌ನಿಂದ ಕಂಪ್ಲಿ ಕೋ-ಆಪರೇಟಿವ್ ಶುಗರ್ ಫ್ಯಾಕ್ಟರಿಯನ್ನು ಬೇರ್ಪಡಿಸುವಲ್ಲಿ ಸರ್ಕಾರದ ಕಡೆಯಿಂದ ಯಾಕೆ ವಿಳಂಬವಾಗುತ್ತಿದೆ ಮತ್ತು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್, ಸೊಸೈಟಿಯ ಮುಲ್ಟಿ ಯೂನಿಟ್ ಕೋ–ಆಪರೇಟಿವ್ ಸೊಸೈಟಿಸ್ ಕಾಯ್ದೆ ಅಡಿಯಲ್ಲಿ ಬರುತ್ತದೆ ಮತ್ತು ಆಂಧ್ರದ ಕೆಲವು ಭಾಗಗಳು ಆ ಕಾಯ್ದೆ ಅಡಿಯಲ್ಲಿ ಬರುತ್ತವೆ ಮತ್ತು ಕೇಂದ್ರ ಸೆಂಟ್ರಲ್ ರಿಜಿಸ್ಟ್ರಾರ್‌ರವರನ್ನು ನೇಮಕ ಮಾಡಲಾಗಿದ್ದು, ಸೊಸೈಟಿಯು ಬೇರ್ಪಟ್ಟ ಪ್ರತಿಯೊಂದು ಸಂಸ್ಥೆಯ ಆಸ್ತಿ ಮತ್ತು ಜವಾಬ್ದಾರಿ (ಹೊಣೆಗಾರಿಕೆ) ಗಳನ್ನು ನಿಗದಿಪಡಿಸುವ ಸ್ಕೀಮ್‌ವೊಂದನ್ನು ತಯಾರು ಮಾಡಬೇಕಾಗಿದೆ. ಅವರು ಪ್ರತಿಯೊಂದು ಸಂಸ್ಥೆಯ ಕಾರ್ಯಾಚರಣೆಯನ್ನು ಸ್ಥಳವನ್ನು ಕೊಡಲೇಬೇಕು ಮತ್ತು ಕೇಂದ್ರ ಕೋ–ಆಪರೇಟಿವ್ ಸ್ಟೋರ್ಸ್ ಬಳ್ಳಾರಿಯ ಶೇರ್–ಹೊಲ್ಡರ್ಸ್ ಮುಂದುವರಿಯುವುದು/ಸೇರಿಕೊಳ್ಳುವುದು/ ಎರಡರಲ್ಲಿ ಒಂದಕ್ಕೆ ಸೇರಿಕೊಳ್ಳುವ ಸಾಧ್ಯತೆ ಇದೆಯೇ ಎಂಬುದನ್ನು ತಿಳಿಸಬೇಕು. ಈ ಎಲ್ಲಾ ಸೌಜನ್ಯಗಳನ್ನು ವೀಕ್ಷಿಸಬೇಕು. ತಿಳಿಸಿರುವಂಥ ಕಾಯ್ದೆಯಲ್ಲಿ ಸ್ಟೋರ್ಸ್‌ನವರು ಎಲ್ಲವನ್ನು ಮಾಡಲಿಕ್ಕೆ ಆಗುವುದಿಲ್ಲ. ಯಾವುದನ್ನು ತಿಳಿದುಕೊಳ್ಳದೇ, ಬಹುಶಃ ಬೋರ್ಡ್ ಆಫ್ ಡೈರಕ್ಟರ್‌ರವರು ಸುಮ್ಮನೆ ಧೃಡ ನಿರ್ಧಾರ ತೆಗೆದುಕೊಂಡು, ಅದನ್ನು ಕಳುಹಿಸಿ  ಕೊಟ್ಟಿದ್ದಾರೆ. ಇದನ್ನು ಸಾಮಾನ್ಯ ಸಭೆಗೆ (ಬಾಡಿಗೆ) ಕಳುಹಿಸಿಕೊಟ್ಟಿದ್ದು, ಅವರು ಯಾವುದೇ ಸ್ಕೀಮ್‌ನ್ನು ಫಾರ್ಮ್ಯೂಲೇಟ್ ಮಾಡಿಲ್ಲ. ಇತ್ತೀಚಿಗೆ ಬೋರ್ಡ್ ಮೀಟಿಂಗ್‌ನಲ್ಲಿ ಕೋ–ಆಪರೇಟಿವ್ ಸೊಸೈಟಿಸ್‌ನ ರಿಜಿಸ್ಟ್ರಾರ್‌ರವನ್ನು ಸ್ಕೀಮ್ ತಯಾರಿಸಲು ಕೇಳಿದ್ದಾರೆ ಮತ್ತು ಕೇಂದ್ರ ಸರ್ಕಾರದ ಅನುಮತಿಯ/ಒಪ್ಪಿಗೆಯ ನಂತರ ಅದಕ್ಕೆ ಒಪ್ಪಿಗೆ ನೀಡುವಂಥ ಸಾಮಾನ್ಯ ಸಭೆಯ ಮುಂದೆ ಬರುತ್ತದೆ. ಅವರು ಒಪ್ಪದಿದ್ದಲ್ಲಿ ಸುಪ್ರೀಂ ಕೋರ್ಟ್‌ನಿಂದ ನಾಮಿನೇಟೆಡ್(ನಾಮ ನಿರ್ದೇಶನ ಹೊಂದಿರುವ) ಆಗಿರುವ ಹೈಕೋರ್ಟ್ ನ್ಯಾಯಾಧೀಶರಿಗೆ ರೆಫರ್ ಮಾಡುತ್ತಾರೆ. ಈ ಪ್ರಕ್ರಿಯೆಯನ್ನು ಅಳವಡಿಸಿಕೊಳ್ಳದಿರುವುದರಿಂದ  ವಿಳಂಬವಾಗಿದೆ ಮತ್ತು ವಿಳಂಬವು ಸರ್ಕಾರದಿಂದ ಆಗಿಲ್ಲ.

**ಶ್ರೀ ಅಲ್ಲಂ ಕರಿಬಸಪ್ಪ:** ಪ್ರಕ್ರಿಯೆಯ ಬಗ್ಗೆ ನಾನು ಮಂತ್ರಿಯವರೊಂದಿಗೆ ಸಂಪೂರ್ಣ ಒಪ್ಪುತ್ತೇನೆ. ರೆಸ್ಯೂಲೂಷನ್ ಪಾಸ್ ಮಾಡಿರುವುದು 31.03.1961 ರಲ್ಲಿ ಕೋ–ಆಪರೇಟಿವ್ ಡಿಪಾರ್ಟ್‌ಮೆಂಟ್ ಅಥವಾ ಸಂಬಂಧಿಸಿದ ಮಂತ್ರಿಯವರು ರೆಸ್ಯೂಲುಷನ್ ನಂತರದಲ್ಲಿ ಕ್ರಮ ತೆಗೆದುಕೊಂಡಿದ್ದಾರೆಯೇ ಎಂದು ನಾನು ತಿಳಿದುಕೊಳ್ಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್, ಹೇಳಿರುವಂಥ ಸ್ಕೀಮ್‌ನ್ನು ರಚಿಸಿದೆ. ಈ ವಿಷಯವನ್ನು ಸರ್ವಸದಸ್ಯರ ಸಭೆಯಲ್ಲಿ ತೆಗೆದುಕೊಳ್ಳಲಾಗಿದೆ. ಅವರು ಸೊಸೈಟಿಯನ್ನು ಬೇರ್ಪಡಿಸಲು ಕೇಳಲು ರೆಸಲ್ಯೂಷನ್ ಪಾಸು ಮಾಡಲಾಗಿದೆ. ಅವರು ಪ್ರತಿಯೊಂದು ಸೊಸೈಟಿಯ ಆಸ್ತಿ ಮತ್ತು ಹೊಣೆಗಾರಿಕೆಗಳು, ಮತ್ತು ಸೊಸೈಟಿಯ ಯಾವುದೇ ಮೆಂಬರ್ ಮುಂದುವರಿಯುವರೋ ಇಲ್ಲ ಮತ್ತು ಇತರೇ ವಿಷಯಗಳನ್ನು ನಿಗದಿ ಪಡಿಸುವ ಸ್ಕೀಮ್‌ನ್ನು ರಚಿಸಬೇಕು. ಡ್ರಾಫ್ಟ್ ಸ್ಕೀಮ್‌ನ್ನು ಸದಸ್ಯರಿಗೆ ಮತ್ತು ಕ್ರೆಡಿಟರ್ಸ್‌ಗಳಿಗೆ ಕಳುಹಿಸಬೇಕು. ಮೇಲೆ ತಿಳಿಸಿದ ಸ್ಕೀಮ್‌ನ್ನು ವಿತರಿಸದೆ, ನಾವು ಯಾವುದೇ ಹೆಜ್ಜೆ ಇಟ್ಟರೂ ಕ್ರಮ ಕೈಗೊಂಡರು ಅದು ಅಕ್ರಮವಾಗುವುದು. ಸದಸ್ಯರ ಮತ್ತು ಕ್ರೆಡಿಟರ್ಸ್‌ನ ಇಚ್ಛೆಯನ್ನು ತಿಳಿದುಕೊಳ್ಳದೇ ಏನನ್ನು ಮಾಡಬೇಡಿ ಎಂದು ಕಾನೂನು ವಿಭಾಗದವರ ಸಲಹೆಯನ್ನು ನೀಡಿದ್ದಾರೆ. ಅಲ್ಲಿ ರಾಜ್ಯಸರ್ಕಾರ ಮತ್ತು ಇಂಡಸ್ಟ್ರೀಯಲ್ ಫೈನಾನ್ಸ್ ಕಾರ್ಪೋರೇಷನ್‌ರವರಿಬ್ಬರೂ ಕ್ರೆಡಿಟರ್‌ಗಳಾಗಿದ್ದಾರೆ. ರಾಜ್ಯಸರ್ಕಾರದವರಿಂದ ಯಾವುದೇ ಆಕ್ಷೇಪಣೆ ಇಲ್ಲ ಮತ್ತು ಇದು ರಾಜ್ಯಸರ್ಕಾರದ ಮುಂದುವರಿಸಿದ್ದು ಇದನ್ನು ಮಾಡಬೇಕು.

**ಶ್ರೀ ಅಲ್ಲಂ ಕರಿಬಸಪ್ಪ:** ಸಂಬಂಧಿಸಿದ ಡಿಪಾರ್ಟ್‌ಮೆಂಟ್/ಮಂತ್ರಿಯವರು ತಕ್ಷಣ ಕ್ರಮ ತೆಗೆದುಕೊಂಡಿದ್ದಾರೆಯೇ ಎಂಬುದನ್ನು ನಾನು ತಿಳಿದುಕೊಳ್ಳುವ ಇಚ್ಛೆಯಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಸದಸ್ಯರಿಗೆ ಭರವಸೆ ಕೊಡುವುದೇನೆಂದರೆ, ನಾವು ಕೋ–ಆಪರೇಟಿವ್ ಸೊಸೈಟಿಸ್‌ನ ರಿಜಿಸ್ಟ್ರಾರ್‌ರವರನ್ನು ಡ್ರಾಫ್ಟ್ ಸ್ಕೀಮ್‌ನ್ನು ರಚಿಸಲು ಕೇಳಿದ್ದು, ಅದನ್ನು ಶೀಘ್ರವಾಗಿ ಸ್ಪೀಕರ್ಸ್‌ನವರಿಗೆ ಕಳುಹಿಸಿಕೊಡುತ್ತೇವೆ.

**ಶ್ರೀ ಟಿ.ಜಿ. ಸತ್ಯನಾರಾಯಣ** – ಬಳ್ಳಾರಿ ಕೋ–ಆಪರೇಟಿವ್ ಸೊಸೈಟಿ ನಮ್ಮ ಸ್ಟೇಟ್ ಬಾರ್ಡರಿನಲ್ಲಿದ್ದು ಅದಕ್ಕೆ ಅದೋನಿ, ಆಲೂರು, ರಾಯದುರ್ಗ ಈ ಆಂಧ್ರ ಪ್ರದೇಶದ ಜನರು ಇದರಲ್ಲಿ ಷೇರ್‌ದಾರರಾಗಿರುವುದರಿಂದ ಹೀಗೆ ಲೇಟಾಯಿತೆಂದು ಭಾವಿಸಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಸರ್ಕಾರದವರು ಅವರನ್ನೂ ಕೂಡ ಕನ್‌ಸಲ್ಟ್ ಮಾಡಲೇಬೇಕು ಇಲ್ಲದಿದ್ದರೆ ತಪ್ಪಾಗುತ್ತದೆ. ನೀವು ಈ ಬದಲಾವಣೆಯಿಂದ ಸ್ಕೀಮಿಗೆ ಒಪ್ಪುತ್ತೀರಾ ಅಥವಾ ಇಲ್ಲವೇ ಎಂಬುದನ್ನು ತಿಳಿದುಕೊಳ್ಳಲೇಬೇಕು. ಬದಲಾವಣೆಯಾದ ಸ್ಕೀಮನ್ನು ಜನರಲ್ ಬಾಡಿ ಮುಂದೆ ಇಡಬೇಕು.

**ಶ್ರೀ ಅಲ್ಲಂ ಕರಿಬಸಪ್ಪ:** ಮಂತ್ರಿಯವರು ತಕ್ಷಣವೇ ಕ್ರಮ ಕೈಗೊಂಡಿರುವರೆಂದು ನನಗೆ ಭರವಸೆ ನೀಡಿದಲ್ಲಿ ನಾನು ಪ್ರಶಂಶಿಸುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್, ನಾವು ಈಗಾಗಲೇ ಸ್ಕೀಮ್ ತಯಾರಿಸಲು ರಿಜಿಸ್ಟ್ರಾರ್‌ರವರಿಗೆ ಒಪ್ಪಿಸಿರುವ ವಿಷಯವು ಮಾನ್ಯ ಸದಸ್ಯರಿಗೆ ತಿಳಿದಿದೆ.

**ಶ್ರೀ ಸಂಜೀವನಾಥ ಐತಾಳ:** ಕಂಪ್ಲಿ ಸಕ್ಕರೆ ಕಾರ್ಖಾನೆಯಲ್ಲಿ ಎಲ್ಲಿ ಸರಿಯಿಲ್ಲ ಎನ್ನುವುದು ವಾಸ್ತವದ ವಿಷಯವಲ್ಲವೇ.

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ವಿಷಯವಲ್ಲ/ ವಾಸ್ತವವಲ್ಲ, ಸರ್,

**ಸಭಾಧ್ಯಕ್ಷರು:** ಎಲ್ಲವೂ ಸರಿಯಲ್ಲ ಎನ್ನುವುದರ ಅರ್ಥವೇನು?

**ಶ್ರೀ ಸಂಜೀವನಾಥ ಐತಾಳ:** ಕೆಲಸಗಾರರು ಮತ್ತು ಶೇರು-ಹೊಲ್ಡರ್ಸ್‌ರವರು ಸರಿಯಾಗಿ ಜೊತೆಯಾಗಿ ಹೋಗುತ್ತಿಲ್ಲ.

**ಶ್ರೀ ಗೋಪಾಲರಾವ್:** ಕಂಪ್ಲಿ ಷುಗರ್ ಫ್ಯಾಕ್ಟರಿಯಲ್ಲಿ ಮೈಸೂರು ರಾಜ್ಯದವರಲ್ಲದೆ ಬೇರೆ ರಾಜ್ಯದವರೂ ಷೇರ್ ಹೋಲ್ಡರುಗಳಾಗಬಹುದೇ?

**ಸಭಾಧ್ಯಕ್ಷರು:** ಇದಕ್ಕೆ ಒಪ್ಪಿಗೆ ಕೊಡುವ ಬಿಲ್ಲು ಇದೆ ಎಂದು ಮಾನ್ಯ ಮಂತ್ರಿಯವರು ತಿಳಿಸಿದರು ಮತ್ತು ರಿಜಿಸ್ಟ್ರಾರ್‌ರವರು ಕೇಂದ್ರ ಸರ್ಕಾರದ ರಿಜಿಸ್ಟ್ರಾರ್ ಆಗಿದ್ದಾರೆ.

# ಗ್ರಾಮ ಪಂಚಾಯ್ತಿಗಳನ್ನು ರಚಿಸದಿರುವ ಬಗ್ಗೆ

**14ನೇ ಸೆಪ್ಟೆಂಬರ್ 1963**

**ಶ್ರೀಮತಿ ಎಲ್ಲವ್ವ ಸಾಂಬ್ರಾಣಿ:**

A. ರಾಣೆಬೆನ್ನೂರು ತಾಲ್ಲೂಕಿನ ಗಂಗಾಜಲ ತಾಂಡ, ಹುಣಸಿಕಟ್ಟಿ ತಾಂಡ, ಬಸಲೀಕಟ್ಟಿ ತಾಂಡ ಮತ್ತು ಸಿದ್ದಾಪುರಗಳು ಕಂದಾಯಗ್ರಾಮಗಳಾಗಿದ್ದರೂ, ಗ್ರಾಮ ಪಂಚಾಯ್ತಿಗಳನ್ನು ರಚಿಸದಿರುವುದಕ್ಕೆ ಕಾರಣಗಳು.

B. ಗ್ರಾಮ ಪಂಚಾಯ್ತಿಗಳನ್ನು ರಚಿಸದಿರುವುದರಿಂದ ಸ್ಥಳೀಯ ಅಭಿವೃದ್ಧಿ ಕಾರ್ಯಗಳಿಗೆ ತೊಂದರೆಯಾಗಿರುವುದು ಅವರ ಗಮನಕ್ಕೆ ಬಂದಿರುವುದೇ?

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

ಅ. ಕಾರಣಗಳು ಕೆಳಗಿನಂತಿವೆ:

1. ಹುಣಸೀ ಕಟ್ಟಿ ಗ್ರಾಮ (ಹುಣಸಿಕಟ್ಟಿ ತಾಂಡವು ಒಳಗೊಂಡಿವೆ) ವು ಕಾಮದೂದ್ ಪಂಚಾಯ್ತಿಯೊಂದಿಗೆ ಸೇರಿಕೊಂಡಿದೆ.

2. ಸಿದ್ದಾಪುರ ಗ್ರಾಮವು ಬೇಚರಾಕ್ ಗ್ರಾಮವಾಗಿದೆ.

3. ಬಸಲಿಕಟ್ಟಿ ಮತ್ತು ಗಂಗಾಜಲ ತಾಂಡಗಳು, ರಾಣೆಬೆನ್ನೂರಿನ ಭಾಗವಾಗಿದೆ ಹಾಗೂ ಅವುಗಳು ಸ್ವತಂತ್ರ ಗ್ರಾಮಗಳಾಗಿಲ್ಲ.

B. ಇಲ್ಲ:

**ಶ್ರೀಮತಿ ಎಲ್ಲವ್ವ ಸಾಂಬ್ರಾಣಿ:** ಈ ನಾಲ್ಕು ಗ್ರಾಮಗಳಲ್ಲಿ ಒಟ್ಟು ಜನಸಂಖ್ಯೆ ಎಷ್ಟಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಸಮಾಚಾರ ನನ್ನ ಪತ್ತಿರ ಇಲ್ಲ.

**ಶ್ರೀಮತಿ ಸುಶೀಲಾ ಬಾಯಿ ಹೀರಾಚಂದ್‌ಷಾ –** ಈ ನಾಲ್ಕು ಗ್ರಾಮಗಳಲ್ಲಿ ಮೂರು ಗ್ರಾಮಗಳಲ್ಲಿ ಸಾಕಾದಷ್ಟು ಜನಸಂಖ್ಯೆ ಇದ್ದರೂ ಆ ಗ್ರಾಮಗಳ ಜನಸಂಖ್ಯೆಯನ್ನು ಏಕೆ ಒದಗಿಸುತ್ತಿಲ್ಲ ಮತ್ತು ಅಲ್ಲಿ ಗ್ರಾಮ ಪಂಚಾಯ್ತಿ ರಚಿಸದೇ ಇರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಉತ್ತರದಲ್ಲೇ ಹೇಳಿದೆ. ಸಿದ್ದಾಪುರ ಒಂದು ಬೇಚರಾಕ್ ಗ್ರಾಮವಾಗಿದೆ: ಅಲ್ಲಿ ಜನಸಂಖ್ಯೆ ಇಲ್ಲ. ಹುಣಶಿಕಟ್ಟೆ ಗ್ರಾಮವನ್ನು ಕಾಮದೂದ್ ಪಂಚಾಯ್ತಿಯಲ್ಲಿ ಸೇರಿಸಲಾಗಿದೆ. ಬಸಲಿಕಟ್ಟೆ ಮತ್ತು ಗಂಗಾಜಲ ತಾಂಡಗಳು, ರಾಣೆಬೆನ್ನೂರಿನ ಭಾಗವಾಗಿದೆ ಹಾಗೂ ಅವುಗಳು ಸ್ವತಂತ್ರ್ಯ ಗ್ರಾಮಗಳಾಗಿಲ್ಲ.

**ಶ್ರೀಮತಿ ಸುಶೀಲಾಬಾಯಿ ಹೀರಾಚಂದ್ ಷಾ** – ಎಂದರೆ ಅವು ರಾಣಿಬೆನ್ನೂರಿಗೆ ಸೇರಿದಂತಾಯಿತೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು.

**ಶ್ರೀಮತಿ ವಿಜಯ ರಾಘವೇಂದ್ರರಾವ್ ದೇಸಾಯಿ:** ಬಸಲಿಕಟ್ಟೆ ಮತ್ತು ಗಂಗಾಜಲಕ್ಕೆ ಪ್ರತ್ಯೇಕ ಪಂಚಾಯ್ತಿ ರಚಿಸುವ ಪ್ರಶ್ನೆಯನ್ನು ಸರ್ಕಾರ ಪರಿಶೀಲಿಸಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** ಈಗಿನ ಆಕ್ಟ್ ಪ್ರಕಾರ ೧.೫೦೦ ಪ್ರಜಾ ಸಂಖ್ಯೆ ಇರಬೇಕಾಗುತ್ತದೆ. ಆ ರೀತಿ ಪಂಚಾಯ್ತಿ ಮಾಡಬೇಕೆಂದು ಪ್ರೋಪೋಸಲ್ ಬಂದರೆ ಸರ್ಕಾರದವರು ಅದನ್ನು ಸಹಾನುಭೂತಿಯಿಂದ ಪರಿಶೀಲನೆ ಮಾಡುತ್ತಾರೆ.

**ಶ್ರೀ ಜಿ.ವಿ.ಗೌಡ – ಆ** ರೀತಿ ಒಂದು ಪಂಚಾಯ್ತಿ ಮಾಡುವ ಅಧಿಕಾರವನ್ನು ಆ ಕೆಲಸ ಸುಸೂತ್ರವಾಗಿ ನಡೆಯುವ ದೃಷ್ಟಿಯಿಂದ ಡೆಪ್ಯೂಟಿ ಕಮೀಷನರಿಗೆ ಸರಕಾರದವರು ಡೆಲಿಗೇಟ್ ಮಾಡಿ ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ಕಾರ ಇತ್ತೀಚೆಗೆ ರಚಿಸಿದ ಕಮಿಟಿಯು ಈ ಪ್ರಶ್ನೆಯನ್ನು ಪರಿಕ್ಷೀಸುತ್ತಿದೆ ಮತ್ತು ಅದನ್ನು ಜಿಲ್ಲಾಧಿಕಾರಿಗೆ ಡೆಲಿಗೇಟ್ ಮಾಡಲು ಕಮಿಟಿಯವರು ತಮ್ಮ ವರದಿಯಲ್ಲಿ ಹೇಳಿದ್ದಾರೆ ಮತ್ತು ಅದನ್ನು ಸರ್ಕಾರವು ಪರೀಕ್ಷಿಸುತ್ತಿದೆ.

**ಶ್ರೀ ಟಿ.ಮಾದಯ್ಯ ಗೌಡ** – ಬಸಲಿ ಕಟ್ಟೆ, ಗಂಗಾಜಲ ತಾಂಡಾಗಳಲ್ಲಿ ರಾಣಿಬೆನ್ನೂರು ಮುನಿಸಿಪಾಲಿಟಿಯವರು ಏನಾದರೂ ಸೌಕರ್ಯಗಳನ್ನು ಒದಗಿಸಿಕೊಟ್ಟಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಮುನಿಸಿಪಾಲಿಟಿಯವರು ಮಾಡಿಕೊಟ್ಟಿದ್ದಾರೆಯೋ ಇಲ್ಲವೋ ಗೊತ್ತಿಲ್ಲ. ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟ್‌ನವರು ಬಾವಿ ತೆಗೆಸಿಕೊಟ್ಟಿದ್ದಾರೆ.

**ಶ್ರೀ ಕೆ.ಎಚ್.ರಂಗನಾಥ್** – ಪ್ರತಿಯೊಂದು ತಾಂಡಾದ ಜನಸಂಖ್ಯೆ ಎಷ್ಟಿದೆ? ಅವು ರಾಣಿಬೆನ್ನೂರು ಪ್ರಾಪರ್‌ಗೆ ಹತ್ತಿರದಲ್ಲಿವೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಆ ಸಮಾಚಾರ ನನ್ನ ಹತ್ತಿರ ಇಲ್ಲ.

**ಶ್ರೀ ಕೆ.ಪಿ. ರೇವಣ್ಣ ಸಿದ್ದಪ್ಪ** – ಟೌನ್‌ಗೆ ಸೇರದೇ ಇರುವ ಮನೆಗಳಿಗೆ ಹೇಗೆ ಬಾವಿ ತೆಗೆಸಿ ಕೊಟ್ಟಿರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟ್‌ನಿಂದ ಕೊಡಬಹುದು.

# ಗ್ರಾಮ ಪಂಚಾಯ್ತಿಯ ಕಾರ್ಯ ನಿರ್ವಹಣೆ ಕುರಿತು

**14ನೇ ಸೆಪ್ಟೆಂಬರ್ 1963**

**ಅಂಗಡಿ ಚನ್ನಬಸಪ್ಪ (ಹಡಗಲಿ):**

A. ಕಳೆದ ಎರಡು ವರ್ಷಗಳಿಂದ ಹರಪನಹಳ್ಳಿ ತಾಲ್ಲೂಕಿನ ಕುಂಚೂರು ಗ್ರಾಮ ಪಂಚಾಯ್ತಿಯಲ್ಲಿ ಯಾವುದೇ ಮಿಟಿಂಗ್‌ಗಳು ನಡೆಯದಿರುವುದು ಅವರಿಗೆ ತಿಳಿದಿದೆಯೇ?

B. 1958ರಿಂದ ತಿಳಿಸಿರುವ ಪಂಚಾಯ್ತಿಂಯ ಲೆಕ್ಕಗಳಿಗೆ ಆಡಿಟ್ ನಡೆದಿಲ್ಲವೆಂಬದು ಅವರಿಗೆ ತಿಳಿದಿದೆಯೇ?

C. ಗ್ರಾಮಸ್ಥರಿಂದ ಕಾನೂನು ಬದ್ಧವಾಗಿ ಬರಬೇಕಾಗಿರುವ ತೆರಿಗೆ, ಶುಲ್ಕ ಇತ್ಯಾದಿಗಳನ್ನು ತಿಳಿಸಿರುವ ಪಂಚಾಯ್ತಿಯ ಸಂಗ್ರಹಿಸಿಲ್ಲ ಎಂಬುದು ವಾಸ್ತವವೇ?

D. ತೆರಿಗೆ, ಶುಲ್ಕ, ಇತ್ಯಾದಿ ರೂಪದಲ್ಲಿ ಕಾಲ ಪರಿಮಿತಿ ಮೀರಿದ ಹಣವೆಷ್ಟು?

E. ತಿಳಿಸಿರುವ ಪಂಚಾಯ್ತಿಯ ವಿರುದ್ಧ ಅವರು ತೆಗೆದು ಕೊಂಡಿರುವ ಕ್ರಮವೇನು ಮತ್ತು ನಂತರದ ಫಲಿತಾಂಶವೇನು?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ–ಉಪಮಂತ್ರಿ):**

A. ಇಲ್ಲ

B. ಹೌದು

C. ಇಲ್ಲ

D. ಒಟ್ಟು 27,943=19 ರೂಪಾಯಿಗಳು, ಬರಬೇಕಾಗಿರುವ ಬಾಕಿಯೆಂದು ವರದಿಯಾಗಿದೆ. ಹಾಗೂ ಆಡಿಟ್ ನಂತರವೇ ಕಾಲ ಪರಿಮಿತಿ ಮೀರಿದ ಹಣ ತಿಳಿಯುವುದು.

E. ಅಸಿಸ್ಟೆಂಟ್ ಕಮೀಶನರ್, ಹೊಸಪೇಟೆ ಸಬ್–ಡಿವಿಜನ್ ಇವರಿಂದ ಪಂಚಾಯ್ತಿ ಕಾರ್ಯಾಚರಣೆಯ ಬಗ್ಗೆ ಸಂಪೂರ್ಣ ತನಿಖೆ ನಡೆಯುವುದು.

**ಶ್ರೀ ಅಂಗಡಿ ಚನ್ನಬಸಪ್ಪ :** 1958 ರಿಂದ ಲೆಕ್ಕಗಳ ಆಡಿಟ್ ನಡೆದಿಲ್ಲವೆಂದು ಯಾವಾಗ ಸರ್ಕಾರದ ಗಮನಕ್ಕೆ ಬಂದಿತು ಎಂದು ನಾನು ತಿಳಿದುಕೊಳ್ಳಬೆಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಅವರಿಗೆ ಬೇಗವೇ ತಿಳಿದಿತ್ತು, ಆದರೆ ಅಲ್ಲಿ, ಆಡಿಟ್ ಸಿಬ್ಬಂದಿ ಸಿಗಲಿಲ್ಲ. ಕಂಟ್ರೋಲರ್ ಆಫ್ ಸ್ಟೇಟ್ ಅಕೌಂಟ್ಸ್ ವಿಭಾಗದವರು ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳಲು ಕೇಳಿದ್ದಾರೆ ನೇಮಕಾತಿಯಲ್ಲಿನ ತೊಂದರೆಗಳಿಂದ ಆಡಿಟ್ ಮಾಡಲು ಆಗಲಿಲ್ಲ.

**ಶ್ರೀ ಅಂಗಡಿ ಚನ್ನಬಸಪ್ಪ:** ಹಣಕಾಸು ವರ್ಷ ಮುಗಿದ ಮೇಲೆ ಈ ಗ್ರಾಮ ಪಂಚಾಯ್ತಿಗಳ ಆಡಿಟ್‌ನ್ನು ಪೂರ್ಣಗೊಳಿಸಲು ಸರ್ಕಾರವು ಯಾವ ಸ್ಕೀಮ್‌ನ್ನು ರಚಿಸಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಈಗ ಆಡಿಟ್ ಸಿಬ್ಬಂದಿಯನ್ನು ನೇಮಕ ಮಾಡಿಕೊಳ್ಳುತ್ತಿದ್ದೇವೆ. ರೆಗ್ಯೂಲರ್ ಆಡಿಟ್‌ನ್ನು ನಡೆಸುತ್ತೇವೆ.

**ಸಭಾಧ್ಯಕ್ಷರು:** ಯಾವುದೇ ರೂಲ್ಸ್‌ಗಳನ್ನು ಫ್ರೇಮ್ ಮಾಡಲಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಅದರ ಮಾಹಿತಿ ಇಲ್ಲ.

**ಶ್ರೀ ಸಂಜೀವನಾಥ ಐತಾಳ:** ಕಳೆದ ಹಲವು ವರ್ಷಗಳಿಂದ ಹಲವಾರು ಪಂಚಾಯ್ತಿಗಳ ಲೆಕ್ಕಗಳ ಆಡಿಟ್ ನಡೆದಿಲ್ಲವೆಂದು ನಾನು ಒತ್ತಿಹೇಳುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಕೆಲ ವಿಷಯಗಳಲ್ಲಿ ಮಾನ್ಯ ಸದಸ್ಯರು ಹೇಳಿದ್ದು ಸರಿಯಾಗಿದೆ.

**ಶ್ರೀ ಜಿ.ವಿ.ಗೌಡ:** ರಾಜ್ಯದಲ್ಲಿರುವ ಎಲ್ಲ ಪಂಚಾಯ್ತಿಗಳ ಲೆಕ್ಕಗಳನ್ನು ಆಡಿಟ್ ಮಾಡಿಸಲು ಎಷ್ಟು ಜನ ಆಡಿಟರ್‌ಗಳು ಬೇಕಾಗುವರು.

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಸಿಗುತ್ತಿಲ್ಲ.

**ಶ್ರೀ ಎಚ್.ಆರ್.ಕೇಶವಮೂರ್ತಿ:** ಕೆಲವು ಪಂಚಾಯಿತಿಗಳ ಚೇರ್ಮನ್ ರವರು ರೆವೆನ್ಯೂ ಇಲಾಖೆಯವರೊಡನೆ ಇಲ್ಲದ ವ್ಯವಹಾರಗಳನ್ನು ಹೆಚ್ಚು ಮಾಡಿಕೊಂಡು ಕೋರ್ಟಿಗೆ ಹೋಗಿ ಪಂಚಾಯಿತಿಗಳ ಉತ್ಪತ್ತಿಯನ್ನೂ ಹಾಳುಮಾಡುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರಶ್ನೆಯಲ್ಲಿ ಸ್ಪಷ್ಟತೆ ಇಲ್ಲ, ಅವರು ನಿರ್ಧಿಷ್ಟ ಪ್ರಶ್ನೆ ಕೊಟ್ಟರೆ, ಸರ್ಕಾರವು ಅದಕ್ಕೆ ಉತ್ತರಿಸುವುದು.

**ಶ್ರೀ ಬಿ.ಎಲ್.ಗೌಡ –** ಕುಂಚೂರು ಪಂಚಾಯಿತಿಯಲ್ಲಿ ಹಣ ದುರುಪಯೋಗವಾಗಿದೆ ಎಂದು ಸರಕಾರಕ್ಕೆ ಯಾವಾಗ ತಿಳಿಯಿತು?

**ಶ್ರೀ ಕೊಂಡಜ್ಜಿ ಬಸಪ್ಪ:** ದುರುಪಯೋಗ ಎಂದೇನೂ ವರದಿ ಬಂದಿಲ್ಲ.

**ಶ್ರೀ ವಿ.ಎಂ.ದೇವ್ –** ಪಂಚಾಯಿತಿಗಳಿಗೆ ಆದಾಯವಿಲ್ಲದೇ ಹೋದರೆ ಇಲ್ಲಿ ಹೇಗೆ ಕೆಲಸ ಮಾಡಬೇಕು? ಇದು ಸಮಂಜಸವಾಗಿರುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಕಾರ್ಯದರ್ಶಿಗಳಲ್ಲಿ ಕೆಲವರು ತರಬೇತಿಯಲ್ಲಿದ್ದಾರೆ. ತರಬೇತಿ ಮುಗಿದ ತಕ್ಷಣ, ಈ ಪಂಚಾಯ್ತಿಗಳಿಗೆ ನಿಯೋಜನೆ ಮಾಡಲಾಗುವುದು.

**ಶ್ರೀ ಎಸ್.ಎಂ. ಗುರೆಡ್ಡಿ:** ೨೭,೯೪೩-೧೯ ರೂಪಾಯಿಗಳಷ್ಟು ಬಾಕಿ ಇದೆ ಎಂದು ಹೇಳಿದ್ದೀರಿ. ಇಷ್ಟು ಬಾಕಿ ಇರುವ ಹಣವು ಈ ಒಂದು ಪಂಚಾಯಿತಿಯಿಂದಲೇ ಬರುತ್ತದೆ/ ಎನ್ನುವ ನಂಬಿಕೆ ಏನಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ಸಮಿತಿಯ ಅಭಿಪ್ರಾಯವಾಗಿದೆ. ಅಂಥ ಅರೆ-ಕಾಲಿಕ ಕಾರ್ಯದರ್ಶಿಗಳನ್ನು ನೇಮಕಮಾಡಿಕೊಳ್ಳಬೇಕೆಂಬುದನ್ನು ಸದನ ಮತ್ತು ಸರ್ಕಾರವು ಪರಿಶೀಲಿಸಬೇಕು. ಶಾಶ್ವತ ಕಾರ್ಯದರ್ಶಿಯ ಅವಶ್ಯಕತೆ ಇಲ್ಲ. ಸಮಿತಿಯ ಅಭಿಪ್ರಾಯದಲ್ಲಿ ಮದ್ರಾಸ್ ಮತ್ತು ಇತರ ರಾಜ್ಯದಲ್ಲಿ ಅರೆ-ಕಾಲಿಕ ಕಾರ್ಯದರ್ಶಿಗಳಿದ್ದಾರೆ.

**ಶ್ರೀ ಸಿ.ಆರ್. ರಂಗೇಗೌಡ** – ಇಲ್ಲಿ ಒಂದು ಸಾಲಿನ ಕಂದಾಯ ಎಷ್ಟಾಗುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಅದರ ಬಗ್ಗೆ ಗೊತ್ತಿಲ್ಲ.

**ಶ್ರೀ ಎನ್.ಹುಚ್ಚಮಾಸ್ತಿಗೌಡ** – ಇಷ್ಟೊಂದು ಬಾಕಿಯಿರುವ ಹಣವನ್ನು ವಸೂಲು ಮಾಡುವುದಕ್ಕೆ ಗ್ರಾಮಪಂಚಾಯಿತಿಗಳಲ್ಲಿ ಬೇರೆ ಏನಾದರೂ ಸಿಬ್ಬಂದಿಯನ್ನು ನೇಮಿಸಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ರೆವೆನ್ಯೂ ಇಲಾಖೆಯವರ ಮೂಲಕವೇ ಈ ಹಣವನ್ನು ವಸೂಲು ಮಾಡುತ್ತಿದ್ದೇವೆ. ಆದರೆ ಇಲ್ಲಿದ್ದ ಪಂಚಾಯತಿ ಸೆಕ್ರೆಟರಿಗಳನ್ನು ಬೇರೆ ಕಡೆಗೆ ವರ್ಗಾವಣೆ ಮಾಡುವುದರಿಂದ ಇಲ್ಲಿ ವಸೂಲು ಮಾಡುವುದಕ್ಕೆ ಸ್ವಲ್ಪ ಕಷ್ಟವಾಗಿದೆ.

**ಶ್ರೀ ಜಿ.ವಿ. ಗೌಡ:** ಅಸಿಸ್ಟೆಂಟ್ ಕಮೀಶನರ್/ಕಂದಾಯ ವಿಭಾಗದ ಅಧಿಕಾರಿಗಳು ನಿಯತಕಾಲಿಕವಾಗಿ ಈ ಪಂಚಾಯ್ತಿಗಳನ್ನು ವಿಚಾರಣೆ ಮಾಡದಿರುವುದರಿಂದ ಬಾಕಿ ಉಳಿದಿದೆ. ಅದು ಹೌದು ಎಂದಲ್ಲಿ, ಸರ್ಕಾರವು ಎಲ್ಲ ಕಾಲ-ಪರಿಮಿತಿ ಮೀರಿದ ಬಾಕಿ ಹಣವನ್ನು ನಷ್ಟ ಭರ್ತಿ ಮಾಡುವುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ಕಾರವು ನಷ್ಟ ಭರ್ತಿ ಮಾಡಲಿಕ್ಕೆ ಆಗುವುದಿಲ್ಲ. ಇದಕ್ಕೆ ಯಾರು ಹೊಣೆಗಾರರೋ ಅವರೇ ನಷ್ಟಭರ್ತಿ ಮಾಡುತ್ತಾರೆ. ಆಡಿಟ್ ಆದ ನಂತರ ಅದು ಗೊತ್ತಾಗುತ್ತದೆ.

**ಶ್ರೀಮತಿ ವಿಜಯದೇವಿ ರಾಘವೇಂದ್ರ ರಾವ್ ದೇಸಾಯಿ:** ಯಾವಾಗ ಬಾಕಿಗಳು ಕಾಲ-ಪರಿಮಿತಿ ಮೀರಿದವು.

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಅದರ ಬಗ್ಗೆ ಗೊತ್ತಿಲ್ಲ.

# ತಾಲ್ಲೂಕು ಬೋರ್ಡ್‌ಗಳಿಗೆ ಹಣ ಹಂಚಿಕೆ ಕುರಿತು

21ನೇ ಸೆಪ್ಟೆಂಬರ್ 1963

**ಶ್ರೀ ಎಸ್. ವಿ. ರಾಮೇಗೌಡ (ಮಾಲೂರು)**

ಸಣ್ಣ ನೀರಾವರಿ ಕಾಮಗಾರಿಗಳನ್ನು ನಡೆಸಲು ತಾಲ್ಲೂಕು ಬೋರ್ಡ್‌ಗಳಿಗೆ ಪ್ರತಿ ವರ್ಷವು ಪ್ರತಿಯೊಂದು ತಾಲ್ಲೂಕು ಬೋರ್ಡ್‌ಗಳಿಗೆ, ಒಂದು ಲಕ್ಷರೂಪಾಯಿಗಳನ್ನು ಹಂಚಿಕೆ ಮಾಡುವ ಇಚ್ಛೆ ಇದೆಯೇ.

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ–ಉಪಮಂತ್ರಿ):**

ಇಲ್ಲ

**ಶ್ರೀ ಎಸ್. ವಿ. ರಾಮೇಗೌಡ:** 10 ಎಕರೆ ಅಚ್ಚುಕಟ್ಟು ಇರತಕ್ಕ ಕೆರೆಗಳನ್ನು ದುರಸ್ತಿ ಮಾಡುವವರು ಯಾರು?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ತಾಲ್ಲೂಕು ಬೋರ್ಡಿನವರ ಜವಾಬ್ದಾರಿ, ತಾವು ಒಂದು ಲಕ್ಷರೂಪಾಯಿ ಕೊಡುವ ಅಭಿಪ್ರಾಯವಿದೆಯೇ ಎಂದು ಕೇಳಿದ್ದೀರಿ. ಆ ರೀತಿ ಕೊಡುವುದಾದರೆ ಒಂದು ಕೋಟಿ 72 ಲಕ್ಷ ರೂಪಾಯಿಗಳನ್ನು ಕೊಡಬೇಕಾಗುತ್ತದೆ. ಪ್ರತಿಯೊಂದು ತಾಲ್ಲೂಕು ಬೋರ್ಡಿಗೂ ಕೊಡುವುದಾದರೆ, ಆದ್ದರಿಂದ ಅದು ಸಾಧ್ಯವಿಲ್ಲ ಎಂದು ಅದಕ್ಕೆ ನೆಗೆಟೀವ್ ರಿಪ್ಲೈ ಕೊಟ್ಟಿದೆ.

**ಶ್ರೀ ಬಿ. ಚನ್ನಬೈರೇಗೌಡ** – ಸಣ್ಣ ನೀರಾವರಿಗೆ ಪ್ರತಿಯೊಂದು ತಾಲ್ಲೂಕು ಬೋರ್ಡಿಗೂ ಎಷ್ಟು ಹಣವನ್ನು ಕೊಟ್ಟಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಕಳೆದ 2 ವರ್ಷಗಳ ಹಿಂದೆ ಪ್ರತಿವರ್ಷ 6 ಲಕ್ಷ ರೂಪಾಯಿಗಳಂತೆ ಕೊಡಲಾಗಿದೆ. ಅದನ್ನೂ ಕೂಡ ಕೆಲವು ಕಾರಣಗಳಿಂದ ಪೂರ್ಣವಾಗಿ ಖರ್ಚು ಮಾಡಿಲ್ಲ.

**ಶ್ರೀ ಕೆ.ಲಕ್ಕಪ್ಪ:** 10 ಎಕರೆ ಅಚ್ಚುಕಟ್ಟಿನಲ್ಲಿರತಕ್ಕ ಸಣ್ಣ ನೀರಾವರಿ ಕಾಮಗಾರಿಯಲ್ಲಿ ಮಾಡಬೇಕೆಂದು ಆದೇಶ ಕೊಟ್ಟಮೇಲೆ ತಾಲ್ಲೂಕು ಬೋರ್ಡಿನಲ್ಲಿ ಹಣವಿಲ್ಲದೆ ಯಾವ ಕೆಲಸವೂ ಆಗದೆ ಇರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗತಾನೆ ಹೇಳಿದೆ, ಪ್ರತಿಯೊಂದು ತಾಲ್ಲೂಕಿಗೂ 6 ಲಕ್ಷ ರೂಪಾಯಿ ಕೊಟ್ಟಿದೆ, ಅದನ್ನೂ ಕೂಡ ಪೂರ್ಣವಾಗಿ ಖರ್ಚು ಮಾಡಿಲ್ಲ ಎಂದು

ಆದರೂ ಇಂಡಿಯಾ ಸರ್ಕಾರದವರಿಗೆ ಬರೆದಿದ್ದೇವೆ. ದುಡ್ಡು ಬಂದ ಕೂಡಲೇ ಆದಷ್ಟು ಹೆಚ್ಚಿನ ಸ್ಪೆಷಲ್ ಅಸಿಸ್ಟೆನ್ಸ್ ಕೊಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

**ಶ್ರೀ ಇ.ನಾರಾಯಣ ಗೌಡ** – ಸಣ್ಣ ನೀರಾವರಿಗೆ ಕೊಟ್ಟ ಹಣ ಖರ್ಚಾಗುತ್ತಿಲ್ಲ ಎಂದು ಹೇಳುತ್ತಾ ಇದ್ದೀರಿ ಒಂದೊಂದು ತಾಲ್ಲೂಕಿನಲ್ಲಿ ನೂರಾರು ಕೆರೆಗಳಿದ್ದು ತಾವು ಕೊಡತಕ್ಕ ಹಣವನ್ನು ಹಂಚಿಕೆ ಮಾಡಿದರೆ ಕೆಲವು ಕೆರೆಗಳಿಗೆ ಒಂದು ರೂಪಾಯಿ ಸಹ ಬರುವುದಿಲ್ಲ ಎಂಬುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನೀವು ಹೇಳುವದೇನೋ ಸರಿ ಅವಶ್ಯಕತೆಗಳಿಗೆ ಸಂಬಂಧಿಸಿದಂತೆ, ಇದು ಕಡಿಮೆ ಹಣ. ಕೆಲವು/ಇತರೆ ಕಾರಣಗಳಿಂದ ಹಣವನ್ನು ಪೂರ್ಣವಾಗಿ ಖರ್ಚುಮಾಡಿಲ್ಲ. ಪ್ರತಿಯೊಂದು ತಾಲ್ಲೂಕು ಬೋರ್ಡ್‌ನವರು ತಕ್ಷಣವೇ ಹಣವನ್ನು ಖರ್ಚು ಮಾಡಲಿಕ್ಕೆ ಹಾಗೂ ಹೆಚ್ಚುವರಿ ಪೂರಕ ಬೇಡಿಕೆಯನ್ನು ಕೇಳಬೇಕೆಂದು ನಾವು ಕೇಳಿದ್ದೇವೆ.

**ಶ್ರೀ ಎನ್. ಹುಚ್ಚಮಾಸ್ತಿ ಗೌಡ:** ಕೊಟ್ಟಿರತಕ್ಕ ಅಲ್ಪ ಸ್ವಲ್ಪ ಹಣವನ್ನೂ ಖರ್ಚು ಮಾಡದೇ ಇರುವುದಕ್ಕೆ ಅದರಲ್ಲೂ ಸಾಕಾದಷ್ಟು ಟೆಕ್ನಿಕಲ್ ಅಸಿಸ್ಟೆನ್ಸ್ ಇದ್ದೂ ಕೂಡ ಖರ್ಚು ಮಾಡದೇ ಇರುವುದಕ್ಕೆ ಕಾರಣವೇನು ಎಂಬುದರ ಬಗ್ಗೆ ತಾಲ್ಲೂಕು ಬೋರ್ಡಿನಿಂದ ವರದಿ ತರಿಸಿಕೊಂಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯನ್ನು ನೀಡಲು ಜಿಲ್ಲಾಧಿಕಾರಿಗಳಿಗೆ ನಾವು ಕೇಳಿದ್ದೇವೆ.

**ಶ್ರೀ ಬಿ. ಚನ್ನಬೈರೇಗೌಡ:** ತಾಲ್ಲೂಕು ಬೋರ್ಡಿನವರಿಗೆ ಕೊಟ್ಟಿರತಕ್ಕ ಹಣವನ್ನು ಖರ್ಚು ಮಾಡದೇ ಇರುವುದಕ್ಕೆ ಅವರ ಹತ್ತಿರ ಸಿಬ್ಬಂದಿ ಇಲ್ಲದೇ ಇರುವುದೂ ಒಂದು ಕಾರಣವಲ್ಲವೇ ಮತ್ತು ಪ್ರತಿಯೊಂದು ತಾಲ್ಲೂಕಿನಲ್ಲೂ ಒಬ್ಬ ಅಸಿಸ್ಟೆಂಟ್ ಇಂಜನೀಯರು ಮತ್ತು ಅವರಿಗೆ ತಕ್ಕ ಸಿಬ್ಬಂದಿ ಇರುವಂತೆ ಪಿ. ಡಬ್ಲ್ಯೂ ಡಿ. ಅವರು ಏಕೆ ವ್ಯವಸ್ಥೆ ಮಾಡಬಾರದು?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರೇ ತಮ್ಮ ಸಬ್–ಓವರ್‌ಸೀಯರುಗಳನ್ನು ಇಟ್ಟುಕೊಂಡಿದ್ದಾರೆ, ಕೆಲವು ಕಡೆ ಇಲ್ಲ. ಅದೂ ಒಂದು ಕಾರಣ ಇದೆ.

**ಶ್ರೀ ಎಸ್. ವಿ. ರಾಮೇಗೌಡ** – ಸಣ್ಣ ಮಟ್ಟ ಕೆರೆಗಳ ವಿಚಾರದಲ್ಲಿ ಸರ್ಕಾರದವರ ನೀತಿ ಏನು ಸ್ವಾಮಿ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ, ಇದು ಕಾಯ್ದೆ ಅಡಿಯಲ್ಲಿ ಪಂಚಾಯ್ತಿಯ ಬಾಧ್ಯತೆಯ ಕರ್ತವ್ಯವಾಗಿದೆ ಹಾಗೂ ಅವರು ಈ ಎಲ್ಲ ಕೆಲಸ/ಕಾಮಗಾರಿಗಳನ್ನು ಕೈಗೊಳ್ಳಬೇಕು.

**ಶ್ರೀ ಎಮ್. ವೈ. ಘೋರ್ಪಡೆ:** ಇದುವರೆಗೂ ಸರ್ಕಾರವು ಸಣ್ಣ ನೀರಾವರಿ ಬ್ಯಾಂಕ್‌ಗಳನ್ನು ಪೋಷಿಸುತ್ತಿತ್ತು. ಅದು ಹೇಗೆ ಶೇಕಡ 50 ರಷ್ಟು ಬ್ಯಾಂಕ್‌ಗಳನ್ನು ಉಪಯೋಗಿಸದಿರುವುದು ಪೋಷಣೆ/ಸಂರಕ್ಷಣೆ ಇಲ್ಲದಿರುವುದರಿಂದಲ್ಲವೇ.

**ಶ್ರೀ ಎಚ್. ಆರ್. ಕೇಶವಮೂರ್ತಿ** – ಹಾಸನ ತಾಲ್ಲೂಕು ಬೋರ್ಡಿನವರು ಕಮಿಟೆಡ್ ವರ್ಕ್ಸ್ ಅರ್ಧಮರ್ಧ ಮಾಡಿ ದುಡ್ಡು ಸಾಲದೆ 55 ಸಾವಿರ ರೂಪಾಯಿ ಬೇಕೆಂದು ಮನವಿ ಮಾಡಿಕೊಂಡಿರುವುದನ್ನು ಏಕೆ ಕೊಡಲಿಲ್ಲ. ಆ ಕೆಲಸ ಹಾಳಾಗುತ್ತಾ ಇದೆಯಲ್ಲಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯ ಲಭ್ಯವಿಲ್ಲ.

**ಶ್ರೀ ಜಿ. ರಾಮೇಗೌಡ:** ರಾಜ್ಯದಲ್ಲಿ 10 ಎಕರೆ ಅಚ್ಚುಕಟ್ಟಿಗೆ ಇರತಕ್ಕ ಕೆರೆಗಳು ಎಷ್ಟು ಇವೆ?

ಶ್ರೀ ಕೊಂಡಜ್ಜಿ ಬಸಪ್ಪ: ಯಾವಾಗ ನಮಗೆ ಮಾಹಿತಿ ಸಿಗುವುದೋ, ತಕ್ಷಣ ನಾವು ಅದನ್ನು ಒದಗಿಸುತ್ತೇವೆ.

**ಶ್ರೀ ಎನ್. ಹುಚ್ಚಮಾಸ್ತಿಗೌಡ:** ೧೦ ಎಕರೆ ಅಚ್ಚುಕಟ್ಟಿಗೆ ಕಡಿಮೆ ಇರತಕ್ಕ ೧೬,೬೦೦ ಕೆರೆಗಳನ್ನು ಮೇನ್‌ಟೇನ್ ಮಾಡುವುದು, ಕೋಡಿ ತೂಬನ್ನು ರಿಪೇರಿ ಮಾಡುವುದಕ್ಕೆ ಎಷ್ಟು ದುಡ್ಡು ಖರ್ಚಾಗುತ್ತದೆ ಎಂದು ತಾಲ್ಲೂಕು ಬೋರ್ಡಿನವರು ಅಂದಾಜು ತಯಾರು ಮಾಡಿಸಿದ್ದಾರೆಯೇ?

**ಶ್ರೀ ಕೆ. ಪಿ. ರೇವಣ್ಣ ಸಿದ್ದಪ್ಪ** – ತಾಲ್ಲೂಕು ಬೋರ್ಡು ಮಾಡಬೇಕು, ಸರ್ಕಾರ ಮಾಡಬೇಕು ಎಂದು ಹೇಳುವುದರಿಂದ ಈ ಮಧ್ಯೆ ಬಡವರಿಗೆ ತೊಂದರೆಯಾಗುತ್ತಾ ಇದೆ. ಸಿಬ್ಬಂದಿ ಮತ್ತು ಹಣ ಕೊಡುವುದಕ್ಕೆ ಬದಲಾಗಿ ಪಿ. ಡಬ್ಲ್ಯೂ.ಡಿ ಇಲಾಖೆಯವರಿಂದಲೇ ಈ ಕೆಲಸವನ್ನು ಮಾಡಿಸಲು ತಕ್ಷಣ ಪ್ರಯತ್ನ ಮಾಡುತ್ತೀರಾ? ಅದರಿಂದ ಜನಗಳಿಗೆ ಉಪಯೋಗವಾಗಬೇಕೋ ಬೇಡವೋ?

**ಶ್ರೀ ಕೊಂಡಜ್ಜಿ ಬಸಪ್ಪ:** ತಾವೇ ಎಲ್ಲಾ ಅಧಿಕಾರ ವಹಿಸಿಕೊಂಡಿದ್ದೀರಿ. ನಾವು ಮಾಡುವುದು ಬೇಕಿಲ್ಲ ಎಂದರೆ ಸರ್ಕಾರ ಯೋಚನೆ ಮಾಡಬೇಕಾಗುತ್ತದೆ.

**ಶ್ರೀ ಜಿ. ದೇವಯ್ಯ:** 10 ಎಕರೆಗೆ ಒಳಪಟ್ಟಿರತಕ್ಕ ಜಾಗದಲ್ಲಿ ಸರಿಯಾಗಿ ನೀರಾವರಿಯಾಗುತ್ತಿಲ್ಲ, ಬೇಕಿಲ್ಲ ಎಂಬುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಸುಮಾರು 90 ಸಾವಿರ ಎಕರೆ ನೀರಾವರಿಯಾಗುತ್ತಿದೆ ಎಂದು ಗೊತ್ತಾಗಿದೆ.

**ಶ್ರೀ ಜಿ. ದೇವಯ್ಯ** – ಈ ಲೆಕ್ಕದ ಪ್ರಕಾರ 90 ಸಾವಿರ ಎಕರೆ ನೀರಾವರಿಯಾಗುತ್ತಿದೆ ಎಂದು ಹೇಳುತ್ತೀರಾ? ಅಥವಾ ನೀರಾವರಿಯಾಗುತ್ತಿದೆಯೇ ಇಲ್ಲವೇ ಎಂಬುದನ್ನು ಪರಿಶೀಲನೆ ಮಾಡಿ ನೋಡಿ ಒಂದು ವರದಿಯನ್ನು ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಪರಿಗಣಿಸಲು ಶಿಫಾರಸ್ಸು ಆಗಿದೆ.

**ಶ್ರೀ ಎಫ್. ಎಸ್. ತಾವರೆ:** ತಾಲ್ಲೂಕು ಬೋರ್ಡಿನವರು ಡಿಪ್ಲೋಮಾ ಹೋಲ್ಡರುಗಳಿಗೆ ಇದನ್ನು ವಹಿಸಿರುವುದರಿಂದ ಅಲ್ಲಿ ಈ ಕೆರೆಗಳ ದುರಸ್ತಿ ಕೆಲಸ ಸಮರ್ಪಕವಾಗಿ ನಡೆಯದೇ ಇರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರಿಯಿಲ್ಲ. ಅವರೆಲ್ಲ ತಾಂತ್ರಿಕ ಅರ್ಹತೆಯುಳ್ಳವರು ಹಾಗೂ ಸಮರ್ಪಕವಾಗಿ ಕಾರ್ಯಗಳನ್ನು ನಿರ್ವಹಿಸುವರು.

**ಶ್ರೀ ನಾರಾಯಣ ಗೌಡ:** ತಾಲ್ಲೂಕು ಬೋರ್ಡು ಮತ್ತು ಗ್ರಾಮ ಪಂಚಾಯಿತಿಗೆ ಅಧಿಕಾರ ಕೊಟ್ಟು ಹಣ ಕೊಡದೇ ಇರುವುದರಿಂದ ಈ ರೀತಿ ಆಗುತ್ತಾ ಇದೆ. ಇನ್ನು ಎಷ್ಟು ದಿವಸಗಳಲ್ಲಿ ಈ ಕೆರೆಗಳನ್ನು ದುರಸ್ತಿ ಮಾಡಿಸುತ್ತೀರಿ ಮತ್ತು ತಾಲ್ಲೂಕು ಬೋರ್ಡುಗಳವರಿಗೆ ಸಾಕಾದಷ್ಟು ಹಣ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇಂಡಿಯಾ ಸರ್ಕಾರದವರನ್ನು ಕೇಳಿದ್ದೇವೆ; ಸ್ಪೆಷಲ್ ಅಸಿಸ್ಟೆನ್ಸ್ ಕೊಡಬೇಕೆಂದು ಅದು ಬಂದ ತಕ್ಷಣ ಹಣ ಒದಗಿಸುತ್ತೇವೆ ಮತ್ತು ಈ ದುರಸ್ತಿ ಕೆಲಸವನ್ನು ಅವರು ಮಾಡಿಸುತ್ತಾರೆ.

**ಶ್ರೀ ಎಮ್.ವೈ. ಘೋರ್ಪಡೆ :** ಪ್ರತಿ ಎಕರೆಗೆ ಎಷ್ಟು ನಿರ್ವಹಣೆ ಬೇಕಾಗುವುದು ಎಂದು ಸರ್ಕಾರವು ನಿರ್ಧರಿಸಿದೆಯೇ ಹಾಗೂ ಆ ನಿರ್ಧಾರದ ನಂತರ ಆಯುಕ್ತ ಅನುಸಾರ ಅವರಿಗೆ ಬಿಟ್ಟುಕೊಡಬೇಕಾಗಿರುವುದನ್ನು ತಾಲ್ಲೂಕು ಬೋರ್ಡ್ ಬಿಟ್ಟು ಕೊಡುವುದು ನಿರ್ಧರಿಸಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಪರಿಗಣಿಸಲು ಒಂದು ಸಲಹೆಯಾಗಿದೆ. ಪ್ರಶ್ನೆಯನ್ನು ನಾವು ನಿಶ್ಚಿತವಾಗಿ ಪರಿಗಣಿಸುತ್ತೇವೆ.

**ಶ್ರೀ ಎಚ್.ಡಿ.ದೇವೇಗೌಡ** – ಕೊಟ್ಟ ಹಣವನ್ನು ತಾಲ್ಲೂಕು ಬೋರ್ಡಿನವರು ಖರ್ಚುಮಾಡುವುದಕ್ಕೆ ಕೆಲವು ಕಡೆ ಅವರಿಗೆ ತಾಂತ್ರಿಕ ಸಿಬ್ಬಂದಿ ಇಲ್ಲ. ಈ ತೊಂದರೆಯನ್ನು ನಿವಾರಿಸುವುದಕ್ಕೆ ೩–೪ ತಾಲ್ಲೂಕುಗಳನ್ನು ಒಂದುಗೂಡಿಸಿ ಅದಕ್ಕೆ ಒಬ್ಬ ಅಸಿಸ್ಟೆಂಟ್ ಇಂಜಿನಿಯರನ್ನು ನೇಮಕ ಮಾಡಿ ಅವರಿಗೆ ಸಾಕಾದಷ್ಟು ಸಿಬ್ಬಂದಿ ಕೊಡುವ ಉದ್ದೇಶ ಸರ್ಕಾರದವರಿಗೆ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಹೀಗೆ ಎಲ್ಲ ತಾಂತ್ರಿಕ ನೆರವನ್ನು ನೀಡಲು ಪ್ರಯತ್ನಿಸುತ್ತೇವೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ನಮ್ಮ ಹತ್ತಿರ ದುಡ್ಡು ಇಲ್ಲ. ಪ್ರತಿ ತಾಲ್ಲೂಕಿನಲ್ಲೂ ಒಂದು ಇಂಜಿನಿಯರಿಂಗ್ ಸಬ್ ಡಿವಿಜನ್ ಮಾಡಿ ಮೈನರ್ ಇರಿಗೇಷ್‌ನ್ ಕೆಲಸ ಅವರಿಗೆ ಕೊಟ್ಟು ಅವರ ಮೂಲಕ ಈ ಕೆಲಸವನ್ನು ಮಾಡಿಸಿದರೆ ಅವರು ಅತಿ ಶೀಘ್ರವಾಗಿ ಕೆಲಸಕಾರ್ಯಗಳನ್ನು ಮಾಡುತ್ತಾರೆ. ಆದ್ದರಿಂದ ತಾಲ್ಲೂಕು ಬೋರ್ಡಿನ ವ್ಯಾಪ್ತಿಯಿಂದ ಇದನ್ನು ತೆಗೆದುಹಾಕಲು ಕಾನೂನಿನಲ್ಲಿ ಸೂಕ್ತ ತಿದ್ದುಪಡಿ ಇರತಕ್ಕ ಬಾಧಕವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಹಣದ ಕೊರತೆಯಿಂದ ಕೆಲವು ಕಡೆ ಕೆಲಸವಾಗಿಲ್ಲ. ಕೆಲವು ಕಡೆ ತಾಂತ್ರಿಕ ಸಹಾಯ ದೊರೆಯದೇ ಕೆಲಸವಾಗಿಲ್ಲ. ಅಂದ ಮಾತ್ರಕ್ಕೆ ಕಾನೂನು ತಿದ್ದುಪಡಿ ಮಾಡಬೇಕೆಂದು ಹೇಳುವುದು ಸರಿಯಲ್ಲ.

**ಶ್ರೀ.ಎಸ್.ಎಂ.ಕೃಷ್ಣ:** ಪಬ್ಲಿಕ್ ವರ್ಕ್ಸ್ ಇಲಾಖೆಯಿಂದಲೇ ಈ ಕೆಲಸವನ್ನು ಮಾಡಿಸಿದರೆ ಬಹಳ ಬೇಗ ಆಗುತ್ತದೆ ಮತ್ತು ಖಂಡಿತವಾಗಿಯೂ ಆಗುತ್ತದೆ. ಇದನ್ನು ಸರ್ಕಾರದವರು ಪರಿಶೀಲನೆ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಕೆಲವು ತಾಲ್ಲೂಕು ಬೋರ್ಡಿನವರು ಬಹಳ ಇಫೆಕ್ಟಿವ್ ಆಗಿ ಕೆಲಸ ಮಾಡಿದ್ದಾರೆ; ಕೆಲವು ಕಡೆ ತಾಂತ್ರಿಕ ಸಹಾಯವಿಲ್ಲದೆ ಮಾಡಿಲ್ಲ; ಕೆಲವು ಕಡೆ ಹಣ ತೊಂದರೆಯಿಂದ ಮಾಡಿಲ್ಲ ಎಂದು ಹೇಳಬಹುದು, ಅಷ್ಟೆ.

**ಶ್ರೀ ಡಿ.ಮುನಿಚಿನ್ನಪ್ಪ:** ತಾಲ್ಲೂಕು ಬೋರ್ಡಿನ ಮೇಲೆ ಡಿಸ್ಟ್ರಿಕ್ಟ್ ಕೌನ್ಸಿಲ್ ಎಂದು ಇದೆ. ತಾಲ್ಲೂಕು ಬೋರ್ಡಿನಲ್ಲಿ ಗ್ರಾಂಟ್ ಇದ್ದು ಅವರು ಎರಡು ಮೂರು ಸಲ ಮಂಜೂರು ಮಾಡಿದರೂ ಡಿಸ್ಟ್ರಿಕ್ಟ್ ಕೌನ್ಸಿಲ್‌ನಲ್ಲಿ ಡೆಪ್ಯೂಟಿ ಕಮಿಷನರು ಕ್ಯಾನ್ಸಲ್ ಮಾಡಿದ್ದಾರೆ. ಇಂತಹ ಸಂದರ್ಭದಲ್ಲಿ ನೀವು ಏನು ಸಹಾಯ ಮಾಡುತ್ತೀರಿ ಸ್ವಾಮಿ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿರ್ದಿಷ್ಟವಾದ ನಿದರ್ಶನವನ್ನು ಹೇಳಿದರೆ ವಿಚಾರ ಮಾಡಬಹುದು.

**ಶ್ರೀ ಜಿ.ರಾಮೇಗೌಡ –** ಈ ತಾಲ್ಲೂಕಿಗೆ ಇದರ ಬಗ್ಗೆ ಎಷ್ಟು ಹಣ ಒದಗಿಸಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆಗಲೇ ಹೇಳಿದೆ ೬ ಲಕ್ಷ ರೂಪಾಯಿ ಎಂದು.

**ಶ್ರೀ ಕೆ. ಲಕ್ಕಪ್ಪ:** ವ್ಯವಸಾಯದ ಮಂತ್ರಿಗಳು ಹಿಂದೆ ಒಂದು ಹೇಳಿಕೆಯನ್ನು ಕೊಟ್ಟಿದ್ದಾರೆ. ಆಹಾರದ ಅಭಾವ ನೀಗಿಸುವುದಕ್ಕೆ ಹೆಚ್ಚು ಆಹಾರ ಬೆಳೆಸಲು ಮೈನರ್ ಟ್ಯಾಂಕ್‌ನ್ನು ಪಬ್ಲಿಕ್ ವರ್ಕ್ಸ್ ಇಲಾಖೆಯವರಿಗೆ ವಹಿಸಬೇಕು ಎಂದು ಆ ಬಗ್ಗೆ ಸರ್ಕಾರದವರು ಏನು ಯೋಚನೆ ಮಾಡಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ:** ೧೦ ಎಕರೆಗೆ ಮೇಲ್ಪಟ್ಟು ಎಂದು ಹೇಳಿದ್ದರು. ಆದಕ್ಕಿಂತ ಕೆಳಗೆ ಎಂದು ಹೇಳಿಲ್ಲ.

**ಶ್ರೀ ಜಿ.ಎ.ಗೌಡ –** ತಾಲ್ಲೂಕು ಬೋರ್ಡಿಗೆ ವಹಿಸುವುದಕ್ಕೆ ಮುನ್ನ ತಾವು ಈ ಕೆರೆಗಳ ಸಂಬಂಧವಾಗಿ ಎಷ್ಟು ದುಡ್ಡು ಖರ್ಚು ಮಾಡುತ್ತಾ ಇದ್ದಿರೀ? ಎಷ್ಟು ಎಕರೆ ಆಗುತ್ತಾ ಇತ್ತು

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಲಭ್ಯವಿಲ್ಲ.

# ವೆಲ್‌ಫೇರ್ ಗ್ರ್ಯಾಂಟ್

1ನೇ ಏಪ್ರಿಲ್ 1963

**ಶ್ರೀ ಕೆ.ಎಲ್. ಶಿವಲಿಂಗೇಗೌಡ (ವಿರೂಪಾಕ್ಷಪುರ):–**

ಅ. ಬೋರ್ಡಿನ ಅನುಮತಿ ಪಡೆಯದೇ ಕನಕಪುರ ತಾಲ್ಲೂಕು ಡೆವಲಪ್‌ಮೆಂಟ್ ಬೋರ್ಡಿನ ಪ್ರೆಸಿಡೆಂಟ್ ಮತ್ತು ಚೀಫ್ ಎಕ್ಸಿಕ್ಯೂಟಿವ್ ಆಫೀಸರ್ ವೆಲ್‌ಫೇರ್ ಗ್ರ್ಯಾಂಟ್‌ನ್ನು ಹಂಚಿರುವುದಕ್ಕೆ ಸಂಬಂಧಿಸಿದಂತೆ ಯಾವುದಾದರೂ ದೂರುಗಳು ಬಂದಿವೆಯೇ?

ಆ. ಹೌದು ಎಂದಲ್ಲಿ, ಅಂಥ ದೂರುಗಳಿಗೆ ಅವರು ತೆಗೆದುಕೊಂಡ ಕ್ರಮ?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ):–**

ಅ. ಹೌದು

ಆ. ಕ್ರಮ ತೆಗೆದುಕೊಂಡಿಲ್ಲ. ವಿಷಯದಲ್ಲಿ ಪ್ರೆಸಿಡೆಂಟ್ ಮತ್ತು ಬೋರ್ಡ್ ಕ್ರಮ ತೆಗೆದು ಕೊಳ್ಳಲು ವಿಳಂಬ ಮಾಡಿದರು ಹಾಗೂ ಗ್ರ್ಯಾಂಟ್ಸ್ ಕೈತಪ್ಪುವ ಸಾಧ್ಯವಿತ್ತು. ಸೋಷಿಯಲ್ ವೆಲ್‌ಫೇರ್ ಸಬ್–ಕಮಿಟಿ ಮೀಟಿಂಗ್ ರೆಸಲ್ಯೂಷನ್ ಪ್ರಕಾರ ಗ್ರ್ಯಾಂಟ್ಸನ್ನು ಜಿಲ್ಲಾಧಿಕಾರಿಯವರು ಹಂಚಿಕೆ ಮಾಡಲು ಚೀಫ್ ಎಕ್ಸಿಕ್ಯೂಟಿವ್ ಆಫೀಸರ್‌ನ್ನು ಕೇಳಿದರು.

**ಶ್ರೀ ಕೆ.ಎಲ್.ಶಿವಲಿಂಗೇಗೌಡ –** ಯಾವುದೇ ಆದರೂ ಕೂಡ ಕ್ರಮವಾಗಿ ಬೋರ್ಡ್ ಮುಂದೆ ಇಟ್ಟು ಬೋರ್ಡಿನ ಅನುಮತಿ ಪಡೆದು ಮಾಡಬೇಕಾದ್ದು ಸರ್ಕಾರದ ಜವಾಬ್ದಾರಿಯಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು, ಬೋರ್ಡಿನ ಅನುಮತಿ ತೆಗೆದುಕೊಂಡೇ ಪ್ರತಿಯೊಂದೂ ಮಾಡಬೇಕು.

**ಶ್ರೀ ಕೆ.ಎಲ್.ಶಿವಲಿಂಗೇಗೌಡ –** ಬೋರ್ಡ್‌ನ ಅನುಮತಿ ಪಡೆಯದೇ ಛೀಫ್ ಎಕ್ಸಿಕ್ಯೂಟಿವ್ ಆಫೀಸರ್ ಹಣ ಹಂಚಿರುವುದರಿಂದ ಸರ್ಕಾರದ ಹಣ ದುರುಪಯೋಗವಾಗಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಪರ್ಟಿಕ್ಯೂಲರ್ ಕೇಸ್‌ನಲ್ಲಿ ಬೋರ್ಡ್ ಮೀಟಿಂಗ್ ಕರೆದದ್ದನ್ನು ಅಧ್ಯಕ್ಷರು ಮುಂದುವರಿಸಿದರು. ಸೋಷಿಯಲ್ ವೆಲ್ ಫೇರ್ ಸಬ್ ಕಮಿಟಿ ಮೀಟಿಂಗ್ ರೆಸಲ್ಯೂಶನ್ ಪ್ರಕಾರ ಮಂಜೂರು ಮಾಡಲಿಕ್ಕೆ ಅವಕಾಶವಿರಲಿಲ್ಲ.

**ಶ್ರೀ ಕೆ.ಲಕ್ಕಪ್ಪ:** ಸೋಷಿಯಲ್ ವೆಲ್ ಫೇರ್ ಬೋರ್ಡಿನ ಸಬ್ ಕಮಿಟಿಯವರು ಎಷ್ಟು ಹಣ ಹಂಚಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಒಂದುಸಾವಿರದ ಐದುನೂರು ರೂಪಾಯಿ ಬೋರ್ಡಿಗೆ ಕೊಟ್ಟಿದ್ದಾರೆ. ೧೦೦೦ ರೂಪಾಯಿ ಹಸು ಕೊಳ್ಳುವುದಕ್ಕೆ ಉಪಯೋಗಿಸಿದ್ದಾರೆ.

**ಶ್ರೀ ಕೆ.ಎಸ್.ಶಿವಲಿಂಗೇಗೌಡ** – ಅಧ್ಯಕ್ಷರು ಬೋರ್ಡ್ ಮುಂದೆ ಇದನ್ನು ತರದೇ ಮುಂದುವರೆಸುವುದರಿಂದ ಅವರ ಮೇಲೆ ಕ್ರಮ ತೆಗೆದುಕೊಳ್ಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ, ಸಂಬಂಧಿಸಿದ ಅಧಿಕಾರಿಗಳು ತನಿಖೆಯನ್ನು ಮಾಡಿದರು ಹಾಗೂ ಪ್ರೆಸಿಡೆಂಟ್‌ರವರಿಂದ ಮಿಟಿಂಗ್‌ನ್ನು ಯಾವುದೇ ನಿಖರವಾದ/ಸರಿಯಾದ ಕಾರಣಗಳಿಲ್ಲದೇ ಮುಂದೂಡಿದ್ದು ಸರಿಯಲ್ಲ.

**ಶ್ರೀ ಎಂ.ಎಂ.ದೇವ್** – ಹಣ ಬಹಳ ನಿಧಾನವಾಗಿ ಒದಗಿಸಿದ್ದರಿಂದ ಈ ತರಹ ಆಗಿದೆ. ಯಾವಾಗ ಹಣ ಒದಗಿಸಿದಿರಿ ಎಂಬ ಆ ತಾರೀಖು ಹೇಳುತ್ತೀರಾ ?

**ಶ್ರೀ ಕೊಂಡಜ್ಜಿ ಬಸಪ್ಪ:** ಫೆಬ್ರುವರಿಯಲ್ಲಿ ಹಣ ಒದಗಿಸಿದೆ. ಸಬ್ ಕಮಿಟಿಯವರು ಮೀಟಿಂಗ್ ಇಟ್ಟುಕೊಂಡು ಇಂತಿಂಥವರಿಗೆ ಹೀಗೆ ಹೀಗೆ ಅಲಾಟ್ ಮಾಡಬೇಕೆಂದು ತೀರ್ಮಾನ ಮಾಡಿದ್ದು ೧೨-೩-೧೯೬೩ ರಲ್ಲಿ, ೧೮ ನೇ ತಾರಿಖು ಬೋರ್ಡ್ ಮೀಟಿಂಗ್ ಕರೆದಿದ್ದರು. ಅಧ್ಯಕ್ಷರು ಆ ದಿನ ಫೋನ್ ಮಾಡಿದರು. ೩೧-೩-೧೯೬೩ ರಕ್ಕೆ ಒಳಗಾಗಿ ಹಣ ಕೊಡದಿದ್ದರೆ ಲ್ಯಾಪ್ಸ್ ಆಗುತ್ತದೆ. ಬಡವರಿಗೆ ತೊಂದರೆಯಾಗುತ್ತದೆ ಎಂಬ ದೃಷ್ಟಿಯಿಂದ ಜಿಲ್ಲಾಧಿಕಾರಿಗಳು ಇನ್‌ಸ್ಟ್ರಕ್ಷ್ ಕೊಟ್ಟು ಸಬ್ ಕಮಿಟಿ ರೆಕಮೆಂಡೇಶನ್ ಇಂಪ್ಲಿಮೆಂಟ್ ಮಾಡಿ ಎಂದು ಹೇಳಿದರು.

**ಶ್ರೀ ಕೆ.ಆರ್.ಶಿವಲಿಂಗೇಗೌಡ** – ಅಧ್ಯಕ್ಷರು ಬೋರ್ಡ್ ಮುಂದೆ ತಂದರೆ ತಮಗೆ ಬಹುಮತ ಇಲ್ಲ. ತಮಗೆ ಬೇಕಾದವರಿಗೆ ಹಂಚುವುದಕ್ಕೆ ಅಗುವುದಿಲ್ಲ ಎಂಬ ದೃಷ್ಟಿಯಿಂದ ಅಲ್ಲವೇ ಸಭೆಯನ್ನು ಮುಂದುವರೆಸಿದ್ದು.

**ಶ್ರೀ ಕೊಂಡಜ್ಜಿ ಬಸಪ್ಪ:** ಅದರ ಬಗ್ಗೆ ನನಗೆ ಗೊತ್ತಿಲ್ಲ ಸರ್,

**ಶ್ರೀ ಎಂ.ಸಿ.ಬಸಪ್ಪ:** ತಾಲ್ಲೂಕು ಬೋರ್ಡ್ ಹಣ ಲ್ಯಾಪ್ಸ್ ಆಗುತ್ತದೆ ಎಂದರೆ ಏನು ?

**ಶ್ರೀ ಎಂ.ಎ. ಕೃಷ್ಣ ಸಿಂಗ್** – ಈ ರೀತಿ ಲ್ಯಾಪ್ಸ್ ಆಗುವುದರಿಂದ ತೊಂದರೆಯಾಗುತ್ತದೆ ಎಂಬುದನ್ನು ಮನಗಂಡು ಈ ಹಣವನ್ನು ತಾಲ್ಲೂಕು ಬೋರ್ಡಿಗೆ ವಹಿಸುವ ಏರ್ಪಾಡು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಸೋಷಿಯಲ್ ವೆಲ್‌ಫೇರ್ ಬೋರ್ಡ್ ಗ್ರಾಂಟ್ ಇದೆ. ಆ ವರ್ಷದಲ್ಲಿ ಉಪಯೋಗಿಸದಿದ್ದರೆ ಅದು ಲ್ಯಾಪ್ಸ್ ಆಗುತ್ತದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಪ್ರಶ್ನೆಯಿಂದ ಇದು ಉದ್ಭವವಾಗುವುದಿಲ್ಲ. ಇದು ಪ್ರತ್ಯೇಕ ಪ್ರಶ್ನೆಯಾಗಿದೆ.

**ಶ್ರೀ ಕೆ.ಲಕ್ಕಪ್ಪ:** ಸೋಷಿಯಲ್ ವೆಲ್‌ಫೇರ್ ಆಫೀಸರ್ ಎಷ್ಟು ಜನಕ್ಕೆ ಹಣ ಕೊಡಬೇಕೆಂದು ಆ ತಾಲ್ಲೂಕಿನಲ್ಲಿ ಶಿಫಾರಸ್ಸು ಮಾಡಿದ್ದರು?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ನಿರ್ದಿಷ್ಟ ಪ್ರಕರಣದಲ್ಲಿ, ಆ ಮಾಹಿತಿಯು ಲಭ್ಯವಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ನಿರ್ದಿಷ್ಟ ಪರಿಸ್ಥಿತಿಯನ್ನು ನೋಡಬೇಕಾಗುತ್ತದೆ ಈ ವಿಷಯದಲ್ಲಿ ಅವರು ವೀಕರ್ ಸೆಕ್ಷನ್ ಪೀಪಲ್ ಮತ್ತು ಅವರಿಗೆ ಸಹಾಯವಾಗುತ್ತದೆ.

**ಶ್ರೀ ವಿ.ಎಂ.ದೇವ್ –** ಫೆಬ್ರುವರಿಯಲ್ಲಿ ಹಣ ಒದಗಿಸಿ, ಮಾರ್ಚಿಯಲ್ಲಿ ಖರ್ಚು ಮಾಡಬೇಕೆಂದು ಹೇಳಿದಿರಿ. ಇನ್ನೊಬ್ಬರ ಮೇಲೆ ತಪ್ಪು ಹಾಕುವುದಕ್ಕೆ ಹೋಗಿದ್ದೀರಿ. ಹಣ ಒದಗುವುದೇ ಬಹಳ ನಿಧಾನವಾಗಿ ಒದಗಿಸಿದ್ದಾರೆ. ಈ ತಪ್ಪು ಯಾರದು ಅಂತ ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ –** ೧೨ ನೇ ತಾರೀಖು ಸಬ್ ಕಮಿಟಿ ಮೀಟಿಂಗ್ ಮಾಡಿ ರೆಕಮಂಡೇಷನ್ ಮಾಡಿದರು. ೧೮ ನೇ ತಾರೀಖು ಬೋರ್ಡ್ ಮೀಟಿಂಗ್ ಆಗಬೇಕಾಗಿತ್ತು. ನಾನು ಆಗಲೇ ಹೇಳಿದ ಕಾರಣಕ್ಕಾಗಿ ಆಗಲಿಲ್ಲ.

**ಶ್ರೀವಿ.ಎಂ.ದೇವ್ –** ಬಡವರಿಗೆ ದನಕರು ತೆಗೆದುಕೊಳ್ಳುವುದಕ್ಕೆ ಹಣ ಬೇಕಾಗುತ್ತದೆ ಎಂದು ಅವರು ಹಣ ಕೊಡುತ್ತಾರೆ. ಹಣ ಪಡೆದು ಅವರು ಹೋಗಿ ನೋಡಬೇಕು. ಮೀಟಿಂಗ್ ನಡೆಯುವುದೇ ಅಸಾಧ್ಯವಾಗುತ್ತದೆ. ತಮಗೆ ಅನುಭವ ಇದ್ದು ಹೇಳುತ್ತಾ ಇದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ –** ಫೆಬ್ರುವರಿಯಲ್ಲಿ ಕೊಟ್ಟರೂ ಸಾಕು.

**ಶ್ರೀ ವಿ.ಎಂ.ದೇವ್ –** ವರ್ಷೇ ವರ್ಷೇ ಹೀಗೇ ಆಗುತ್ತಾ ಇದೆ. ಇದು ಒಂದೆ ವರ್ಷ ಅಲ್ಲ ಆದ್ದರಿಂದ ಇನ್ನುಮುಂಚೆ ಕೊಡಿಸಲು ಕಾರ್ಯಕ್ರಮ ತೆಗೆದುಕೊಳ್ಳುತ್ತೀರಾ? ಏನು ಕಾರ್ಯಕ್ರಮ ತೆಗೆದುಕೊಳ್ಳುತ್ತೀರಿ ಎಂಬುದನ್ನು ಹೇಳಿ?

**ಶ್ರೀ ಕೊಂಡಜ್ಜಿ ಬಸಪ್ಪ –** ಆದಷ್ಟು ಬೇಗ ಹಣ ವಿಲೇವಾರಿ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

**ಶ್ರೀ ಡಿ.ಮುನಿಚಿನ್ನಪ್ಪ:** ಸೋಷಿಯಲ್ ವೆಲ್‌ಫೇರ್ ಆಫೀಸರ್ ಇಷ್ಟಿಷ್ಟೇ ದುಡ್ಡು ಕೊಡಬೇಕೆಂದು ಆರ್ಡರ್ ಮಾಡಿ ಕಳುಹಿಸಿದ್ದಾರೆ. ಅಂದ ಮೇಲೆ ಈ ಕಮಿಟಿಗಳು ಇರಬೇಕೇ ಹೋಗಬೇಕೆ ಸ್ವಾಮಿ?

**ಶ್ರೀ ಕೊಂಡಜ್ಜಿ ಬಸಪ್ಪ:** ತಾಲ್ಲೂಕು ಬೋರ್ಡ್ ಆಕ್ಟ್ ನಲ್ಲಿ ಇಂತಿಂಥಾ ಕಮಿಟಿ ಮಾಡ ಬೇಕೆಂದು ಇದೆ. ಆ ಪ್ರಕಾರ ಮಾಡಿದ್ದಾರೆ. ಇದು ಇರಬೇಕಾಗುತ್ತದೆ.

**ಶ್ರೀ ಬಿ.ಎಲ್.ಗೌಡ** – ತಾಲ್ಲೂಕು ಬೋರ್ಡ್ ನ ಉಪ ಸಮಿತಿ ಅಂಗೀಕಾರ ಮಾಡಿದ ನಿರ್ಣಯದ ಮೇಲೆ ಅಭಿವೃದ್ಧಿ ಸಮಿತಿ ತೀರ್ಮಾನ ಮಾಡಬೇಕೆಂದಿರುವಾಗ ಅವರ ಅನುಮತಿ ಪಡೆಯಲಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಆಗಲೇ ಉತ್ತರ ಹೇಳಿದೆ. ೧೨ ನೇ ತಾರೀಖ್ ಸಬ್ ಕಮಿಟಿ ಮೀಟಿಂಗ್ ಆಯಿತು. ೧೮ ನೇ ತಾರೀಖು ಬೋರ್ಡ್ ಮೀಟಿಂಗ್ ಇಟ್ಟುಕೊಂಡಿದ್ದರು. ಅಧ್ಯಕ್ಷರು ಅವತ್ತಿನ ದಿವಸ ಬರಲಿಕ್ಕೆ ಅನಾನುಕೂಲವಾಯಿತು. ಆದ್ದರಿಂದ ಮೀಟಿಂಗ್ ಪೋಸ್ಟ್ ಪೋನ್ ಮಾಡಿದರು. ૩೧ ನೇ ತಾರೀಖಿಗೆ ಇಟ್ಟುಕೊಂಡಿದ್ದು. ಆದರೆ ૩೧ ನೇ ತಾರೀಖಿನ ಒಳಗೆ ಅಪ್ರೂವ್ ಮಾಡದಿದ್ದರೆ ಹಣ ತೆಗೆದುಕೊಳ್ಳುವುದಕ್ಕೆ ಅನಾನುಕೂಲವಾಗುತ್ತದೆ ಎಂಬ ದೃಷ್ಟಿಯಿಂದ ವಿಷಯವನ್ನು ಜಿಲ್ಲಾಧಿಕಾರಿಗಳ ಗಮನಕ್ಕೆ ತಂದರು. ಅವರು ಹಣ ಲ್ಯಾಪ್ಸ್ ಮಾಡಬೇಡಿ ಎಂದು ಚೀಫ್ ಎಕ್ಸಿಕ್ಯೂಟಿವ್ ಆಫೀಸರ್‌ಗೆ ತಿಳಿಸಿದರು. ಅವರು ಸಬ್ ಕಮಿಟಿ ರೆಕಮಂಡೇಶನ್ ಪ್ರಕಾರ ಹಣ ಹಂಚಿಕೆ ಮಾಡಿದರು.

**ಶ್ರೀ ಕೆ.ಲಕ್ಕಪ್ಪ:** ಅಧ್ಯಕ್ಷರಿಗೆ ಬರಲು ಅಡ್ಡಿ ಇದ್ದಿದ್ದ ಪಕ್ಷದಲ್ಲಿ ಸಭೆಯಲ್ಲಿರತಕ್ಕದು ಸದಸ್ಯರು ಯಾರಾದರು ಒಬ್ಬರನ್ನು ಪ್ರೆಸಿಡೆಂಟರನ್ನಾಗಿ ಮಾಡಿ ಮೀಟಿಂಗ್ ಮಾಡಲು ಕಷ್ಟ ಏನಿತ್ತು?

**ಶ್ರೀ ಕೊಂಡಜ್ಜಿ ಬಸಪ್ಪ** – ೧೮ ನೇ ತಾರೀಖು ಬೋರ್ಡು ಅನುಮತಿ ಇಲ್ಲದೆ ಜಿಲ್ಲಾಧಿಕಾರಿಗಳು ನೇರವಾಗಿ ತಮ್ಮ ಅಧಿಕಾರವನ್ನು ಚಲಾಯಿಸುವುದಕ್ಕೆ ಅಧಿಕಾರ ಇಲ್ಲ.

**ಶ್ರೀ ಡಿ.ಮುನಿಚಿನ್ನಪ್ಪ** – ಜಿಲ್ಲಾಧಿಕಾರಿಗಳು ಕಾಯಿದೆಯ ಯಾವ ಕಲಂ ಪ್ರಕಾರ ತಮ್ಮ ಅಧಿಕಾರವನ್ನು ಚಲಾಯಿಸಿದರು?

**ಶ್ರೀ ಕೊಂಡಜ್ಜಿ ಬಸಪ್ಪ** – ಕಾಯಿದೆ ಅಲ್ಲ, ಮೊದಲೇ ಹೇಳಿದಹಾಗೆ ಅನಾನುಕೂಲವಾಗುವ ಸಂದರ್ಭ ಇದೆ. ಗ್ರ್ಯಾಂಟು ಲ್ಯಾಪ್ಸ್ ಮಾಡಬಾರದು ಎಂಬ ಉದ್ದೇಶದಿಂದ ಸಬ್ ಕಮಿಟಿ ರೆಕಮಂಡೇಶನ್ ಪ್ರಕಾರ ಕೊಡಿ ಎಂದು ಹೇಳಿದರು.

**ಶ್ರೀ ಡಿ.ಮುನಿಚಿನ್ನಪ್ಪ** – ನಾನಾಗ ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯಲಿಲ್ಲ. ಈಗ ಆ ಸಬ್ ಕಮಿಟಿಯವರಿಗೆ ಬೇಕಾದವರಿಗೆ ಮಾತ್ರ ಗ್ರ್ಯಾಂಟುಗಳನ್ನು ಕೊಟ್ಟಿದ್ದಾರೆ. ಅಂಥಾವರ ಮೇಲೇನು ಕ್ರಮ ತೆಗೆದುಕೊಂಡಿದ್ದೀರೀ?

**ಶ್ರೀ ಕೊಂಡಜ್ಜಿ ಬಸಪ್ಪ** – ಈಗ ನಮ್ಮ ಗಮನಕ್ಕೆ ಬಂದಿರತಕ್ಕದ್ದು ಇದು ಒಂದೆ ಒಂದು ಸಂದರ್ಭ. ಬೇರೆ ಹಾಗೇನಾದರೂ ಅಕ್ರಮಗಳು ನಡೆದಲ್ಲಿ ಆ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುತ್ತೇವೆ.

**ಶ್ರೀ ಕೆ.ಪಿ.ರೇವಣಸಿದ್ದಪ್ಪ** – ಅಧ್ಯಕ್ಷರು ಅಪೇಕ್ಷೆ ಪಡತಕ್ಕವರಿಗೆ ಈ ಹಣವನ್ನು ಹಂಚಬೇಕೆಂದರೆ ಅದಕ್ಕೆ ಈ ಸದಸ್ಯರುಗಳು ಒಪ್ಪುವುದಿಲ್ಲವೆಂಬುದನ್ನು ತಿಳಿದು ಆ ಪ್ರೆಸಿಡೆಂಟರು ಈ ಮೀಟಿಂಗ್ ಕರೆಯುವುದೇ ಬೇಡ ಎಂದು ಕೈಬಿಟ್ಟಿದ್ದಾರೆ, ಎಂಬ ಅಂಶ ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ನಮ್ಮ ಗಮನಕ್ಕೆ ಬಂದಿಲ್ಲ.

**ಶ್ರೀ ಅಂಗಡಿ ಚನ್ನಬಸಪ್ಪ** – ಈಗ ತಾನೆ ಹಣವನ್ನು ಹಂಚಿಬಿಟ್ಟಿದ್ದಾರೆಂತ ಹೇಳೋಣವಾಯಿತು. ಹಾಗೆ ಅಕ್ರಮವಾಗಿ ಹಂಚಲಾಗಿದ್ದ ಹಣದ ಬಗ್ಗೆ ಅದನ್ನು ರೆಗ್ಯುಲರೈಸ್ ಮಾಡಲು ಇನ್ನೊಂದು ಸಾರ್ತಿ ಬೋರ್ಡು ಮೀಟಿಂಗ್‌ನ್ನು ನಡೆಸಬೇಕಾಗಿತ್ತು. ಹಾಗೆ ಮಾಡದೆ ಹಣ ಹಂಚಿರತಕ್ಕದ್ದು ಅಕ್ರಮವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಈ ತಿಂಗಳ ಮೀಟಿಂಗಿನಲ್ಲಿ ಅದನ್ನು ರೆಗ್ಯುಲರೈಸ್ ಮಾಡುತ್ತಾರೆ.

**ಶ್ರೀ ಅಂಗಡಿ ಚನ್ನಬಸಪ್ಪ** – ಇಂಥಾ ಪ್ರಸಂಗಗಳು ಅನೇಕ ಸಾರ್ತಿ ಬರಬಹುದು. ಈ ಸಂಬಂಧದಲ್ಲಿ ಸೂಕ್ತ ಅಧಿಕಾರವನ್ನು ಡೆಪ್ಯೂಟಿ ಕಮಿಷನರಿಗೆ ಕೊಡುವಂತೆ ಮಾಡಲು ಕಾಯಿದೆಯಲ್ಲಿ ಸೂಕ್ತ ತಿದ್ದುಪಡಿಯನ್ನು ಮಾಡಲಾಗುವುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ಅದರ ಬಗ್ಗೆ ಯೋಚನೆ ಮಾಡಿಲ್ಲ. ಭಾರತ ಸರ್ಕಾರದಿಂದ ನೇಮಕಗೊಂಡಿರುವ ಕಮಿಟಿಯು ಈ ಎಲ್ಲ ಮಗ್ಗಲುಗಳನ್ನು ಪರೀಕ್ಷಿಸುತ್ತಾರೆ ಹಾಗೂ ಅವಶ್ಯಕತೆಯಿದ್ದಲ್ಲಿ, ಅವರೇ ಕಾಯ್ದೆಗೆ ಕೆಲವು ತಿದ್ದುಪಡಿಗಳನ್ನು ಸೂಚಿಸುತ್ತಾರೆ.

**ಶ್ರೀ ಕೆ.ಆರ್.ಶಿವಲಿಂಗೇಗೌಡ** – ಈ ಕನಕಪುರ ಬೋರ್ಡಿನವರು ಈ ಕೆಲಸವನ್ನು ಸರಿಯಾಗಿ ಮಾಡುತ್ತಿಲ್ಲವೆಂಬ ಅಂಶ ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಒಂದು ಕೇಸಿನಲ್ಲಿ ಮಾತ್ರ ತಕರಾರು ಬಂದಿದೆ. ಆದರೆ ಇನ್ನೊಂದು ಸಂದರ್ಭದಲ್ಲಿ ಒಬ್ಬ ಹರಿಜನರಿಗೆ ಈ ಗ್ರ್ಯಾಂಟ್ ಹಂಚುವುದರಲ್ಲಿ ಸ್ವಲ್ಪ ತಕರಾರಾಗುತ್ತದೆಂದು ಮಾತ್ರ ನಮ್ಮ ಗಮನಕ್ಕೆ ಬಂದಿದೆ. ಇಷ್ಟು ಹೊರತು ಮತ್ತೇನೂ ನಮ್ಮ ಗಮನಕ್ಕೆ ಬಂದಿಲ್ಲ.

# ವಸತಿ ಸಹಕಾರ ಸಂಘ

**1ನೇ ಏಪ್ರಿಲ್ 1963**

**ಶ್ರೀ ಜಿ.ದುಗ್ಗಪ್ಪ (ಹೊಳಲ್ಕರೆ):**

ಅ. 1961–61 ರಿಂದ ಎಸ್.ಸಿ ಮತ್ತು ಎಸ್.ಟಿಗಳ ಪ್ರಯೋಜನಕ್ಕಾಗಿ ರಾಜ್ಯದಲ್ಲಿ ಹೌಸ್ ಬಿಲ್ಡಿಂಗ್ ಸೊಸೈಟಿಗಳನ್ನು ಸಂಘಟಿಸಲಾಗಿದೆಯೇ?

ಆ. ಹೌದು ಎಂದಲ್ಲಿ, ಅಂಥ ಕೊ–ಆಪರೇಟಿವ್ ಸೊಸೈಟಿಗಳ ಸಂಖ್ಯೆ.

ಇ. 1961–62 ಮತ್ತು 1962–63 ರಲ್ಲಿ ಸರ್ಕಾರದಿಂದ ಯಾವುದೇ ಲೋನ್ ಅಥವಾ ಹಣಕಾಸಿನ ಸಹಾಯವನ್ನು ಈ ಕೋ–ಆಪರೇಟಿವ್ ಸೊಸೈಟಿಗಳಿಗೆ ನೀಡಲಾಗಿದೆಯೇ?

ಈ. ಈ ಪ್ರಾಥಮಿಕ ಸಂಘ / ಪ್ರೈಮರಿ ಸೊಸೈಟಿಗಳಿಗೆ ಲೋನ್ ನೀಡಿದ ಹಣಕಾಸಿನ ಏಜನ್ಸಿ ಯಾವುದು?

**ಶ್ರೀ ಕೊಂಡಜ್ಜಿ ಬಸಪ್ಪ:** (ಸಹಕಾರ ಶಾಖೆಯ ಉಪಮಂತ್ರಿ) (ಶ್ರೀ ರಾಮಕೃಷ್ಣ ಹೆಗಡೆಯವರ ಪರವಾಗಿ (ಸಹಕಾರ ಮತ್ತು ಅಭಿವೃದ್ಧಿ ಶಾಖೆಯ ಮಂತ್ರಿ)

ಅ. ಹೌದು ಆ. 63 ಇ. ಹೌದು ಈ. ಸರ್ಕಾರ

**ಶ್ರೀ ಸಂಜೀವನಾಥ ಐತಾಳ:** ಲೋನ್ಸ್ ಮತ್ತು ಗ್ರ್ಯಾಂಟ್ಸ್ ಆಗಿ ಕೊಟ್ಟಿರುವ ಒಟ್ಟು ಹಣವೆಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ರೂ 4,69,490/–

**ಶ್ರೀ ಬಿ.ಡಿ. ಜತ್ತಿ(ಹಣಕಾಸು ಮಂತ್ರಿ):** ಸರ್, ಸರ್ಕಾರವು ಈ ವಿಷಯದಲ್ಲಿ ತನಿಖೆ ನಡೆಸುತ್ತದೆ ಹಾಗೂ ಸರಿಯಾದ ವಿಷಯವನ್ನು ವಾಸ್ತವಾಂಶವನ್ನು ಕಂಡುಹಿಡಿದು, ಕಾನೂನಿನ ಪ್ರಕಾರ ಅವಶ್ಯಕ ಕ್ರಮವನ್ನು ಕೈಗೊಳ್ಳುತ್ತೇವೆ.

**ಶ್ರೀ ಜೆ.ಪಿ.ಸರ್ವೆಶ್:** ಸರ್, ಫೈನಾನ್ಷಿಯಲ್ ಲೋನ್‌ನ ನೆರವನ್ನು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ವೀಕರಿಸಿದವರ ಸಂಖ್ಯೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಅಲ್ಲಿ ಯಾವುದು ಇಲ್ಲ. ಸರ್,

**ಶ್ರೀ ಬಿ. ನಂಜಪ್ಪ:** ಸೊಸೈಟಿಯು ರೂಲ್ಸ್ ಮತ್ತು ಬೈಲಾಗಳು ಪ್ರಿಂಟ್ ಆಗುತ್ತಿವೆ ಎಂದು ಹೇಳಿದ್ದೀರ ಆದು ಆಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಮಾದರಿ ಬೈಲಾಗಳನ್ನು ರಚಿಸಲಾಗಿದೆ.

**ಶ್ರೀ ಅಂಗಡಿ ಚನ್ನಬಸಪ್ಪ:** ಬಿಲ್ಡಿಂಗ್ ಸೊಸೈಟಿಗಳಿಗೆ ಸಾಲ ಕೊಡುವಾಗ ನಿಗದಿ ಮಾಡತಕ್ಕ ಸ್ಥಳದಲ್ಲಿಯೇ ಮನೇ ಕಟ್ಟಬೇಕೆ ಅಥವಾ ಊರಿನಲ್ಲಿ ಎಲ್ಲಿ ಕಟ್ಟಿದರೂ ಸಾಲ ಕೊಡುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಸೊಸೈಟಿಯವರು ಅವರಿಗೆಲ್ಲ ಒಂದೊಂದು ಸೈಟ್ ಕೊಟ್ಟಿರುತ್ತಾರೆ. ಅದರಲ್ಲಿ ಮನೆಕಟ್ಟಿ ಬಡಾವಣೆ ಮಾಡಲು ಪ್ರಪೋಸಲ್ ಕಳಿಸಿದ್ದಾರೆ.

**ಶ್ರೀ ಜೆ.ಎಲ್.ಕಬಾಡಿ:** 1955ರಲ್ಲಿ ಬಾಂಬೆ ಕರ್ನಾಟಕ ಪ್ರದೇಶದಲ್ಲಿ ಸೊಸೈಟಿಗಳು ಪೋಸ್ಟ್‌ವಾರ್ ರಿಕನ್‌ಸ್ಟ್ರಕ್ಷನ್ ಸ್ಕೀಮ್ 219ರಲ್ಲಿ ರಿಜಿಸ್ಟರ್ ಆಗಿವೆ. ಸುಮಾರು 20 ಸೊಸೈಟಿಗಳು ರಿಜಿಸ್ಟರ್ ಆಗಿವೆ, ಆದರೆ ಅವುಗಳಿಗೆ ಹಣವನ್ನು ನೀಡಲಾಗಿಲ್ಲ. ಈ ಸೊಸೈಟಿಗಳಿಗೆ ಎಷ್ಟು ಹಣವನ್ನು ಕಾಯ್ದಿರಿಸಲಾಗಿದೆ ಎಂದು ನಾನು ತಿಳಿದು ಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ಈ ವರ್ಷದಲ್ಲಿ 4,69,409 ರೂಪಾಯಿಗಳಲ್ಲಿ ಆ ಸ್ಕೀಮ್‌ನಲ್ಲಿ ರಿಜಿಸ್ಟ್ರಾರ್ ಆದ ಈ ಸೊಸೈಟಿಗಳಿಗೆ 2,37,339=59 ರೂಪಾಯಿಗಳನ್ನು ಕೊಡಲಾಗಿದೆ/ಕೊಟ್ಟಿದ್ದೇವೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಈ ದೇಶದಲ್ಲಿರುವ ಹರಿಜನರಿಗಾಗಿ ಮನೆ ಕಟ್ಟಿಕೊಳ್ಳಲು ಎಷ್ಟು ಸೊಸೈಟಿ ಗಳಾಗಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿಯೊಂದು ತಾಲ್ಲೂಕಿನಲ್ಲಿ ಒಂದು ಸೊಸೈಟಿ ಇರಬೇಕು ಎಂದು ಹೇಳಿದ್ದೇವೆ ಆದ್ದರಿಂದ ನಮ್ಮಲ್ಲಿ 172 ಸೊಸೈಟಿಗಳಿವೆ. ಈಗ ರಿಜಿಸ್ಟ್ರಾರ್ ಆಗಿರುವ ಸೊಸೈಟಿಗಳು 63 ಇವೆ. ಉಳಿದ ಸೊಸೈಟಿಗಳು ರಿಜಿಸ್ಟರ್ ಆಗಬೇಕು.

**ಶ್ರೀ ವಿ.ಮುಸಿಯಪ್ಪ:** ೧೯೬೧–೬೨ ನೇ ಸಾಲಿನಲ್ಲಿ ಚಿತ್ರದುರ್ಗದಲ್ಲಿ ಎಷ್ಟು ಸೊಸೈಟಿಗಳು ರಿಜಿಸ್ಟರ್ ಆಗಿವೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಐದು ಸೊಸೈಟಿಗಳು ರಿಜಿಸ್ಟರ್ ಆಗಿವೆ.

**ಶ್ರೀ ವಿ.ಮುಸಿಯಪ್ಪ:** ಈ ಐದು ಸೊಸೈಟಿಗಳಿಗಾಗಿ ಎಷ್ಟು ಹಣ ಸಾಲವಾಗಿ ಕೊಟ್ಟಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೋದ ವರ್ಷ ಹಣ ಕೊಡುವುದಕ್ಕಾಗಲಿಲ್ಲ. ಈ ವರ್ಷದಲ್ಲಿ ನೋಡಿಕೊಂಡು ಕೊಡಬಹುದು.

**ಶ್ರೀಮತಿ ಚಂಪಾಬಾಯಿ ಬೋಗಲೆ** – ನಮ್ಮ ಭಾಗದಲ್ಲಿರುವ ಸೊಸೈಟಿಗಳು ರಿಜಿಸ್ಟರ್ ಆಗಿ ಎಷ್ಟು ದಿನಗಳಾಗಿವೆ ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಗೊತ್ತಿಲ್ಲ.

**ಶ್ರೀಮತಿ ಚಂಪಾಬಾಯಿ ಬೋಗಲೆ** – ಪೋರಾಪುರದಲ್ಲಿ ಹತ್ತು ಹದಿನೈದು ಜನರು ಸೇರಿಕೊಂಡು ಸೊಸೈಟಿ ಮಾಡಿಕೊಂಡಿದ್ದರೂ ಅವರಿಗೆ ಹಣ ಇನ್ನು ಮಂಜೂರಾಗಿಲ್ಲ ಎನ್ನುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ೯.೦೦೦ ರೂಪಾಯಿಗಳ ಸಾಲಕ್ಕಾಗಿ ರೆಕಮೆಂಡೇಷನ್ ಬಂದಿದೆ. ಅದನ್ನು ಪರಿಶೀಲನೆ ಮಾಡಲಾಗುತ್ತಿದೆ.

**ಶ್ರೀಮತಿ ಚಂಪಾಬಾಯಿ ಬೋಗಲೆ** – ಷೋರಾಪುರ ಹೌಸಿಂಗು ಸೊಸೈಟಿಗಾಗಿ ಕೇಂದ್ರ ಸರ್ಕಾರದವರು ಸಬ್‌ಸಿಡಿಯಾಗಿ ಈ ಸರಕಾರಕ್ಕೆ ಹಣ ಕೊಟ್ಟಿರುವುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವರ್ಷ ಅಂದರೆ ೧೯೬೩ ನೇ ಮಾರ್ಚಿಯಲ್ಲಿ ೧೬.೦೬೨ ರೂಪಾಯಿಗಳನ್ನು ಮಂಜೂರು ಮಾಡಲಾಗಿದೆ.

**ಶ್ರೀ ಜೆ.ಎಲ್.ಕಬಾಡಿ:** ಬಿಜಾಪುರದಲ್ಲಿರುವ ಲಂಬಾಣಿಗಳು, ಹನ್ನೆರಡು ಸೊಸೈಟಿಗಳನ್ನು ರಿಜಿಸ್ಟರ್ ಮಾಡಿಸಿಕೊಂಡು ಎಂಟು ವರ್ಷಗಳಾದರೂ ಅವರಿಗೆ ಸಾಲವಾಗಿ ಹಣ ಮಂಜೂರಾಗಿಲ್ಲ. ಮುಂದಿನ ವರ್ಷದಲ್ಲಾದರೂ ಬೇಗನೆ ಮಂಜೂರು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ನಾವು ನೋಡುತ್ತೇವೆ. ಎಷ್ಟು ಸಾಧ್ಯವೋ ಅಷ್ಟು ಬೇಗ ಕ್ರಮ ತೆಗೆದುಕೊಳ್ಳುತ್ತೇವೆ.

**ಶ್ರೀ ಜೆ.ಎಲ್.ಕಬಾಡಿ:** ನಾನು ಸಮಂಜಸವಾದ ಉತ್ತರವನ್ನು ಪಡೆಯಲಿಲ್ಲ.

**ಸಭಾಧ್ಯಕ್ಷರು:** ಅವರು ತುಂಬಾ ಸ್ಪಷ್ಟವಾಗಿ ಉತ್ತರ ಕೊಟ್ಟರು.

**ಶ್ರೀಬಿ.ಚೆನ್ನಬೈರೇಗೌಡ** – ಎಷ್ಟೋ ಕಡೆಗಳಲ್ಲಿ ಈ ರೀತಿ ಸೊಸೈಟಿಗಳನ್ನು ಮಾಡಿ ಅದಕ್ಕೆ ಅಲ್ಲಿರುವ ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟರನ್ನು ಅಧ್ಯಕ್ಷರನ್ನಾಗಿ ಮಾಡಿರುವುದರಿಂದ ಈ ರೀತಿ ತೊಂದರೆಗಳಾಗುತ್ತಿವೆಯಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಕಾನೂನು ತಿದ್ದುಪಡಿಯಿಂದ ಮಾತ್ರವೇ ಇದನ್ನು ಮಾಡಬೇಕು ಎಂದು ನಾವು ತಿಳಿಸಿದ್ದೇವೆ. ಬೈ–ಲಾಗಳನ್ನು ತಿದ್ದುಪಡಿ ಮಾಡಿ ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟ್ ಅವರನ್ನು ಸೊಸೈಟಿಯ ಪ್ರೆಸಿಡೆಂಟ್ ಆಗಿ, ತಾಲ್ಲೂಕಿನ

ಸಮಾಜ ಕಲ್ಯಾಣ ಇನ್‌ಸ್ಪೆಕ್ಟರ್ ರವರು ಸೊಸೈಟಿಯ ಜಂಟಿ ಕಾರ್ಯದರ್ಶಿ ಆಗಿ ಇಟ್ಟುಕೊಳ್ಳಲು ನಾವು ನಿರ್ದೇಶನಗಳನ್ನು ನೀಡಿದ್ದೇವೆ.

**ಶ್ರೀ ಎಸ್.ಭೀಮಣ್ಣ:** ಹೈದರಾಬಾದ್ ಕರ್ನಾಟಕದಲ್ಲಿ ಒಂದು ಸೊಸೈಟಿಯೂ ರಿಜಿಸ್ಟರ್ ಆಗಿಲ್ಲ ಎಂದು ಹೇಳಿದಿರಿ. ಆದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಪ್ರದೇಶಕ್ಕೆ ಲೋನ್ ಗ್ರ್ಯಾಂಟ್ ಮಾಡಲು ರಿಜಿಸ್ಟ್ರಾರ್‌ರವರಿಂದ ಶಿಫಾರಸ್ಸುಗಳು ಇಲ್ಲ.

**ಶ್ರೀ ಗೋಪಾಲ ಸಾಲ್ವೆನ್ಸ:** ಈಗತಾನೇ ಸರ್ಕಾರ ಹೇಳಿದಂತೆ ಲಕ್ಷಗಟ್ಟಲೆ ಹಣವನ್ನು ಹರಿಜನರಿಗೆ ಮನೆಗಳನ್ನು ಕಟ್ಟಿಕೊಳ್ಳಲು ಕೊಡುತ್ತೇವೆಂದು ಹೇಳಿವರೂ ನಮ್ಮ ಸೌತ್ ಕೆನರಾದಲ್ಲಿರುವ ಮಂಗಳೂರು ಸೊಸೈಟಿಗೆ ಇನ್ನೂ ಸಾಲವನ್ನು ಏಕೆ ಕೊಡಲಿಲ್ಲ?

**ಶ್ರೀ ಕೊಂಡಜ್ಜಿ ಬಸಪ್ಪ:** ಸಮಗ್ರ/ಪೂರ್ಣ ಸೊಸೈಟಿ.

**ಶ್ರೀ ಗೋಪಾಲರಾವ್ ಮುಡುಬಿ** – ಹೈದರಾಬಾದು ಕರ್ನಾಟಕದಲ್ಲಿ ಎಷ್ಟು ಸೊಸೈಟಿಗಳು ರಿಜಿಸ್ಟರಾಗಿವೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಬೀದರ್ ನಲ್ಲಿ ಒಂದು ಸೊಸೈಟಿ ರಿಜಿಸ್ಟರಾಗಿದೆ.

**ಶ್ರೀಮತಿ ಚಂಪಬಾಯಿ ಬೋಗಲೆ** – ಷೋರಾಪುರ ಬೋರ್ಡು ಸೊಸೈಟಿಗೆ ಈ ಸಾರಿಯಾದರೂ ಸಾಲ ಮಂಜೂರು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಈ ವರ್ಷ ಬರಬಹುದು.

**ಶ್ರೀ ಟಿ.ಮಾದಯ್ಯ ಗೌಡ** – ಹರಿಜನರ ಸೊಸೈಟಿಗಳಿಗೆ ಸಾಲ ಕೊಡುವಾಗ ಹಣ ಕೊಡುವುದಕ್ಕೆ ಬದಲಾಗಿ ಅವರಿಗೆ ಮನೆಕಟ್ಟಲು ಬೇಕಾಗುವಂತಹ ಸಾಮಾನುಗಳನ್ನು ಒಟ್ಟಿಗೆ ಒದಗಿಸಿ ಸಹಾಯಮಾಡುವುದು ಮೇಲಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಮೊದಲು ಈ ಪದ್ಧತಿ ಇತ್ತು. ಆದರೆ ಈ ಸ್ಕೀಮಿನಿಂದ ಹೆಚ್ಚಿನ ಉಪಯೋಗವಾಗುವುದಿಲ್ಲ ಎಂದು ರೆಪ್ರೆಸೆಂಟೇಷನ್ನು ಬಂದುದರಿಂದ ಲೋನ್ ಅನ್ನು ಕೊಡುವಾಗ ಅವರಿಗೆ ಸ್ಪೆಷಲ್ಲಾಗಿ ಶೇಕಡಾ ಎರಡರಷ್ಟು ಬಡ್ಡಿ ಮೇಲೆ ಈ ಸೊಸೈಟಿಗಳಿಗೆ ಕೊಡಬೇಕೆಂದು ಯೋಚನೆ ಮಾಡಲಾಗಿದೆ. ಹಿಂದೆ ಒಂದು ನೂರು ರೂಪಾಯಿಗಳಷ್ಟು ಮರದ ಸಾಮಾನುಗಳನ್ನು ಅರಣ್ಯದಿಂದ ಮುಫತ್ತಾಗಿ ಕೊಡುವ ಯೋಚನೆಯೂ ಇತ್ತು. ಆದರೆ ಈ ಹೊಸ ಸ್ಕೀಮಿನಿಂದ ಉಪಯೋಗವಿಲ್ಲದೇ ಇದ್ದರೆ, ಬೇಕಾದರೆ ಪುನಃ ಹಿಂದೆ ಇದ್ದ ಹಳೇ ಪದ್ಧತಿಯನ್ನು ಜಾರಿಗೆ ತರಬೇಕೆಂದು ಯೋಚನೆ ಮಾಡಬಹುದು.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ತಾಲ್ಲೂಕು ಬೋರ್ಡ್ ಪ್ರೆಸಿಡೆಂಟರನ್ನು ಈ ಸೊಸೈಟಿ ಅಧ್ಯಕ್ಷರನ್ನಾಗಿ ಮಾಡಿರುವುದರಿಂದ ಇಲ್ಲಿ ಹಣ ದುರುಪಯೋಗವಾದರೆ ಯಾರನ್ನು ಜವಾಬ್ದಾರರನ್ನಾಗಿ ಮಾಡುತ್ತೀರಿ?

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ಸಮಗ್ರ/ಪೂರ್ಣ ಸೊಸೈಟಿಯೆಂದು ಎಲ್ಲಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಬೈ–ಲಾವನ್ನು ತಿದ್ದುಪಡಿ ಮಾಡದೇ ಅವರು ಪ್ರೆಸಿಡೆಂಟ್ ಆಗುವುದಿಲ್ಲ.

**ಶ್ರೀ ಅಂಗಡಿ ಚನ್ನಬಸಪ್ಪ–** ಹೌಸಿಂಗ್ ಸೊಸೈಟಿಗಳನ್ನು ಯಾವ ಕಾಯಿದೆ ಪ್ರಕಾರ ರಿಜಿಸ್ಟರ್ ಮಾಡಿದ್ದಾರೆ?

**ಶ್ರೀ ಬಿ.ಡಿ.ಜತ್ತಿ:** ಮಾನ್ಯ ಸದಸ್ಯರು ಯಾವಾಗಲೂ 'ಆದರ' ಬಗ್ಗೆ ಮಾತಾಡುತ್ತಾರೆ. ನಾನು ಹೇಳುವುದೇನೆಂದರೆ:ಕುದುರೆಗಳು ಭರವಸೆಗಳಾದರೆ ' ಯಾರಾದರೂ ಅವುಗಳ ಮೇಲೆ ಸವಾರಿ ಮಾಡುತ್ತಾರೆ'.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ಸೊಸೈಟಿಗಳಲ್ಲಿ ತಾಲ್ಲೂಕು ಬೋರ್ಡಿನ ಅಧ್ಯಕ್ಷರನ್ನು ಅಲ್ಲಿಯೂ ಪ್ರೆಸಿಡೆಂಟರನ್ನಾಗಿ ಮಾಡಿ ಅಲ್ಲಿ ಹಣ ದುರುಪಯೋಗವಾದರೆ ಯಾವ ಕಾನೂನು ಪ್ರಕಾರ ಅವರ ಮೇಲೆ ಕ್ರಮ ತೆಗೆದುಕೊಳ್ಳಲು ಅವಕಾಶವಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಮೊದಲೇ ತಮಗೆ ಹೇಳಿದ ಹಾಗೆ, ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟರನ್ನಲ್ಲದೇ ಬೇರೆಯವರನ್ನು ಅಧ್ಯಕ್ಷರನ್ನಾಗಿ ಮಾಡಲು ಬೈಲಾವನ್ನು ಅಮೆಂಡು ಮಾಡಿಕೊಳ್ಳಬೇಕು. ಅಮೆಂಡುಮೆಂಟು ಮಾಡಿಕೊಳ್ಳದೆ ಇರುವಾಗ ಇಲ್ಲಿರುವ ಆಫೀಸು ಬೇರರಗಳು ಅಂದರೆ ಪ್ರೆಸಿಡೆಂಟರು, ಸೆಕ್ರೆಟರಿ ಎಂದಿರುವವರೇ ಜವಾಬುದಾರರಾಗಿರುವರು.

**ಶ್ರೀ ಬಿ.ಎಲ್.ಗೌಡ –** ಶಿರಹಟ್ಟಿಯಲ್ಲಿರುವ ಒಂದು ಸೊಸೈಟಿಯಲ್ಲಿ ಸುಮಾರು ೩೩.೦೦೦ ರಷ್ಟು ಹಣ ದುರುಪಯೋಗವಾಗಿತ್ತು ಎಂದು ಹಿಂದೆ ಇಲ್ಲಿ ಪ್ರಶ್ನೆ ಬಂದಾಗ ಉತ್ತರ ಹೇಳಿದ್ದಿರಿ. ಆದರ ದುರುಪಯೋಗಕ್ಕೆ ಕಾರಣವಾದವರ ಮೇಲೆ ಜವಾಬುದಾರಿ ಹೊರಿಸಲು ಏನಾದರೂ ವ್ಯವಸ್ಥೆಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಕ್ರಮ ತೆಗೆದುಕೊಂಡಿದ್ದೇವೆ. ನಾವು ಮುಂದಿನ ಕ್ರಮವನ್ನು ತೆಗೆದುಕೊಳ್ಳುತ್ತೇವೆ.

**ಶ್ರೀ ಅಂಗಡಿ ಚನ್ನಬಸಪ್ಪ:** ಕೋ ಅಪರೇಟಿವ್ ಸೊಸೈಟಿಗಳಲ್ಲಿ ಯಾರಾದರೂ ಹಣವನ್ನು ದುರುಪಯೋಗ ಮಾಡಿಕೊಂಡರೆ ಅದಕ್ಕೆ ಟ್ರಿಬ್ಯುನಲ್ ಕೋರ್ಟು ಹಾಗೂ ರಿಜಿಸ್ಟ್ರಾರ್ ಕೋರ್ಟಿದೆ. ಆದರೆ ಈ ಆಕ್ಟಿನಂತೆ ಹಣ ವಸೂಲಿಗಾಗಿ ಯಾವ ನಿಯಮವೂ ಇಲ್ಲ ಅಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುತ್ತೇವೆ.

**ಶ್ರೀ ಅಂಗಡಿ ಚೆನ್ನಬಸಪ್ಪ:** ಅಂಥ ಕ್ರಮ ಕೈಗೊಳ್ಳಲು ಸೊಸೈಟಿ ಕಾಯ್ದೆಯ ಅಡಿಯಲ್ಲಿ ಯಾವುದೇ ವಿಧಿ/ನಿಯಮಗಳು ಇಲ್ಲ. ಡಿಫಾಲ್ಟರ್‍ಗಳಿಂದ ಹಣವನ್ನು ವಸೂಲಿ ಮಾಡಲು ಯಾವ ಪ್ರಕ್ರಿಯೆಯನ್ನು ಅಳವಡಿಸಿಕೊಳ್ಳುತ್ತಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಸೊಸೈಟಿಗಳು ಕೋ-ಆಪರೇಟಿವ್ ಸೊಸೈಟಿಸ್ ಕಾಯ್ದೆ ಅಡಿಯಲ್ಲಿ ರಿಜಿಸ್ಟರ್ ಆಗಿವೆ. ಕಾಯ್ದೆಯಲ್ಲಿ ವಸೂಲಿಗಾಗಿ ನಿಯಮಗಳಿವೆ.

**ಶ್ರೀ ಅಂಗಡಿ ಚನ್ನಬಸಪ್ಪ:** ತಾಲ್ಲೂಕು ಬೋರ್ಡ್ ಪ್ರೆಸಿಡೆಂಟನ್ನು ಸೊಸೈಟಿಯ ಪದನಿಮಿತ್ತ ಪ್ರೆಸಿಡೆಂಟ್ ಆಗಿ ಮಾಡಲೂ ಕಾಯ್ದೆಯು ತಿದ್ದುಪಡಿಯಾಗಬೇಕೇ ಎಂಬುದನ್ನು ತಿಳಿದುಕೊಳ್ಳುವ ಇಚ್ಛೆಯಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಹೇಳಿದ್ದೇನೆಂದರೆ, ಅದು ಅಲ್ಲ. ಸೊಸೈಟಿಯು ಇಚ್ಛಿಸಿದಲ್ಲಿ, ಬೈಲಾವನ್ನು ತಿದ್ದುಪಡಿ ಮಾಡಿ, ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟ್ ಸೊಸೈಟಿಯ ಪ್ರೆಸಿಡೆಂಟ್ ಆಗಲು ಅನುಮತಿ ಕೊಡಬೇಕು.

**ಶ್ರೀ ಅಂಗಡಿ ಚನ್ನಬಸಪ್ಪ:** ಸೊಸೈಟಿಯು ತಾಲ್ಲೂಕು ಬೋರ್ಡ್ ಚೇರ್‍ಮನ್‍ರವರನ್ನು ಇಟ್ಟುಕೊಳ್ಳುವ ಸರ್ಕಾರ ಯೋಚನೆಯಲ್ಲಿ ಐಚ್ಛಿಕ/ಕಡ್ಡಾಯವೇ.

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟ್‍ರವರನ್ನು ತರುವ ಯೋಚನೆಯು ಸೊಸೈಟಿಗೆ ಸಹಾಯವಾಗುತ್ತದೆ. ಏಕೆಂದರೆ ಅವರ ಬಳಿ ಆಫೀಸ್ ನಿರ್ವಹಣೆಗೆ ಸರಿಯಾದ ಸ್ಥಳ/ಜಾಗ ಮತ್ತು ಸಾಕಷ್ಟು ಹಣವಿಲ್ಲ. ಪ್ರಾರಂಭದ ಹಂತದಲ್ಲಿ ಸೊಸೈಟಿಗಳಿಗೆ ಸಹಾಯಮಾಡುವುದಕೊಸ್ಕರ ತಾಲ್ಲೂಕು ಬೋರ್ಡ್‍ನ ಪ್ರೆಸಿಡೆಂಟ್ ಯಾರೇ ಆಗಿರಲಿ ಮತ್ತು ಕಾರ್ಯದರ್ಶಿಯಾಗಿ ಸಹಕಾರ ವಿಸ್ತರಣಾ ಅಧಿಕಾರಿಯನ್ನು ತರಲು, ಸರಿಹೋಗುವಂತೆ ಬೈಲಾಗಳಿಗೆ ತಿದ್ದುಪಡಿ ಮಾಡಲು ನಾವು ಆಡಳಿತಾತ್ಮಕ ನಿರ್ದೇಶನಗಳನ್ನು ಕೊಟ್ಟಿದ್ದೆವು.

**ಸಭಾಧ್ಯಕ್ಷರು:** ಇದು ಕಷ್ಟಕರವಾದ ಪ್ರಶ್ನೆ. ಇವರು ಇದನ್ನು ಪರೀಕ್ಷಿಸಲಿ

**ಶ್ರೀ ಅಂಗಡಿ ಚನ್ನಬಸಪ್ಪ:** ತಾಲ್ಲೂಕು ಬೋರ್ಡಿನ ಪ್ರೆಸಿಡೆಂಟ್ ಆಸಕ್ತಿಯನ್ನು ತೆಗೆದುಕೊಳ್ಳದಿದ್ದಲ್ಲಿ, ಅವರನ್ನು ಇಟ್ಟಕೊಂಡು/ಯಾವ ಉದ್ದೇಶವನ್ನು ನೆರವೇರುತ್ತದೆ.

**ಸಭಾಧ್ಯಕ್ಷರು:** ಅದನ್ನು ಪರೀಕ್ಷಿಸಲು ಅವರನ್ನು ನೀವು ಕೇಳಬೇಕು.

**ಶ್ರೀ ಎಸ್. ಶಿವಪ್ಪ:** ತಾಲ್ಲೂಕು ಬೋರ್ಡ್ ಪ್ರೆಸಿಡೆಂಟ್‌ರವರನ್ನು ಇಟ್ಟುಕೊಳ್ಳುವುದು/ ಇರಿಸಿಕೊಳ್ಳುವುದು, ಕೋ–ಆಪರೇಟಿವ್ ಕಾಯ್ದೆಯಲ್ಲಿ ಯಾವ ನಿಯಮಕ್ಕೆ ಈ ತಿದ್ದುಪಡಿ ಬರುವುದು.

**ಸಭಾಧ್ಯಕ್ಷರು:** ಆ ಅಂಶವನ್ನು ಪರೀಕ್ಷಿಸಬೇಕಾಗಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಇತ್ತೀಚಿಗೆ ನಾವು ಕೆಲವು ಮನವಿಗಳನ್ನು ಸ್ವೀಕರಿಸಿದ್ದೇವೆ, ಅದೇನೆಂದರೆ ಸದಸ್ಯರು ಮಾತ್ರವೇ ಪ್ರೆಸಿಡೆಂಟ್ ಆಗಬಹುದು. ಇನ್ನು ಕೆಲವು ಪ್ರಕರಣಗಳಲ್ಲಿ ಬಿ.ಡಿ.ಓ. ರವರನ್ನು ಪ್ರೆಸಿಡೆಂಟ್ ಆಗಿ ಮಾಡಬೇಕು ಎಂದು ಹೇಳಿದ್ದಾರೆ. ಕಾನೂನು ಬದ್ಧವಾಗಿ, ಅಲ್ಲಿ ಬಿ.ಡಿ.ಓ. ರವರನ್ನು ತರಬೇಕಾ/ತಾಲ್ಲೂಕು ಬೋರ್ಡ್ ಪ್ರೆಸಿಡೆಂಟ್‌ರವರನ್ನು ಅಲ್ಲಿ ತರಬೇಕಾ ಎಂಬುದನ್ನು ಪರಿಕ್ಷೀಸಬೇಕು?

**ಶ್ರೀ ಎಸ್.ಎಮ್.ಕೃಷ್ಣ:** ಈಗ ತಾನೇ ಮಾನ್ಯ ಮಂತ್ರಿಯವರು ಅಂಥ ಸೊಸೈಟಿಗಳಿಗೆ ಆಡಳಿತಾತ್ಮಕ ನಿರ್ದೇಶನಗಳನ್ನು ನೀಡಲಾಗಿದೆ ಎಂದು ಹೇಳಿದರು.

## ಕಾಮಗಾರಿಯ ಮೇಲಿನ ಚರ್ಚೆ

**1ನೇ ಏಪ್ರಿಲ್ 1963**

**ಶ್ರೀ ಮಹಾಂತ ಸ್ವಾಮಿ(ಶಹಾಪೂರ)**

(a) ಮೊದಲು ಅಂಜಲ ಬಳಿ ಕೃಷ್ಣ ಸೇತುವೆ ಕಟ್ಟಲು ನಿರ್ಧರಿಸಿ ನಂತರ ತಿಂಥಣಿಗೆ ಬದಲಾಯಿಸಿದ್ದಕ್ಕೆ ಕಾರಣಗಳೇನು

(b) ಅಲ್ಲಿ ಬದಲಾವಣೆ ಇಲ್ಲದಿದ್ದಲ್ಲಿ ರಾಯಚೂರು ಮತ್ತು ಕಲ್ಬುರ್ಗಿ ನಡುವೆ ಕಮ್ಯೂನಿಕೆಷನ್ ಹತ್ತಿರವಾಗುತ್ತಿತ್ತು ಎಂಬುದು ಅವರಿಗೆ ತಿಳಿದಿತ್ತೇ.

(c) ಹಿಂದಿನ ಸ್ಥಳ/ಸೈಟ್ ಸರ್ವೆ ಮಾಡಿದ್ದರಿಂದ ಆಗಿರುವ ಖರ್ಚು.

**ಶ್ರೀ ಕೊಂಡಜ್ಜಿ ಬಸಪ್ಪ:**[ಸಹಕಾರ ಖಾತೆಯ ಉಪಮಂತ್ರಿ] [ಶ್ರೀ ವಿರೇಂದ್ರ ಪಾಟೀಲ್‌ರವರ ಪರವಾಗಿ(ಲೋಕೋಪಯೋಗಿ ಖಾತೆ ಮಂತ್ರಿ)]

(a) (1) ತಿಂಥಣಿಯಲ್ಲಿರುವ ಸೈಟು ನೇರವಾಗಿ ನದಿ ಸೇರುವಲ್ಲಿ ಇದೆ.

(2) ಸಮಂಜಸ/ಯೋಗ್ಯ ಆಳದಲ್ಲಿ ಒಳ್ಳೆಯ ಫೌಂಡೇಶನ್‌ನನ್ನು ನಿರೀಕ್ಷಿಸಿದ್ದೇವೆ.

(3) ಮತ್ತೊಂದು ಬದಿಯಲ್ಲಿ ಸೇತುವೆ ಕಟ್ಟಲಿಕ್ಕೆ ಬೇಕಾಗುವ ವಸ್ತುಗಳನ್ನು ಸಾಗಿಸಲು ಸೌಲಭ್ಯವಿದೆ.

(4) ಹತ್ತಿರದಲ್ಲೇ ನಿರ್ಮಾಣಕ್ಕೆ ಬೇಕಾಗುವ ವಸ್ತುಗಳ ಸೌಲಭ್ಯವಿದೆ.

(5) ಭೂಸ್ವಾಧೀನದ ತೊಂದರೆಯಿಲ್ಲ.

(b) ತಿಂಥಣಿಯಲ್ಲಿ ಸೇತುವೆ ಕಟ್ಟುವುದರಿಂದ ರಾಯಚೂರು ಮತ್ತು ಗುಲ್ಬರ್ಗಾದ ನಡುವೆ ಕಮ್ಯೂನಿಕೇಷನ್ ಸಾಧ್ಯವಾಗುತ್ತದೆ.

(c) ಮಾಹಿತಿಯು ಲಭ್ಯವಿಲ್ಲ.

**ಶ್ರೀ ಮಹಾಂತ ಸ್ವಾಮಿ** – ಈಗ ಕೃಷ್ಣ ಸೇತುವೆಗೆ ಮೊದಲು ಅಂಜಲದಲ್ಲಿ ಸರ್ವೆಮಾಡಿದ್ದರು ಎಂದು ತಿಳಿಸಿದ್ದೀರಿ. ಅದನ್ನು ತೆಗೆದು ತಿಂಥನಿಗೆ ಹಾಕುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಎಕ್ಸ್–ಹೈದ್ರಾಬಾದ್ ಸರ್ಕಾರವು ಪ್ರಸ್ತಾಪಿಸಿದ್ದ ಯೋಜನೆಯಾಗಿದೆ ಹಾಗೂ ಪ್ರಸ್ತಾಪಿಸಿರುವ ಯೋಜನೆಯಲ್ಲಿ ಪಿಲ್ಲರ್‌ಗಳನ್ನು

ಸಾಲಾಗಿ ಗುರುತಿಸಲಾಗಿದೆ. ರಾಜ್ಯಗಳ ರಚನೆಯ ನಂತರ ಎರಡು ಸೈಟುಗಳನ್ನು ಪ್ರಸ್ತಾಪಿಸಲಾಗಿದ್ದು–ಒಂದು ತಿಂಥಣಿಯ ಬಳಿ – ಮತ್ತೊಂದು ದಿಯೋದುರ್ಗದ ಬಳಿ, ಚೀಫ್ ಇಂಜನಿಯರ್‌ರವರು ಸೈಟ್ಸ್ ಪರಿಶೀಲನೆ ನಡೆಸಿ, ತಿಂಥಣಿಯ ಸೈಟನ್ನು ಆಯ್ಕೆಮಾಡಿ ಕೊನೆಯದಾಗಿ ತೀರ್ಮಾನ ತೆಗೆದುಕೊಂಡು ತಮ್ಮ ಉತ್ತರದಲ್ಲಿ ಆಧಾರಗಳನ್ನು ತಿಳಿಸಿದ್ದಾರೆ.

**ಶ್ರೀ ಮಹಾಂತ ಸ್ವಾಮಿ** – ಇದರ ನಿರ್ಮಾಣಕ್ಕೆ ಬೇಕಾದಂತ ಪದಾರ್ಥಗಳು ಅಲ್ಲಿಯೇ ಸಿಗುತ್ತಾ ಇರಲಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ನನಗೆ ಗೊತ್ತಿಲ್ಲ. ಆದರೆ ಸಮೀಪದ ರಸ್ತೆಗಳು ರೆಡಿಯಾಗಿ ಸಿಗುತ್ತದೆ, ವಸ್ತುಗಳು ಸುಲಭವಾಗಿ ದೊರಕುತ್ತವೆ ಹಾಗೂ ಅಲ್ಲಿ ಭೂ ಸ್ವಾಧೀನದ ಪ್ರಶ್ನೆಯೇ ಇಲ್ಲ – ಈ ಎಲ್ಲ ಅಂಶಗಳನ್ನು ಪರಿಗಣಿಸಿದ್ದೇವೆ. ಪ್ರಸ್ತಾಪಿಸಿದ ಸೈಟ್/ಜಾಗವು ಸರಿಯಾಗಿದೆ ಎಂದು ಸರ್ಕಾರಕ್ಕೆ ಅನಿಸಿದೆ.

**ಶ್ರೀ ಮಹಾಂತ ಸ್ವಾಮಿ** – ಈ ಸೇತುವೆ ನಿರ್ಮಾಣವನ್ನು ಕಂಟ್ರಾಕ್ಟರಿಗೆ ವಹಿಸಿತ್ತೋ, ಇಲ್ಲ ಇಲಾಖೆಯೇ ವಹಿಸಿಕೊಂಡಿತ್ತೋ?

**ಶ್ರೀ ಕೊಂಡಜ್ಜಿ ಬಸಪ್ಪ:** ನನ್ನ ಬಳಿ ಆ ಮಾಹಿತಿಯ ಲಭ್ಯತೆ ಇಲ್ಲ. ಸದಸ್ಯರು ಇಚ್ಛಿಸಿದಲ್ಲಿ ನಾನು ನೀಡುತ್ತೇನೆ.

**ಶ್ರೀ ಎಂ.ಹುಚ್ಚಮಾಸ್ತಿಗೌಡ** – ಈ ಸೇತುವೆ ಸ್ಥಳ ಬದಲಾಯಿಸಿರುವುದರಿಂದ ಗುಲ್ಬರ್ಗ ರಾಯಚೂರಿಗೆ ದೂರ ಎಷ್ಟು ವ್ಯತ್ಯಾಸವಾಗುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಲಭ್ಯವಿಲ್ಲ.

**ಶ್ರೀ ಸಿದ್ದಯ್ಯ ಕಾಶೀಮಠ** – ಎಸ್ಟಿಮೇಟು ಎಷ್ಟಾಗುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ** -- ೩೦ ಲಕ್ಷ ರೂಪಾಯಿ.

# ಹೈಲೆವಲ್ ಬ್ರಿಡ್ಜ್ ಕಟ್ಟುವ ಬಗ್ಗೆ

1ನೇ ಏಪ್ರಿಲ್ 1963

**ಶ್ರೀ ಕೆಂಚಪ್ಪ (ಪಾವಗಡ):–**

ಅ. ನಾರ್ಥ್ ಪೆನ್ನಾರ್ ನದಿಗೆ ಅಡ್ಡವಾಗಿ ಪಾವಗಡ ತಾಲ್ಲೂಕು ನಾಗಲಮಡಿಕೆಯ ಹತ್ತಿರ ಲೋ ಲೆವಲ್ ಕಾಲುವೆ ಕಟ್ಟಿಸುತ್ತಿರುವುದು ವಾಸ್ತವವಲ್ಲವೇ?

ಆ. ಮಳೆಗಾಲದಲ್ಲಿ 3 ರಿಂದ 4 ತಿಂಗಳು ನದಿಯಲ್ಲಿನ ಪ್ರವಾಹದಿಂದ ಸಂಚಾರ ಮತ್ತು ಕಮ್ಯೂನಿಕೇಷನ್ ನಿಂತು ಹೋಗುವುದರಿಂದ ಮತ್ತು ಈ ರೂಟಿನಲ್ಲಿ ಸಂಚರಿಸುತ್ತಿದ್ದ 2 ಬಸ್ಸುಗಳನ್ನು ನಿಲ್ಲಿಸಿರುವುದರಿಂದ ಆಗತ್ತಿರುವ ಅನಾನುಕೂಲಗಳು/ತೊಂದರೆಗಳು ಸರ್ಕಾರಕ್ಕೆ ತಿಳಿದಿದೆಯೇ?

ಇ. ಅಂಥ ತೊಂದರೆಗಳನ್ನು ತಡೆಗಟ್ಟಲು ಈಗ ಕಟ್ಟುತ್ತಿರುವ ಲೋಲೆವಲ್ ಕಾಲುವೆಯನ್ನು ಹೈಲೆವಲ್ ಬ್ರಿಡ್ಜ್ ಆಗಿ ಪರಿವರ್ತಿಸಲು ಯಾವುದಾದರೂ ಮನವಿಗಳನ್ನು ಅವರು ಸ್ವೀಕರಿಸಿದ್ದಾರಾ?

ಈ. ಸಂಬಂಧಪಟ್ಟ ಇಲಾಖೆಯವರು ಲೋಲೆವೆಲ್ ಕಾಲುವೆಯನ್ನು ಹೈಲೆವಲ್ ಬ್ರಿಡ್ಜ್ ಆಗಿ ಪರಿವರ್ತಿಸಲು ಕ್ರಮಂಗಳನ್ನು ತೆಗೆದುಕೊಂಡಿದ್ದಾರೆಯೇ ಹಾಗೂ ಎಷ್ಟು ಸಾಧ್ಯವೋ ಅಷ್ಟು ಬೇಗ ಕೆಲಸ ಕೈಗೆತ್ತುಕೊಳ್ಳಲಿ.

ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ) (ಶ್ರೀ ವಿರೇಂದ್ರ ಪಾಟೀಲ, ಪಬ್ಲಿಕ್ ವರ್ಕ್ಸ್ ಶಾಖೆಯ ಮಂತ್ರಿಯವರ ಪರವಾಗಿ):

ಅ. ಹೌದು ಆ. ಹೌದು ಇ. ಹೌದು ಈ. ಇಲ್ಲ.

**ಶ್ರೀ ಆರ್.ಕೆಂಚಪ್ಪ:** ಈ ನದಿಯು ಆಳವಾಗಿದ್ದು, ಪ್ರವಾಹ ಹಾವಳಿಯಿಂದ ಆಗುವ ತೊಂದರೆ ನಿವಾರಣೆ ಮಾಡಲು ಹೈ ಲೆವೆಲ್ ಕಾಲುವೆ ಮಾಡುವುದು ಒಳ್ಳೆಯದಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಅಭಿಪ್ರಾಯದ ವಿಷಯವಾಗಿದೆ. ಇದನ್ನು ಸರ್ಕಾರವು ವಿವರವಾಗಿ ಪರೀಕ್ಷಿಸಿದ್ದು, ಅಲ್ಲಿ ತುಂಬಾ ಕಡಿಮೆ ಶೇಕಡಾವಾರು ಮಳೆಯಾಗುತ್ತದೆ ಹಾಗೂ ಪ್ರವಾಹದ ಅವಧಿ ಕಡಿಮೆ ಅವಧಿಯದಾಗಿದೆ ಎಂದು ತಿಳಿದು ಬಂದು ಲೋಲೆವಲ್ ಕಾಲುವೆ ಸಾಕು ಎನಿಸುತ್ತದೆ. ಪ್ರವಾಹ ನಿಂತ ನಂತರ ಅನಾಮುಕೂಲವಾಗುವುದಿಲ್ಲ ಎಂಬುದು ತಿಳಿದು ಬಂದಿದೆ.

**ಶ್ರೀ ಆರ್.ಕೆಂಚಪ್ಪ:** ಮಳೆಗಾಲದಲ್ಲಿ ೩-೪ ತಿಂಗಳು ಪ್ರವಾಹದಿಂದ ಸಂಚಾರ ನಿಂತು ಹೋಗುವುದರಿಂದ ಈ ಪ್ರದೇಶದಲ್ಲಿಯ ಜನರಿಗೆ ಕೋರ್ಟು ಕಛೇರಿ ವ್ಯವಹಾರಕ್ಕೆ ಹೋಗಲು ಅನಾನುಕೂಲವಾಗುತ್ತದೆ. ಎಂಬುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅನಾನುಕೂಲವಾಗಿಲ್ಲ ಎಂದು ಹೇಳುವುದಿಲ್ಲ. ಅಲ್ಲಿ ಮಳೆ ಕಡಿಮೆಯಾಗುತ್ತದೆ. ಮಳೆಗಾಲದಲ್ಲಿ ಪ್ರವಾಹ ಬಂದಾಗ ಒಂದು ದಿವಸದ ಮಟ್ಟಿಗೆ ಸಂಚಾರ ತಡೆಯಾಗಬಹುದು. ನಮ್ಮ ಎಂಜಿನಿಯರ್ ಅವರ ಅಭಿಪ್ರಾಯದಲ್ಲಿ ಲೋ ಲೆವೆಲ್ ಕಾಲುವೆ ಸಾಕು ಎಂದು ಇದೆ. ಈಗಾಗಲೇ ಅರ್ಧದಷ್ಟು ಕೆಲಸ ನಡೆದು ಹೋಗಿದೆ. ಆದುದರಿಂದ ಈಗ ಇದನ್ನು ಪುನರ್ವಿಮರ್ಶೆ ಮಾಡುವುದು ಸಾಧ್ಯವಿಲ್ಲ.

**ಶ್ರೀ ಆರ್.ಕೆಂಚಪ್ಪ:** ಈ ಪ್ರದೇಶದಲ್ಲಿ ಜಾಸ್ತಿ ಮಳೆಯಾಗದಿದ್ದರೂ ಕೂಡ ನಂದಿ ಬೆಟ್ಟದಲ್ಲಿ ಮಳೆ ಜಾಸ್ತಿಯಾಗಿ ನದಿಗೆ ಪ್ರವಾಹ ಬರುತ್ತದೆ ಮತ್ತು ಅದರಿಂದ ತೊಂದರೆಯಾಗುವುದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗಾಗಲೇ ೧,೧೬,೦೦೦ ರೂ ಎಸ್ಟಿಮೇಟು ತಯಾರಾಗಿ ೫೮,೦೦೦ ರೂಪಾಯಿ ಖರ್ಚು ಸಹ ಮಾಡಿದ್ದೇವೆ. ಆದ್ದರಿಂದ ಈಗ ಅದನ್ನು ಬದಲಾವಣೆ ಮಾಡುವುದು ಸಾಧ್ಯವಲ್ಲ ಮತ್ತು ಆವಶ್ಯಕತೆಯೇ ಕಂಡು ಬರುವುದಿಲ್ಲ.

**ಶ್ರೀ ಆರ್.ಕೆಂಚಪ್ಪ:** ಮಳೆಗಾಲದಲ್ಲಿ ೩-೪ ತಿಂಗಳು ಸಂಚಾರಕ್ಕೆ ತೊಂದರೆಯಾಗುವುದಿಲ್ಲವೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಲೋ ಲೆವೆಲ್ ಕಾಲುವೆ ಇಲ್ಲವೆಂದು ತೊಂದರೆಯಾಗುತ್ತಾ ಇದೆ.

**ಒಬ್ಬ ಮಾನ್ಯ ಸದಸ್ಯರು:** ಈ ನದಿಯಲ್ಲಿ ಎಷ್ಟು ಅಡಿ ಆಳ ನೀರು ಹರಿಯುತ್ತದೆ ಮತ್ತು ಪ್ರವಾಹ ಬಂದಾಗ ಎಷ್ಟು ದಿವಸ ಇರುತ್ತದೆ ಎನ್ನುವುದು ತನಿಖೆಯಿಂದ ಗೊತ್ತಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ವಿವರ ಈಗ ನನ್ನ ಹತ್ತಿರವಿಲ್ಲ. ಆದರೆ ನಮ್ಮ ಎಂಜಿನಿಯರಿಂಗ್ ಇಲಾಖೆಯವರು ಇದನ್ನೆಲ್ಲಾ ಪರಿಶೀಲನೆ ಮಾಡಿ ಲೋ ಲೆವೆಲ್ ಕಾಲುವೆ ಸಾಕಾಗುತ್ತದೆಂದು ಒಂದು ನಿರ್ದಿಷ್ಟ ಅಭಿಪ್ರಾಯಕ್ಕೆ ಬಂದ ನಂತರವೇ ಎಸ್ಟಿಮೇಟು ಮಾಡಲಾಗುತ್ತದೆ.

# ವೇತನ ಪರಿಷ್ಕರಣೆ ಪ್ರಯೋಜನ ವಿಸ್ತರಣೆ

12ನೇ ಮಾರ್ಚ್ 1962

**ಶ್ರೀ ಜೆ.ಪಿ.ಸರ್ವೇಶ್ (ಸೇಡ್‌ಂ):**

ಅ. 1957 ಮತ್ತು 1961 ರ ವೇತನ ಪರಿಷ್ಕರಣೆಯ ಪ್ರಯೋಜನವನ್ನು ಗುಲ್ಬರ್ಗಾ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಾರುಕಟ್ಟೆ ಸೂಪರಿಡೆಂಟ್‌ಗಳಿಗೆ ವಿಸ್ತರಿಸುವ ಕುರಿತು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳು?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ)**

1. ಸರ್ಕಾರಿ ನೌಕರರಿಗೆ, ಸಾಮಾನ್ಯ ವೇತನ ಶ್ರೇಣಿ ಪರಿಷ್ಕರಣೆಯ ಜೊತೆಯಲ್ಲಿಲ್ಲ ಗ್ರೇಡ್ ಪೇಯನ್ನು 1961ರಲ್ಲಿ ಪರಷ್ಕರಿಸಲಾಯಿತು.

2. ಪುನಃ 03.11.1961ರಲ್ಲಿ ಮಾರುಕಟ್ಟೆ ಕಮಿಟಿಗಳ ಆದಾಯ ಆಧಾರದ ಮೇಲೆ ಗುಲ್ಬರ್ಗಾ ವಿಭಾಗದ ಮಾರುಕಟ್ಟೆ ಸೂಪರಿಡೆಂಟ್‌ಗಳ ವೇತನ ಶ್ರೇಣಿಯಲ್ಲಿ ಪರಿಷ್ಕರಿಸಿ ಆದೇಶಗಳನ್ನು ಹೊರಡಿಸಲಾಗಿದೆ.

**ಶ್ರೀ ಜೆ.ಪಿ.ಸರ್ವೇಶ್:** ಗುಲ್ಬರ್ಗಾ ವಿಭಾಗದ ಸೂಪರಿಟೆಂಡೆಂಟ್‌ಗಳಿಗೆ ಮಾರುಕಟ್ಟೆ ಕಮಿಟಿಗಳ ಆದಾಯ ಆಧಾರದ ಮೇಲೆ ಪರಿಷ್ಕರಿಸಿದ ವೇತನ ಶ್ರೇಣಿ ಎಫೆಕ್ಟ್ ಕೊಡಲಾಗಿದೆಯೇ ಎಂದು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು ಸರ್, ಸೂಪರಿಟೆಂಡೆಂಟ್‌ಗಳಲ್ಲಿ 4 ವರ್ಗಗಳಿವೆ. ಮೊದಲನೆ ಮತ್ತು ನಾಲ್ಕನೇ ವರ್ಗದವರಿಗೆ ಈ ಪರಿಷ್ಕರಣೆಯಿಂದ ಲಾಭವಾಗಿದೆ. ಆದರೆ ಅವರು ಪರಿಷ್ಕರಿಸಿದ ಶ್ರೇಣಿಯನ್ನು ಆಯ್ಕೆ ಮಾಡಿಕೊಂಡಿಲ್ಲ. ಏಕೆಂದರೆ ಅವರು ಕೇಳುತ್ತಿರುವುದು 01.01.1961 ರಿಂದ, ಆದರೆ 03.10.1961 ರಿಂದ ಇದೆ. ಮೊದಲನೇ ವರ್ಗದ ಸೂಪರಿಟೆಂಡೆಂಟ್‌ಗಳನ್ನು ಗೆಜೆಟೆಡ್ ಆಗಿ ಪರಿಗಣಿಸಲು ಕೇಳುತ್ತಿದ್ದಾರೆ.

**ಶ್ರೀ ಜೆ.ಪಿ.ಸರ್ವೇಶ್:** 1957ರಿಂದ ಗುಲ್ಬರ್ಗಾ ವಿಭಾಗದ ಸೂಪರಿಟೆಂಡೆಂಟ್‌ಗಳು ಯಾವುದೇ ರೀತಿಯಲ್ಲಿ ಪ್ರಯೋಜನವನ್ನು ಪಡೆದಿಲ್ಲ ಎಂಬದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರಿಯಲ್ಲ ಸರ್, ಪರಷ್ಕರಿಸಿದ ಶ್ರೇಣಿಯಿಂದಲೇ ಮೊದಲನೇ ಹಾಗೂ ನಾಲ್ಕನೇ ವರ್ಗದವರು ಹಣಕಾಸಿನಲ್ಲಿ ಪ್ರಯೋಜನವಾಗಿದೆ. ಅವರು ಇದನ್ನು 01.01.1961 ರಿಂದ ಎಫೆಕ್ಟ್/ಜಾರಿಗೆ ಕೊಡಲು ಕೇಳುತ್ತಿದ್ದಾರೆ. ಮೊದಲನೇ ವರ್ಗದವರು ಗೆಜೆಟೆಡ್ ಆಗಿ ಪರಿಗಣಿಸಲೇಬೇಕೆಂದು ಕೇಳುತ್ತಿದ್ದಾರೆ. ಈಗ ಸರ್ಕಾರವು ಬಿಲ್ಲು ಪರಿಚಯಿಸುತ್ತಿದ್ದು. ಬಿಲ್ಲು ಪಾಸಾದ ನಂತರ, ಅವರೆಲ್ಲರೂ ಸರ್ಕಾರಿ ನೌಕರರು ಆಗಿರಲಿಲ್ಲ.

**ಶ್ರೀ ಎ.ಶರಣಪ್ಪ:** ಚೀಫ್ ಮಾರ್ಕೆಟಿಂಗ್ ಆಫೀಸರ್ ರಿವೈಸ್ಡ್ ಫೈಲ್ ಬಗ್ಗೆ ಎಫೆಕ್ಟ್‌ಗೆ ಕೊಡಬೇಕೆಂದು ಟ್ರೆಜರಿಗೆ ಬರೆದಾಗ ಗೌವರ್ನಮೆಂಟ್ ನೋಟಿಫಿಕೆಷನ್ ಇಲ್ಲ ಎಂದು ಹೇಳಿ ಅವರಿಗೆ ಕೊಡುವುದಕ್ಕೆ ಬರುವುದಿಲ್ಲ ಎಂದು ಹೇಳಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ಸರ್ಕಾರದ ಗಮನಕ್ಕೆ ತಂದಿಲ್ಲ. ಸರ್

**ಶ್ರೀ ಎ.ಶರಣಪ್ಪ:** ಮಾರ್ಕೆಟಿಂಗ್ ಸೂಪರಿಂಟೆಂಡೆಂಟ್ ಅವರು ಸರ್ಕಾರಿ ನೌಕರರೋ ಮಾರ್ಕೆಟಿಂಗ್ ಕಮಿಟಿ ಸಂಬಂಧಪಟ್ಟವರೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಗುಲ್ಬರ್ಗಾ ಪ್ರದೇಶವು ಮೈಸೂರಿನಲ್ಲಿ ಸೇರಿಕೊಳ್ಳುವುದಕ್ಕಿಂತ ಮುಂಚೆ ಅವರೆಲ್ಲರೂ ಸರ್ಕಾರಿ ನೌಕರರು ಆಗಿರಲಿಲ್ಲ. ಅದಕ್ಕಿಂತ ಕೆಲವು ದಿನಗಳ ಹಿಂದೆ, ಹೈದರಾಬಾದ್ ಸರ್ಕಾರವು ಅವರನ್ನು ಸರ್ಕಾರಿ ನೌಕರರೆಂದು ಪರಿಗಣಿಸಿತು. ಆದರೆ ಮೈಸೂರಿನಲ್ಲಿ ಸಮಾನ ಪೋಸ್ಟ್ ಗಳಿಲ್ಲ. ಇದನ್ನು ರೆಬೆಲೋ ಕಮಿಟಿಯವರು ಪರೀಕ್ಷಿಸಿ, ಅಲ್ಲಿ ಅಂಥ ಪೋಸ್ಟ್‌ಗಳು ಇಲ್ಲ ಎಂದು ತಿಳಿಸಿದರು. ಪರಿಷ್ಕರಿಸಿದ ಶ್ರೇಣಿಯನ್ನು 01.01.1961 ರಲ್ಲಿ ಅವರಿಗೆ ನೀಡಲಾಯಿತು. ಆದರೆ ಅವರನ್ನು ಆಯ್ಕೆ ಮಾಡಿಲ್ಲ. ಈಗ ಮಾರುಕಟ್ಟೆ ಸಮಿತಿ ಆದಾಯದ ಮೇಲೆ ಮಾಡಬಾರದು ಹಾಗೂ ಅಲ್ಲಿ ಕೆಲವು ಇತರೆ ಶ್ರೇಣಿ ಅಂದರೆ, ಮೇಜರ್ ಮೀಡಿಯಂ ಮತ್ತು ಮೈನರ್ ಇತ್ಯಾದಿಗಳು ಇರಬೇಕು ಎಂದು ಚೀಫ್ ಮಾರ್ಕೆಟಿಂಗ್ ಆಫೀಸರ್‌ರವರಿಂದ ಮನವಿ ಬಂದಿದೆ. ಈ ಎಲ್ಲವೂ ಚೀಫ್ ಮಾರ್ಕೆಟಿಂಗ್ ಆಫೀಸರ್‌ರವರ ಮುಂದಿದೆ. ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕೊಡಬೇಕೆಂದು ಕೇಳಿದ್ದೇವೆ. ಯಾವಾಗ ಒಂದೆ ತರಹದ ನಿಯಮಗಳನ್ನು ಪರಿಚಯಿಸುತ್ತೇವೆ ಆಗ ಅವರೆಲ್ಲರನ್ನು ಸರ್ಕಾರಿ ನೌಕರರೆಂದು ಪರಿಗಣಿಸಬಹುದು ಹಾಗೂ ಅವರ ವೇತನ ಶ್ರೇಣಿ ಸುಸಂಬದ್ಧವಾಗಿ ಎಲ್ಲರಿಗೂ ಪ್ರಯೋಜನವಾಗುತ್ತದೆ.

**ಶ್ರೀ ಎ.ಶರಣಪ್ಪ:** ಎಕ್ಸ್ ಹೈದರಾಬಾದ್ ಸರ್ಕಾರದವರು ಅವರನ್ನು ಸರ್ಕಾರಿ ನೌಕರರು ಎಂದು ಒಪ್ಪಿಕೊಂಡ ಮೇಲೆ ತಾವು ಕೂಡ ಒಪ್ಪಬಹುದಲ್ಲಾ?

**ಶ್ರೀ ಕೊಂಡಜ್ಜಿ ಬಸಪ್ಪ:**ಎಲ್ಲರನ್ನು ಸರ್ಕಾರಿ ನೌಕರರಂದು ಪರಿಗಣಿಸಿ, ಪೂರ್ಣ ಸಂಗತಿಯನ್ನು ಹೊಸದಾಗಿ ಪರಿಕ್ಷೀಸುತ್ತೇವೆ.

**ಶ್ರೀ ಎಸ್.ಭೀಮಣ್ಣ:** ೧೯೫೬ ಕ್ಕೆ ಮೊದಲು ಅವರು ಸರ್ಕಾರಿ ನೌಕರರು ಎಂದು ಡಿಕ್ಲೇರ್ ಆದ ಮೇಲೆ ಇದುವರೆಗೂ ಯಾವ ಸೀನಿಯಾರಿಟಿ ಲಿಸ್ಟ್ ಬರದೇ ಇರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ತಾನೇ ಹೇಳಿದ ಪ್ರಕಾರ, 03.10.1961ರಲ್ಲಿ ಪರಿಷ್ಕರಿಸಿದ ವೇತನ ಶ್ರೇಣಿಗಳು ನಾಲ್ಕು ವರ್ಗಗಳ ಪೈಕಿ ಈ ಎರಡು ವರ್ಗದವರ ಪರವಾಗಿ ಫೇವರ್ ಆಗಿವೆ. ಆದರೆ, ಅವರು ನಾನು ಆಗಲೇ ತಿಳಿಸಿದ ಕಾರಣಗಳಿಂದ ಆಯ್ಕೆ ಮಾಡಿಕೊಂಡಿಲ್ಲ.

# ನೀರಾವರಿ ಬಾವಿಗಳ ಮಂಜೂರು

**13ನೇ ಮಾರ್ಚ್ 1962**

**ಶ್ರೀ ಸಿ.ಆರ್.ರಂಗೇಗೌಡ** – ಈ ಬಾವಿಗಳನ್ನು ಮಂಜೂರು ಮಾಡಿದ್ದು ಯಾವಾಗ? ಯಾರು ಯಾರು ಹಣ ತೆಗೆದುಕೊಂಡಿದ್ದಾರೆ ಮತ್ತು ಎಷ್ಟು ಬಾವಿಗಳ ಕೆಲಸ ಆಗದೇ ಉಳಿದಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ದೊಡ್ಡ ಪಟ್ಟಿ ಆಗಿದ್ದು ಇಪ್ಪತ್ತು ಪುಟಗಳಿವೆ. ಸರ್, ಇದು ದಿನಾಂಕ ವ್ಯಕ್ತಿಗಳ ಹೆಸರು ಹಾಗೂ ಕ್ರಮಕೈಗೊಂಡಿರುವುದನ್ನು ಒಳಗೊಂಡಿದೆ. ಇದನ್ನು ಮೇಜಿನ ಮೇಲೆ ಇಡುತ್ತೇನೆ. ಸರ್,

**ಶ್ರೀ ಸಿ.ಆರ್.ರಂಗೇಗೌಡ** – ೯೪೭ ಬಾವಿಗಳ ಪೈಕಿ ನಾನೂರು ಇನ್ನೂ ಪೂರೈಸಿಲ್ಲ ಎಂದಿದೆ. ಇದಕ್ಕಾಗಿ ಹಣ ಬೇಕು ಎಂದು ಎನ್.ಇ.ಎಸ್. ಬ್ಲಾಕಿನಿಂದ ಮನವಿ ಸರ್ಕಾರಕ್ಕೆ ಬಂದಿರುವುದನ್ನು ಪರಿಶೀಲನೆ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿ ನಾವು ಅವುಗಳನ್ನು ಪರಿಗಣಿಸುತ್ತೇವೆ.

**ಶ್ರೀ ಸಿ.ಆರ್.ರಂಗೇಗೌಡ** – ಸಾವಿರ ರೂಪಾಯಿಗಳಷ್ಟು ಕೊಟ್ಟಿರುವ ಸಾಲವನ್ನು ಎರಡು ಮೂರು ಕಂತುಗಳಲ್ಲಿ ಕೊಡುವುದು ಸರಿಯಲ್ಲ ಎಂದು ಅಸಿಸ್ಟೆಂಟ್ ಕಮಿಷನರಿಗೂ, ಡಿ.ಸಿ. ಯವರಿಗೂ ಅರ್ಜಿ ಕೊಟ್ಟಿದೆ. ಅದನ್ನು ಪರಿಶೀಲನೆ ಮಾಡುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿ ಈ ಪ್ರಕರಣಗಳು ಇನ್ನು ಸಹ ನಾವು ಪರಿಶೀಲಿಸುತ್ತೇವೆ.

**ಶ್ರೀ ಸಿ. ಆರ್. ರಂಗೇಗೌಡ:** ಕೆಲವರು ಸಾಲ ತೆಗೆದುಕೊಂಡು ಕಂತನ್ನು ವಾಪಸು ಕೊಡದೇಯಿರುವವರ ಮೇಲೆ ಸರಕಾರ ಏನು ಕ್ರಮ ತೆಗೆದುಕೊಳ್ಳುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ಡಿಫಾಲ್ಟರ್ಸ್ ಪ್ರಕರಣದಲ್ಲಿ ನಿರ್ದಿಷ್ಟ ಸಮಯದಲ್ಲಿ ಪೂರ್ಣಗೊಳಿಸಬೇಕೆಂದು ನೋಟೀಸು ಜಾರಿಮಾಡಲಾಗಿದೆ. ಇದನ್ನು ಅವರಿಗೆ ನಿರ್ದಿಷ್ಟ ಸಮಯದಲ್ಲಿ ಮಾಡಲು ತಪ್ಪಿದಲ್ಲಿ ಲೋನ್‌ನನ್ನು ವಾಪಾಸ್ಸುಕೊಡಲು ಕೇಳುತ್ತೇವೆ.

**ಶ್ರೀ ಸಿ.ಆರ್.ರಂಗೇಗೌಡ** – ಪೂರ್ಣವಾಗಿ ಬಾವಿಗಳನ್ನು ಮಾಡಲು ೩.೦೦೦ ಸಾವಿರ ರೂಪಾಯಿಗಳಷ್ಟು ಕೊಟ್ಟಿದ್ದರೂ ಕೆಲವು ಕಡೆ ಬಾವಿಗಳಲ್ಲಿ ನೀರು ಸಿಗದೆ ಐದಾರು ಸಾವಿರದಷ್ಟು ಹೆಚ್ಚಿನ ಖರ್ಚು ಬಂದಿದ್ದರೆ ಅವರಿಗೂ ಹೆಚ್ಚಿನ ಲೋನನ್ನು ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಪ್ರಶ್ನೆಗೆ ನಾನು ಆಗಲೇ ಉತ್ತರಿಸಿದ್ದೇನೆ. ಎಲ್ಲಿ ಜಿಲ್ಲಾಧಿಕಾರಿ/ ಲೋಕಲ್ ವಿಭಾಗೀಯ ಕಮೀಶನರ್‌ರವರು ಶಿಪಾರಸ್ಸುಮಾಡಿದ್ದಲ್ಲಿ, ನಾವು ಅಂಥ ಪ್ರಕರಣಗಳನ್ನು ಪರಿಗಣಿಸುತ್ತೇವೆ.

**ಶ್ರೀ ಸಿ.ಆರ್.ರಂಗೇಗೌಡ –** ಬಾವಿಗಳು ಪೂರ್ಣವಾಗದೆ ಮತ್ತು ಸಕಾಲದಲ್ಲಿ ಮಾಡದಿದ್ದರೆ ಅಧಿಕಾರಿಗಳ ಮೇಲೇನಾದರೂ ಕ್ರಮ ತೆಗೆದುಕೊಳ್ಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾರನ್ನು ಹೊಣೆಗಾರರನ್ನಾಗಿ ಮಾಡುವುದಿಲ್ಲ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಈಗ ಒಟ್ಟು ಎಷ್ಟು ಬಾವಿಗಳ ಕೆಲಸ ಇನ್ ಕಂಪ್ಲೀಟಾಗಿನಿಂತಿದೆ? ಇದರ ಪ್ರೊಗ್ರೆಸ್ ಏನು?

**ಶ್ರೀ ಕೊಂಡಜ್ಜಿ ಬಸಪ್ಪ:** 1,126 ಅರ್ಜಿಗಳಲ್ಲಿ 1947 ಗಳು ಮಂಜೂರುಆಗಿವೆ ಅದರಲ್ಲಿ 546 ಪೂರ್ಣಗೊಂಡಿವೆ ಮತ್ತು ಸುಮಾರು 400 ಅಪೂರ್ಣವಾಗಿವೆ. ಅವುಗಳು ಸಹ ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿವೆ.

**ಶ್ರೀ ಟಿ.ಮಾದಯ್ಯ ಗೌಡ –** ಪೂರ್ಣವಾಗಿ ಆಗಿರುವ ಬಾವಿಗಳಿಗೆ ಕೊಡಬೇಕಾದ ಹಣವನ್ನು ಪೂರ್ತಿ ಕೊಡಲಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿ, ಅವುಗಳನ್ನು ಕೊಡಲಾಗಿದೆ.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ಪೂರ್ಣವಾದ ಬಾವಿಗಳಾಗಲು ರೈತರಿಗೆ ಲುಕ್ಸಾನಾಗುತ್ತಿದೆ. ಅವರಲ್ಲಿ ಒಂದು ವರ್ಷದಲ್ಲಿ ಅರ್ಧದಷ್ಟು ಕೆಲಸ ಆಗದೆ ೩.೦೦೦ ರೂಪಾಯಿಗಳ ಎಸ್ಟಿಮೇಟಿದ್ದರೆ ೬.೦೦೦ ರಷ್ಟಕ್ಕೆ ಎಸ್ಟಿಮೇಟಿರುತ್ತದೆ. ಇದಕ್ಕೆ ಯಾರು ಜವಾಬುದಾರರು?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾರನ್ನು ಹೊಣೆಗಾರರನ್ನಾಗಿ ಮಾಡುವುದಿಲ್ಲ.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ಪೂರ್ಣವಾಗಿ ಬಾವಿಯಾಗಲು ಸರಿಯಾದ ಟೈಂ ನಲ್ಲಿ ಹಣವನ್ನು ಕೊಡದಿದ್ದರೆ ರೈತರಿಗೆ ತೊಂದರೆಯಾಗುತ್ತದೆ. ಇದಕ್ಕೆ ಯಾರು ಜವಾಬುದಾರರು? ಸರ್ಕಾರದವರೇ ಅಥವಾ ರೈತರೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹಣ ಕೊಡುವಾಗ ಕೆಲವು ಸಂದರ್ಭಗಳಲ್ಲಿ ಸೆಕ್ಯೂರಿಟಿ ಮೇಲೆ ಲೋನು ಕೊಡುತ್ತಾರೆ. ಲೋನು ಹೆಚ್ಚಾದರೆ ಅಡಿಷನಲ್ ಸೆಕ್ಯೂರಿಟಿಯನ್ನು ತೆಗೆದು ಕೊಳ್ಳುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ತೊಂದರೆಗಳಿಗೆ ನಾನಾ ಕಾರಣಗಳಿರುತ್ತವೆ.

**ಶ್ರೀ ಎಸ್.ವಿ.ರಾಮೇಗೌಡ –** ಎಸ್ಟಿಮೇಟಿನಂತೆ ಸರ್ಕಾರ ಸಾಲ ಕೊಟ್ಟಿದೆಯೇ? ಅದರ ಬಗ್ಗೆ ಭರವಸೆಯನ್ನು ಇಲ್ಲಿ ಮಂತ್ರಿಗಳು ಹೇಳಬೇಕು.

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ಆ ವಿಷಯದ ಅಭಿಪ್ರಾಯವಾಗಿದೆ.

**ಶ್ರೀ ಆರ್.ಎನ್.ಲಕ್ಷ್ಮೀಪತಿ –** ಕೆಲವು ಕಡೆ ಬಾವಿಗಳು ಸ್ಯಾಂಕ್ಷನ್ನು ಆಗಿ ಆರು ತಿಂಗಳಾಗಿದ್ದರೂ ಕೂಡ ಹಣ ಬಂದಿರುವುದಿಲ್ಲ. ಆಗ ಏನು ಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ವಿಶೇಷ ಪ್ರಕರಣಗಳಲ್ಲಿ, ಸಮಯದ ಮಿತಿಯನ್ನು ಸಹ ವಿಸ್ತರಿಸುತ್ತೇವೆ.

**ಶ್ರೀ ಎಸ್.ವಿ.ರಾಮೇಗೌಡ –** ಕನ್‌ಸಿಡರ್ ಮಾಡುತ್ತೇನೆನ್ನುವ ಪ್ರಶ್ನೆಯಲ್ಲ. ಸರ್ಕಾರ ಹಣವನ್ನು ಸಾಲವಾಗಿ ಕೊಟ್ಟು ರೈತರಿಗೆ ಸಹಾಯ ಮಾಡುತ್ತೇವೆ ಎನ್ನುವಂತೆ ಭರವಸೆ ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ –** ಪ್ರಯತ್ನ ಮಾಡುತ್ತೇವೆಂದರೆ ಪರಿಶೀಲನೆ ಮಾಡುತ್ತೇವೆಂದೇ ಅರ್ಥ.

**ಶ್ರೀ ವಿ.ಎಸ್. ಪಾಟೀಲ:** ಬಾವಿಗಳನ್ನು ತೆಗೆಸಿ/ಕೊರೆದ ನಂತರ ಅವುಗಳನ್ನು ನಿಜವಾಗಿಯೂ ಉಪಯೋಗಿಸುತ್ತಾರೆಯೇ ಹಾಗೂ ಬಾವಿಗಳನ್ನು ತೆಗೆಸಲು ಲೋನ್‌ಗಳನ್ನು ತೆಗೆದುಕೊಂಡಿರುವವರ ವ್ಯಕ್ತಿಗಳು ಅದನ್ನು ಉಪಯೋಗಿಸಿದ್ದಾರೆಯೇ/ ಇಲ್ಲವೇ ಎಂಬುದನ್ನು ನೋಡಲು ಸರ್ಕಾರವು ಯಾವುದಾದರೂ ವ್ಯವಸ್ಥೆಯನ್ನು ಮಾಡಿದೆಯೇ ಎಂದು ನಾನು ತಿಳಿದುಕೊಳ್ಳಬಹುದಾ.

**ಸಭಾಧ್ಯಕ್ಷರು:** ಇದಕ್ಕೆ ಯಾವ ವ್ಯವಸ್ಥೆಯನ್ನು ಮಾನ್ಯ ಸದಸ್ಯರು ಸೂಚಿಸಿದ್ದಾರೆಯೇ?

**ಶ್ರೀ ವಿ.ಎಸ್.ಪಾಟೀಲ:** ಸರ್ಕಾರವು ಕೆಲವು ಏಜನ್ಸಿಯನ್ನು ನೇಮಕ ಮಾಡಲೆ ಬೇಕೆ ಬಾವಿಗಳನ್ನು ಆಹಾರ ಉತ್ಪನ್ನ ಹಾಗೂ ಇತರ ಕೃಷಿ ಉತ್ಪನ್ನಗಳನ್ನು ಬೆಳೆಯಲು ಉಪಯೋಗಿಸುತ್ತಿದ್ದಾರೆ ಎಂದು ನೋಡಲು ಸರ್ಕಾರವು ಕೆಲವು ಏಜೆನ್ಸಿಯನ್ನು ನೇಮಕ ಮಾಡಲೇಬೇಕು ಎಂದು ಸೂಚಿಸಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಬಾವಿಗಳು ಪೂರ್ಣವಾದನಂತರ, 5 ವರ್ಷಗಳವರೆಗೆ ಆಹಾರ ಉತ್ಪನ್ನಗಳನ್ನು ಬೆಳೆಯಲು ಮಾತ್ರವೇ ಆ ಬಾವಿಗಳನ್ನು ಉಪಯೋಗಿಸಬೇಕು ಎಂಬ ನಿಯಮವಿದೆ. ಅವರು ಇದನ್ನು ಮಾಡದಿದ್ದರೆ ಅದು ನಿಯಮಗಳಿಗೆ ವಿರುದ್ಧವಾಗಿದೆ.

**ಶ್ರೀ ಬಿ.ಚನ್ನಬೈರೇಗೌಡ –** ಬಾವಿಗಳು ಅಪೂರ್ಣವಾಗಿವೆ ಎಂದು ಸರ್ಟಿಫಿಕೇಟು ಬಂದಿದ್ದರೂ ಹಣವನ್ನು ಬಾವಿಗಾಗಿ ಕೊಟ್ಟಿರುವ ಅಧಿಕಾರಿಗಳ ಮೇಲೆ ಏನು ಕ್ರಮ ತೆಗೆದುಕೊಳ್ಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಪ್ರಶ್ನೆಯೂ ಉದ್ಭವವಾಗುವುದಿಲ್ಲ. ನನಗೆ ಗೊತ್ತಿಲ್ಲ ಸರ್.

# ಸಾಲ ಮಂಜೂರಾತಿ ವಿಳಂಬದ ಬಗ್ಗೆ ಚರ್ಚೆ

13ನೇ ಮಾರ್ಚ್ 1963

**ಶ್ರೀ ಸಿ.ಎಸ್.ಹುಲಕೋಟಿ:** ಸರ್ ಲೋನ್ ಅರ್ಜಿಗಳು ಮಂಜೂರಾಗಲು 3 ರಿಂದ 4 ತಿಂಗಳು ವಿಳಂಬವಾಗುತ್ತಿರುವುದು ಏಕೆ, ಸರ್.

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು, ಇದನ್ನು ಒಪ್ಪುತ್ತೇನೆ.

**ಸಭಾಧ್ಯಕ್ಷರು:** ಯಾಕೆ ಅಲ್ಲಿ ವಿಳಂಬವಾಗುತ್ತಿದೆ? ಇದನ್ನು ಶೀಘ್ರವಾಗಿ ಮಾಡಲು ಬರುವುದಿಲ್ಲವೇ? ಅಷ್ಟು ಸಮಯದ ಅವಶ್ಯಕತೆ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು ಸರ್, ಏಕೆಂದರೆ ಗುಲ್ಬರ್ಗ ಮತ್ತು ಬೆಳಗಾಂ ವಿಭಾಗದಲ್ಲಿ ಇತ್ತೀಚಿಗೆ ರಚನೆಯಾಗಿರುವ ಪ್ರೈಮರಿ ಕೋ-ಆಪರೇಟಿವ್ ಲ್ಯಾಂಡ್ ಮಾರ್ಟಗೇಜ್ ಬ್ಯಾಂಕ್‌ನಲ್ಲಿ ವಕೀಲರ ನೆರವಿಲ್ಲ ಹಾಗೂ ಅವರಲ್ಲಿ ಹಲವರಿಗೆ ಸ್ಕ್ರೆಟರಿ ತರಹ ತರಬೇತಿ ಪಡೆದಿರುವ ವ್ಯಕ್ತಿಗಳಿಲ್ಲ. ಬ್ಯಾಂಕ್‌ನಲ್ಲಿ ಭೂ ಮೌಲ್ಯಮಾಪನ ಅಧಿಕಾರಿಗಳಿಲ್ಲ. ಈ ಕಾರಣಗಳಿಂದ, ಪ್ರೈಮರಿ ಬ್ಯಾಂಕಿನವರು ಶಿಫಾರಸ್ಸು ಮಾಡಿರುವ ಅರ್ಜಿಗಳನ್ನು ಸ್ವೀಕರಿಸಿದ ಕೇಂದ್ರ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ಗಳು ಖಚಿತವಾದ ಸ್ಪಷ್ಟನೆಗೆ ವಾಪಸ್ಸು ಕಳಿಸಿದ್ದಾರೆ. ಆದ್ದರಿಂದಲೇ ವಿಳಂಬವಾಗುತ್ತಿರುವುದು.

**ಶ್ರೀ ಸಿ.ಎಸ್.ಹುಲಕೋಟಿ:** ಧಾರವಾಡ ಜಿಲ್ಲೆಯಲ್ಲಿ, ಲೋನ್ ಅರ್ಜಿಗಳನ್ನು ಸೂಕ್ಷ್ಮಪರಿಶೀಲನೆ/(scrutiny) ಪರಿಶೋಧನೆಯು ಮುಗಿದ ನಂತರವೇ ಕೇಂದ್ರ ಬ್ಯಾಂಕ್‌ಗಳಿಗೆ ಕಳುಹಿಸುತ್ತಾರೆ. ಆದ್ದರಿಂದ ಖಚಿತ ಸ್ಪಷ್ಟನೆಗೆ ವಾಪಸ್ಸು ಕಳುಹಿಸುವ ಅವಶ್ಯಕತೆಯೇ ಅಲ್ಲಿ ಇಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಇನ್ನು ಕೆಲವು ಪ್ರಕರಣಗಳಲ್ಲಿ, ಪ್ರಾಯಶಃ 1956ರಲ್ಲಿ ಮರ್ಜರ್ ಆಗುವುದಕ್ಕಿಂತ ಮೊದಲು ರಚನೆಯಾಗಿದ್ದ ಗದಗ ಮತ್ತು ಧಾರವಾಡದಲ್ಲಿ ಕಾನೂನು ಸಲಹೆಗಾರರು ಇದ್ದರು. ಆದರೆ ಅಲ್ಲಿ, ಕೇಂದ್ರ ಬ್ಯಾಂಕಿನ ಕಾನೂನು ಸಲಹೆಗಾರರಿಗೂ ಮತ್ತು ಪ್ರೈಮರಿ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕಿನಲ್ಲಿ ಇರುವ ಕಾನೂನು ಸಲಹೆಗಾರರಲ್ಲಿ ವ್ಯತ್ಯಾಸವಿದೆ. ಇಬ್ಬರೂ ವಕೀಲರು ಯಾವಾಗಲೂ ಹೊಂದುವುದಿಲ್ಲ/ಒಪ್ಪುವುದಿಲ್ಲ. ಆದ್ದರಿಂದ ಲೋನ್ ಅರ್ಜಿಗಳನ್ನು ಪ್ರೈಮರಿ ಲ್ಯಾಂಡ್ ಮಾರ್ಟಗೇಜ್ ಬ್ಯಾಂಕ್‌ಗಳಿಗೆ ವಾಪಸ್ಸು ಕಳುಹಿಸಿಕೊಡಲಾಗುವುದು. ಆದ್ದರಿಂದ ಅಲ್ಲಿ ವಿಳಂಬವಾಗುತ್ತಿದೆ.

**ಶ್ರೀ ಸಿ.ಎಸ್.ಹುಲಕೋಟಿ:** ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ಗಳಲ್ಲಿ, ಸಹಕಾರ ಸಮ್ಮೇಳನದಲ್ಲಿ– ಕೆಲವು ಭಾಗದಲ್ಲಿ() ಲೋನ್‌ಗಳನ್ನು ಮಂಜೂರು ಮಾಡಲು ಅಧಿಕಾರಿಗಳನ್ನು ಪ್ರೈಮರಿ ಕೋ–ಆಪರೇಟಿವ್ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ಗಳಿಗೆ ವಹಿಸಬೇಕೆಂದು ಶಿಫಾರಸು ಮಾಡಿರುವುದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು, ಲೋನ್ ಮಂಜೂರು ಮಾಡುವ ಪ್ರಕ್ರಿಯೆಯನ್ನು ಸರಳಗೊಳಿಸಲು ಮೈಸೂರಿನಲ್ಲಿ ನಡೆದ ಸಹಕಾರಿ ಸಮ್ಮೇಳನದಲ್ಲಿ ಅಲ್ಲದೇ 1958ರಲ್ಲಿ ನಡೆದ ಆಲ್ ಇಂಡಿಯಾ ಸಹಕಾರಿ ಸಮ್ಮೇಳನದಲ್ಲೂ ಸಹ ಶಿಫಾರಸ್ಸು ಮಾಡಲಾಗಿದೆ.

ಅದರ ಶಿಫಾರಸ್ಸಿನಲ್ಲಿ ಹೇಳಿರುವುದು ಏನೆಂದರೆ (1)ಮೊದಲನೆಯದಾಗಿ, 3000 ರೂಪಾಯಿಗಳವರೆಗೆ ಮಂಜೂರು ಮಾಡುವ ಅಧಿಕಾರವನ್ನು ಪ್ರೈಮರಿ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ಗೆ ಕೊಟ್ಟರೆ ಶೇಕಡ 75ರಷ್ಟು ಲೋನ್ ಅರ್ಜಿಗಳನ್ನು ನಾವೇ ವಿಸರ್ಜಿಸಬಹುದು ಅಂದರೆ ಹೀಗೆ ಕೇಂದ್ರ ಬ್ಯಾಂಕು ಸ್ವೀಕರಿಸುತ್ತಿದ್ದ ಅರ್ಜಿಗಳ ಕುರಿತು ಪ್ರೈಮರಿ ಬ್ಯಾಂಕ್‌ಗಳೇ ತಿರ್ಮಾನಿಸಬಹುದು ಎಂದು ತಮ್ಮ ಶಿಫಾರಸ್ಸಿನಲ್ಲಿ ತಿಳಿಸಿದ್ದಾರೆ.(2) ನಾವು ಹೀಗೆ 23 ವರ್ಷದ ಎನ್‌ಕಂಬ್‌ರೆನ್ಸ್ ಸರ್ಟಿಫಿಕೇಟ್‌ನ್ನು ಬೇಕೆಂದು ಕೇಳುತ್ತಿದ್ದೇವೆ/ಆಗ್ರಹಿಸಿದ್ದೇವೆ. ಆದರೆ ಅವರು 12 ವರ್ಷದ ಎನ್‌ಕಂಬ್‌ರೆನ್ಸ್ ಸರ್ಟಿಫಿಕೇಟ್ ಸಹ ನಡೆಯುತ್ತದೆ ಎಂದು ಹೇಳಿದರು. ಪ್ರಾಯಶಃ ಸರ್ಕಾರದ ಮಟ್ಟದಲ್ಲಿ ಈ ಎರಡು ಅಂಶಗಳು ನಿರ್ಧಾರವಾದರೆ ದೊಡ್ಡಗಾತ್ರದಲ್ಲಿ ವಿಳಂಬವನ್ನು ವಿಸರ್ಜಿಸಬಹುದು/ತಡೆಗಟ್ಟಬಹುದು. ಸರ್ಕಾರದ ಮಟ್ಟದಲ್ಲಿ ನಾವು ಇದನ್ನು ಪರೀಕ್ಷಿಸುತ್ತಿದ್ದೇವೆ ಹಾಗೂ ಅತಿ ಶೀಘ್ರದಲ್ಲಿ ಈ ವಿಷಯಗಳಲ್ಲಿ ಆದೇಶಗಳನ್ನು ಹೊರಡಿಸುತ್ತೇವೆ.

**ಶ್ರೀ ಸಿ.ಎಸ್.ಹುಲಕೋಟಿ:** ಸರ್, ಒಂದು ತಿಂಗಳು/ಎರಡು ತಿಂಗಳಲ್ಲಿ ಸರ್ಕಾರ ಆದೇಶಗಳನ್ನು ನೀಡುತ್ತದೆಯೇ ಎಂದು ನಾನು ತಿಳಿದುಕೊಳ್ಳಬಹುದಾ:

**ಶ್ರೀ ಕೊಂಡಜ್ಜಿ ಬಸಪ್ಪ:** ಸದನಕ್ಕೆ ನಾನು ಭರವಸೆ ಕೊಡುವುದೇನೆಂದರೆ ಆದೇಶಗಳನ್ನು ಒಂದು/ಎರಡು ತಿಂಗಳಲ್ಲಿ ನೀಡುತ್ತೇವೆ.

**ಶ್ರೀ ಡಿ.ಎಮ್. ಸಿದ್ದಯ್ಯ:** ಒಂದು ವರ್ಷ/ಹೆಚ್ಚಿನ ಅವಧಿಯಲ್ಲಿ ಅರ್ಜಿಗಳು ಮುಗಿಯುತ್ತವೆ ಎಂದು ಉತ್ತರದಲ್ಲಿ ಹೇಳಿದರು.

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು, ನಾನು ಅದನ್ನು ಹೇಳಿದೆ ಉತ್ತರಗಳು ಅಲ್ಲಿವೆ.

**ಶ್ರೀ ಡಿ.ಎಮ್. ಸಿದ್ದಯ್ಯ:** ಮಾನ್ಯ ಮಂತ್ರಿಯವರು 2 ರಿಂದ 4 ತಿಂಗಳಲ್ಲಿ ತೀರ್ಮಾನಿಸುತ್ತೇವೆ ಎಂದು ಹೇಳಬಹುದಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** (ಈ)ಗೆ ಉತ್ತರ ಹಾಗೂ ಗುಲ್ಬರ್ಗಾ ಮತ್ತು ಬೆಳಗಾಂ ವಿಭಾಗಗಳಿಗೆ ಮಾತ್ರ. ಸಾಮಾನ್ಯವಾಗಿ ಲೋನ್ ಅರ್ಜಿಗಳನ್ನು 2 ರಿಂದ 4 ತಿಂಗಳ ಒಳಗೆ ಮಂಜೂರು ಮಾಡಲಾಗುತ್ತದೆ. ಆದರೆ ಗುಲ್ಬರ್ಗಾ ಮತ್ತು ಬೆಳಗಾಂನಲ್ಲಿ ತರಬೇತಿ ಪಡೆದ ಕಾರ್ಯದರ್ಶಿ ಮತ್ತು ಕಾನೂನು ನೆರವು ಇಲ್ಲದಿರುವುದರಿಂದ ಅವಶ್ಯಕತೆ ಕಂಡುಬಂದಲ್ಲಿ ಸ್ಪಷ್ಟನೆಗಾಗಿ ಅರ್ಜಿಗಳನ್ನು ವಾಪಸ್ಸು ಕಳುಹಿಸಲಾಗುತ್ತದೆ. ಹಾಗಾಗಿ ವಿಳಂಬವಾಗುತ್ತಿದೆ.

**ಶ್ರೀ ಡಿ.ಎಮ್. ಸಿದ್ದಯ್ಯ:** ರಾಜ್ಯದಲ್ಲೆಲ್ಲಾ ಲೋನ್ ಅರ್ಜಿಗಳನ್ನು ಮಂಜೂರು ಮಾಡುವುದು ಒಂದು ವರ್ಷ ಅಥವಾ ಅದಕ್ಕಿಂತ ಹೆಚ್ಚು ಅವಧಿ ಬೇಕಾಗುವುದು ಎಂದು ಹೇಳಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇಲ್ಲ, ಹಳೇ ಮೈಸೂರು ಪ್ರದೇಶದಲ್ಲಿ, ಶೀಘ್ರವಾಗಿ ಮಂಜೂರಾತಿಯನ್ನು ಪಡೆಯುತ್ತಾರೆ.

**ಶ್ರೀ ಸಿ.ಎಸ್. ಹುಲಕೋಟಿ:** ಸರ್, ಮಂಜೂರು ಆದ ನಂತರವೂ, ಹಣ ರಿಯಲೈಜ್ ಆಗಲು 3 ರಿಂದ 4 ತಿಂಗಳು ಬೇಕಾಗುವುದು ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವಾಗ ಲೋನ್ ಮಂಜೂರು ಆಗುವುದೋ ಪ್ರೈಮರಿ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ನವರು ಪಕ್ಷಕಾರರು ಬರೆಯಿಸಿಕೊಟ್ಟ ಅಡಮಾನ ಪತ್ರವನ್ನು ಕಳುಹಿಸಿಕೊಡುತ್ತಾರೆ. ಪತ್ರವನ್ನು ಸ್ವೀಕರಿಸಿದ ತಕ್ಷಣ ಹಣವನ್ನು ಕೊಡಲಾಗುವುದು.

**ಶ್ರೀ ಸಿದ್ದಯ್ಯ ಕಾಶಿಮಠ್** – ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಅರ್ಜಿ ಕಳುಹಿಸಿರುವುದನ್ನು ಹೇಳಿದ್ದೀರಿ. ಅರ್ಜಿ ಕಳುಹಿಸದೇ ಇರತಕ್ಕ ಬ್ಯಾಂಕುಗಳು ಎಷ್ಟು ಇವೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಪಟ್ಟಿಯಲ್ಲಿ ಅದು ಇದೆ.

**ಶ್ರೀ ಸಿದ್ದಯ್ಯ ಕಾಶಿಮಠ್** – ಅರ್ಜಿ ಕಳುಹಿಸದೇ ಇರತಕ್ಕ ಬ್ಯಾಂಕುಗಳು ಎಷ್ಟು ಅನ್ನುವುದು ಇಲ್ಲಿ ಇಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್, ಬೆಳಗಾಂ ವಿಭಾಗದಲ್ಲಿ, ನಾನು ತಿಳಿಸಿದಂತೆ 11 ಬ್ಯಾಂಕ್‌ಗಳೇ ಇರುವುದು.

**ಶ್ರೀ ಎ.ಎಸ್ ಹುಲಕೋಟಿ:** ಈ ಮೊಬಲಗನ್ನು ಪ್ರೈವೇಟ್‌ರುಗಳೇ ಮಂಜೂರು ಮಾಡಲಿಕ್ಕೆ ಸಾಧ್ಯವಾಗುವಂತೆ ಅನುಕೂಲ ಕಲ್ಪಿಸಲು ಏನಾದರು ವಿಚಾರ ಮಾಡುತ್ತ ಇದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ಸ್ವಲ್ಪ ಕಷ್ಟವಾಗಬಹುದು.

**ಶ್ರೀ ಎಚ್.ಆರ್.ಕೇಶವ ಮೂರ್ತಿ:** ೧೨ ವರ್ಷದ ಎನ್‌ಕಂಬರೆನ್ಸ್ ಸರ್ಟಿಫಿಕೇಟ್ ಸಾಕು ಎಂದು ಹೇಳುತ್ತೀರಿ. ಲೋಕಲ್ ಕಮಿಟ್‌ಮೆಂಟ್ ಏನಿದೆ ಎಂಬ ಸಂಪೂರ್ಣ ಸಮಾಚಾರ ಸಿಕ್ಕುತ್ತದೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಡ್ವರ್ಸ್ ಪೊಸಿಷನ್ ಎಂದರೆ ೧೨ ವರ್ಷ. ೧೨ ವರ್ಷ ಸಾಕು ಎಂದು ಆಲ್ ಇಂಡಿಯಾ ಕಾನ್ಫರೆನ್ಸ್ ನಲ್ಲಿ ಮತ್ತು ಮೈಸೂರು ಸಂಸ್ಥಾನ ಕಾನ್ಫರೆನ್ಸ್ ನಲ್ಲಿ ಶಿಫಾರಸ್ಸು ಮಾಡಿದ್ದಾರೆ. ಯೋಚನೆ ಮಾಡಿ ಇಷ್ಟರಲ್ಲೇ ಒಂದು ಗವರ್ನಮೆಂಟ್ ಆರ್ಡರ್ ಹೊರಡಿಸುತ್ತೇವೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವಿಚಾರವು ಹೆಚ್ಚಿನ ಪರಿಶೀಲನೆಯಲ್ಲಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಅಡ್ವರ್ಸ್ ಪೊಸಿಷನ್ ಎಂದರೆ 12 ವರ್ಷ ಇದನ್ನು ಪಾಲಿಸಬಹುದೇನೋ ಎಂದು ನಾವು ಎಲ್ಲ ರೀತಿಯಲ್ಲೂ ಪರೀಕ್ಷಿಸುತ್ತೇವೆ.

# ಕೃಷಿ ಸಹಕಾರ ಸಂಘ

**6ನೇ ಮಾರ್ಚ್ 1963**

**ಶ್ರೀ ಎಂ.ಸಿ.ಬಸಪ್ಪ:** ಈ ಸಹಕಾರ ಸಂಘಗಳು ರಿಜಿಸ್ಟರ್ ಆಗಿ ಎಷ್ಟು ದಿವಸ ಆಯಿತು, ಎಷ್ಟು ಸಹಾಯ ಧನ ಕೊಡಲಾಗಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಗ್ರಿಕಲ್ಚರ್ ಫಾರ್ಮಿಂಗ್ ಸೊಸೈಟಿಯು ಮುದ್ದನಹಳ್ಳಿಯಲ್ಲಿ ಮೊದಲು ಪ್ರಾರಂಭವಾಯಿತು. ಹಾಗೂ 04.03.1960ರಲ್ಲಿ ರಿಜಿಸ್ಟರ್ ಆಗಿದೆ. ನಂತರದಲ್ಲಿ ಕೊನೆಯ ಫೆಬ್ರವರಿಯಲ್ಲಿ ಉಳಿದ ಸೊಸೈಟಿಗಳು ಬಂದವು. ಇದನ್ನು ಅವರಿಗೂ ಕೊಟ್ಟಿದ್ದೇವೆ.

**ಶ್ರೀ ಎಂ.ಸಿ.ಬಸಪ್ಪ:** ವ್ಯವಸಾಯದ ಸಹಕಾರ ಸಂಘಕ್ಕೆ ಲಿಫ್ಟ್ ಇರಿಗೇಷನ್ ಬಗ್ಗೆ ಸಹಾಯ ಏನಾದರು ಸರ್ಕಾರದವರು ಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ತಿಳಿದಿಲ್ಲ.

**ಶ್ರೀ ಕೆ.ಲಕ್ಕಪ್ಪ:** ಶೇರ್ ಹೋಲ್ಡರ್ಸ್‌ಗಳ ಬಲವೆಷ್ಟು?

**ಸಭಾಧ್ಯಕ್ಷರು:** ಅವರೆಲ್ಲರೂ ವೆರಿ ಸ್ಟ್ರಾಂಗ್ ಮಾನ್ಯ ಸದಸ್ಯರನ್ನು ಸದಸ್ಯರು ಎಂದು ರೆಫರ್ ಮಾಡಲಾಗಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಟಿ.ಡಿ.ದೇವೇಂದ್ರಪ್ಪ:** ೧.೯೦೦ ಎಕರೆ ಜಮೀನನ್ನು ಕೊಟ್ಟಿರುವುದರಲ್ಲಿ ೨೮೦ ಎಕರೆ ಸಾಗುವಳಿ ಆಗಿದೆ ಎಂದು ಹೇಳಿದ್ದೀರಿ. ಬಾಕಿ ಜಮೀನು ಸಾಗುವಳಿ ಆಗುವುದರ ಬಗ್ಗೆ ಏನು ತೊಂದರೆ ; ಏಕೆ ಆಗಿಲ್ಲ ; ಕೊಟ್ಟು ಎಷ್ಟು ವರ್ಷ ಆಯಿತು?

**ಶ್ರೀ ಕೊಂಡಜ್ಜಿ ಬಸಪ್ಪ:** ಮುದಹಳ್ಳಿ ಅಗ್ರಿಕಲ್ಚರ್ ಕೋ-ಅಪರೇಟಿವ್ ಫಾರ್ಮಿಂಗ್ ಸೊಸೈಟಿ ೨೦-೮-೧೯೬೨ ರಲ್ಲಿ ರಿಜಿಸ್ಟರ್ ಆಗಿದೆ. ಸುಮಾರು ೬೦೦ ಎಕರೆ ಕೊಡಲಾಗಿದೆ. ೮೦ ಎಕರೆ ಮಾತ್ರ ಸಾಗಿಗೆ ತಂದಿದ್ದಾರೆ. ಸ್ವಲ್ಪ ಮಟ್ಟಿಗೆ ಹಣದ ಕೊರತೆ ಇತ್ತು ಎಂದು ಕಾಣುತ್ತದೆ. ಆದ್ದರಿಂದ ಬಾಕಿ ಇದದ್ದನ್ನು ಸಾಗು ಮಾಡಿಲ್ಲ. ಇನ್ನೊಂದು ಸೊಸೈಟಿ ಕುಂಬಳವಾಡ ಜಾಯಿಂಟ್ ಕೋ-ಅಪರೇಟಿವ್ ಸೊಸೈಟಿಗೆ ೫೦೦ ಎಕರೆ ಮಂಜೂರಾಗಿದೆ. ೧೨೦ ಎಕರೆ ಸಾಗಿಗೆ ತಂದಿದ್ದಾರೆ. ಇನ್ನೊಂದು ಸೊಸೈಟಿ ಕೊಂಡೇಶ್ವರ ಜಾಯಿಂಟ್ ಕೋ-ಅಪರೇಟಿವ್

ಸೊಸೈಟಿಗೆ ೪೦೦ ಎಕರೆ ಮಂಜೂರಾಗಿದೆ. ಇನ್ನೊಂದು ಗೋವರ್ಧನ ಜಾಯಿಂಟ್ ಕೋ-ಅಪರೇಟಿವ್ ಸೊಸೈಟಿಗೆ ೫೦೦ ಎಕರೆ ಮಂಜೂರಾಗಿದೆ. ೮೦ ಎಕರೆ ಸಾಗಿಗೆ ತಂದಿದ್ದಾರೆ. ಇವೆಲ್ಲಾ ಕಳೆದ ವರ್ಷ ನವೆಂಬರ್‌ನಲ್ಲಿ ರಿಜಿಸ್ಟರ್ ಆದವು. ಆದ್ದರಿಂದ ಕಾಲಾವಧಿ ಸ್ವಲ್ಪ ಇತ್ತು ಮತ್ತು ಹಣದ ಕೊರತೆ ಇತ್ತು. ಇದಕ್ಕೆ ಹಣದ ಸಹಾಯ ಕೊಡಬೇಕೆಂದು ಅಸಿಸ್ಟೆಂಟ್ ರಿಜಿಸ್ಟ್ರಾರ್ ಅವರಿಂದ ಪ್ರಪೋಸಲ್ ಬಂದಿದೆ. ಎಷ್ಟು ಹಣ ಸಹಾಯ ಪಡೆಯುತ್ತೇವೆ ಎಂಬುದನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

**ಶ್ರೀ ಎಂ.ಸಿ.ಬಸಪ್ಪ:** ಸಾಮೂಹಿಕವಾಗಿ ಬಾವಿಗಳನ್ನು ಮಾಡಿ ಲಿಫ್ಟ್ ಇರಿಗೇಷನ್ ಮಾಡುತ್ತೇವೆ. ಎಂದು ಸರ್ಕಾರಕ್ಕೆ ಪ್ರಾರ್ಥನೆ ಏನಾದರೂ ಬಂದಿದೆಯೇ? ಆ ತರಹ ಬಂದರೆ ಸಹಾಯ ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ಕೋ-ಆಪರೇಟಿವ್ ಫಾರ್ಮಿಂಗ್‌ನ ಪ್ರಮುಖ ಉದ್ದೇಶಗಳಲ್ಲಿ ಅದು ಒಂದು. ನೀರಾವರಿ ಮುಖಾಂತರ ಭೂ ಅಭಿವೃದ್ಧಿ ಪಡಿಸುವುದು ಮುಖ್ಯ ಉದ್ದೇಶವಾಗಿದೆ.

**ಶ್ರೀ ಎಂ.ಸಿ.ಬಸಪ್ಪ:** ಈಗಾಗಲೇ ಸರ್ಕಾರಕ್ಕೆ ಮನವಿ ಬಂದಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ತಿಳಿದಿಲ್ಲ.

**ಶ್ರೀ ಎಸ್.ವಿ.ರಾಮೇಗೌಡ** – ಈ ಕೂಡೊಕ್ಕಲು ಸಹಕಾರ ಸಂಘಗಳ ಮೇಲ್ವಿಚಾರಣೆ ನೋಡಿಕೊಳ್ಳುವವರು ಯಾರು?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸ್ವಪ್ರೇರಿತ ಸಂಘಟನೆ/ಸಂಸ್ಥೆಯಾಗಿದೆ. ಅಲ್ಲಿ ಬೋರ್ಡ್ ಆಫ್ ಮ್ಯಾನೆಜ್‌ಮೆಂಟ್ ಇದೆ. ನಾವು ಅವರಿಗೆ ಮಾರ್ಗದರ್ಶನವಷ್ಟೇ ನೀಡಬೇಕು.

**ಶ್ರೀ ಟಿ.ಡಿ.ದೇವೇಂದ್ರಪ್ಪ:** ಕೊಡೊಕ್ಕಲು ವ್ಯವಸಾಯದಿಂದ ಬರತಕ್ಕ ಆದಾಯವನ್ನು ಯಾವ ರೀತಿಯಲ್ಲಿ ಹಂಚುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಸಾಮಾನ್ಯವಾಗಿ ಮೊದಲನೇ ವರ್ಷದಲ್ಲಿ ಆದರೆ ಕಡಿಮೆ ಲಾಭವಿರುತ್ತದೆ. ಸದಸ್ಯರ ಮಕ್ಕಳ ವಿದ್ಯಾಭ್ಯಾಸಕ್ಕೆ ಅವರು ಕೊಟ್ಟರೆ ಆಗ ಅವರು ಜಾಸ್ತಿ ಲಾಭವನ್ನು ಹಂಚಿಕೆ ಮಾಡಿದಂತೆ ಆಗುತ್ತದೆ.

# ಸಹಕಾರಿ ತರಬೇತಿ ಕಾಲೇಜನ್ನು ವರ್ಗಾಯಿಸುವ ಬಗ್ಗೆ

7ನೇ ಮಾರ್ಚ್ 1963

**ಶ್ರೀ ಎಮ್.ಸಿ. ಬಸಪ್ಪ (ಚಾಮರಾಜನಗರ):-**

ಅ. ಮೈಸೂರಿನಲ್ಲಿ ತೆರೆಯಬೇಕೆಂದು ಭಾರತ ಸರ್ಕಾರದ ಕೋ-ಆಪರೇಟಿವ್ ಟ್ರೈನಿಂಗ್ ಕಾಲೇಜ್‌ನ್ನು ಬೆಂಗಳೂರಿಗೆ ಬದಲಾಯಿಸುತ್ತಿರುವುದು ನಿಜವೇ/ವಾಸ್ತವವೇ?

ಆ. ಹೌದು ಎಂದಲ್ಲಿ, ಅದಕ್ಕೆ ಬಲವಂತದ ಕಾರಣಗಳು ಯಾವುವು?

ಇ. ಮೇಲೆ ತಿಳಿಸಿರುವ ಕಾಲೇಜ್‌ನ್ನು ನಡೆಸಲು ರಾಜ್ಯ ಸರ್ಕಾರದವರು ಯಾವ ನೆರವನ್ನು ನೀಡುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

ಅ. ಹೌದು, ಮೊದಲು ಮೈಸೂರಿನಲ್ಲಿ ಪ್ರಾರಂಭಿಸಲು ಉದ್ದೇಶಿಸಲಾಗಿದ್ದ ಇಂಟರ್ ಮಿಡಿಯಟ್ ಕೋ-ಆಪರೇಟಿವ್ ಟ್ರೈನಿಂಗ್ ಸೆಂಟರ್‌ನ್ನು ಬೆಂಗಳೂರಿಗೆ ಬದಲಾಯಿಸುತ್ತಿದ್ದೇವೆ.

ಆ. ಆಡಳಿತಾತ್ಮಕ ಸೌಕರ್ಯಗಳು.

ಇ. ಇಂಟರ್ ಮೀಡಿಯೇಟ್ ಕೋ-ಆಪರೇಟಿವ್ ಟ್ರೈನಿಂಗ್ ಸೆಂಟರನ್ನು ನಡೆಸುವ ಸಂಪೂರ್ಣ ವೆಚ್ಚವನ್ನು ಭಾರತ ಸರ್ಕಾರವು ವಹಿಸಿಕೊಂಡಿದೆ/ಕೊಡುತ್ತದೆ.

**ಶ್ರೀ ಎಂ.ಸಿ.ಬಸಪ್ಪ:** ಈ ಇಂಟರ್ ಮೀಡಿಯಟ್ ಕೋ-ಆಪರೇಟಿವ್ ಟ್ರೈನಿಂಗ್ ಸೆಂಟರ್ ಅನ್ನು ಮೈಸೂರಿನಲ್ಲಿ ತೆರೆಯಬೇಕೆಂದು ಸರ್ಕಾರ ತೀರ್ಮಾನ ತೆಗೆದುಕೊಂಡ ಮೇಲೆ, ಬೆಂಗಳೂರಿಗೆ ಬದಲಾಯಿಸಬೇಕೆಂದು ಇರುವುದಕ್ಕೆ ಇಲ್ಲಿರತಕ್ಕ ಆಡಳಿತ ಅನುಕೂಲತೆ ಏನು?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರಾರಂಭದಲ್ಲಿ ಬೆಂಗಳೂರಿನಲ್ಲೇ ಸ್ಥಾಪನೆ ಮಾಡಬೇಕೆಂದು ಯೋಚನೆ ಮಾಡಲಾಗಿತ್ತು. ಆಗ ಸರಿಯಾದ ಕಟ್ಟಡದ ಅನುಕೂಲತೆ ಸಿಕ್ಕಲಿಲ್ಲ. ಮೈಸೂರಿನಲ್ಲಿ ಸಿಕ್ಕುತ್ತದೆ ಎಂದು ಗೊತ್ತಾಯಿತು. ಮೈಸೂರಿನಲ್ಲಿ ಒಂದು ಜೂನಿಯರ್ ಲೆವೆಲ್ ಟ್ರೈನಿಂಗ್ ಸೆಂಟರ್ ಇತ್ತು. ಇದಕ್ಕೆ ಕಟ್ಟಡ ಸಿಕ್ಕಲಿಲ್ಲ. ಬೆಂಗಳೂರಿನಲ್ಲಿ ಈಗ ಕಟ್ಟಡ ಸಿಕ್ಕುತ್ತದೆ ಎಂದು ಹೇಳಿ ಇಲ್ಲಿಗೆ ಬದಲಾಯಿಸಿದ್ದೇವೆ. ಇದಕ್ಕೆ ಒಂದು ಲೋಕಲ್ ಕಮಿಟಿ ಮಾಡಿದ್ದೇವೆ. ಸ್ಟೇಟ್ ಯೂನಿಯನ್ ಪ್ರೆಸಿಡೆಂಟರು ಚೇರ್ಮನ್ ಆಗಿದ್ದಾರೆ. ರಿಜಿಸ್ಟ್ರಾರ್ ಅವರು ಸದಸ್ಯರಾಗಿದ್ದಾರೆ. ಕೇರಳದ ಸ್ಟೇಟ್ ಯೂನಿಯನ್ ಪ್ರೆಸಿಡೆಂಟರು ಇದ್ದಾರೆ. ಶ್ರೀಮತಿ ಮಹಿಷಿ, ಎಂ.ಪಿ. ಅವರು ಸದಸ್ಯರಾಗಿದ್ದಾರೆ. ಆಡಳಿತದ ದೃಷ್ಟಿಯಿಂದಲೂ ಕೂಡ ಬೆಂಗಳೂರಿನಲ್ಲಿ ತೆರೆಯುವುದು

ಒಳ್ಳೆಯದು ಮತ್ತು ಆಗಾಗ್ಗೆ ಹೊರಗಿನಿಂದ ಬರತಕ್ಕ ಪರಿಣಿತರಿಂದ ಲೆಕ್ಚರ್ಸ್ ಏರ್ಪಾಡು ಮಾಡುವುದಕ್ಕೂ ಸುಲಭವಾಗುತ್ತದೆ ಎಂಬ ದೃಷ್ಟಿಯಿಂದ ಬೆಂಗಳೂರಿನಲ್ಲಿ ಮಾಡಬೇಕೆಂದು ತೀರ್ಮಾನಿಸಲಾಯಿತು.

**ಶ್ರೀ ಎಂ.ಸಿ.ಬಸಪ್ಪ:** ಮೂರು ಜನ ಅಧಿಕಾರಿಗಳನ್ನು ಈ ಕಾಲೇಜಿಗೆ ಪ್ರಿನ್ಸಿಪಾಲರಾಗಿ ವರ್ಗಾಯಿಸಿ ಅವರು ಅಧಿಕಾರ ವಹಿಸಿಕೊಳ್ಳಲಿಕ್ಕೆ ಇಷ್ಟ ಪಡದೇ ಇದ್ದುದ್ದು ನಿಜವೇ?

**ಶ್ರೀ ಕೊಂಡಜ್ಜಿ ಬಸಪ್ಪ–** ಅದು ನಿಜವಲ್ಲ.

**ಶ್ರೀ ಜಿ.ವಿ.ಗೌಡ –** ಮೈಸೂರು ನಗರದಲ್ಲಿ ತಾವು ಹೇಳಿದ ಸೌಲಭ್ಯ ಸಿಕ್ಕಲಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ –** ಅಲ್ಲಿ ಕಟ್ಟಡ ಸಿಕ್ಕಲಿಲ್ಲ.

**ಶ್ರೀ ಎಂ.ಸಿ.ಬಸಪ್ಪ –** ಇದು ನಿಜವಾಗಿಯೂ ಮೈಸೂರಿನ ಜನತೆಗೆ ಅನ್ಯಾಯಿಸುವುದರಿಂದ ಈ ರಾಜ್ಯದವರಿಗೆ ಎಷ್ಟು ಸೀಟುಗಳನ್ನು ಕೊಟ್ಟಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ –** ಮೈಸೂರಿನವರಿಗೆ ೪೦, ಕೇರಳದವರಿಗೆ ೧೫ ಸೀಟು ಕೊಡಲಾಗಿದೆ.

**ಶ್ರೀ ಎಂ.ಸಿ.ಬಸಪ್ಪ –** ಇದನ್ನು ಸರ್ಕಾರದವರೇ ನಡೆಸುತ್ತಾ ಇದ್ದಾರೆಯೋ? ಕೋ–ಆಪರೇಟಿವ್ ಯೂನಿಯನ್ ಅವರು ನಡೆಸುತ್ತಾ ಇದ್ದಾರೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ:** ನ್ಯೂ ಡೆಲ್ಲಿಯ ನ್ಯಾಷನಲ್ ಕೋ–ಆಪರೇಟಿವ್ ಯೂನಿಯನ್ ಇದರ ಮೇಲೆ ಸಂಪೂರ್ಣ ಹತೋಟಿಯನ್ನು ಹೊಂದಿದೆ. ಅವರು ಮೇಲ್ವಿಚಾರಣೆಗಾಗಿ ಸ್ಥಳೀಯ ಸಮಿತಿಯೊಂದನ್ನು ರಚಿಸಿದ್ದಾರೆ. ಸಂಪೂರ್ಣ ಹಣಕಾಸು ಅವರಿಂದ ನಡೆಯುತ್ತದೆ.

**ಶ್ರೀ ಟಿ.ಡಿ.ದೇವೇಂದ್ರಪ್ಪ:** ಕಟ್ಟಡದ ತೊಂದರೆ ಅಂತ ಬೆಂಗಳೂರಿಗೆ ಬದಲಾಯಿಸಲಾಯಿತು ಎಂದು ಹೇಳಿದ್ದಿರಿ. ನಿಮಗೆ ಬೇಕಾಗಿರತಕ್ಕ ಶ್ರೇಷ್ಟವಾದ ಕಟ್ಟಡ ಮೈಸೂರಿನವರು ಕೊಡುವುದಾದರೆ ಪುನಃ ಅಲ್ಲೇ ಶುರು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಅದು ಒಂದೇ ತೊಂದರೆ ಎಂದು ಹೇಳಲಿಲ್ಲ. ಬೆಂಗಳೂರಿಗೆ ಆಗಾಗ್ಗೆ ದೊಡ್ಡ ದೊಡ್ಡ ಪರಿಣತರು ಬರುತ್ತಾರೆ. ಭಾಷಣ ಮಾಡಿಸಬೇಕಾಗುತ್ತದೆ ಮತ್ತು ಪಾಯಿಂಟ್ ರಿಜಿಸ್ಟರ್ ಅವರು ಇಲ್ಲಿ ಇದ್ದರೆ. ಹೆಡ್ ಆಫ್ ದಿ ಡಿಪಾರ್ಟ್ ಮೆಂಟ್ ಅವರು ಹೋಗಿ ಲೆಕ್ಚರ್ ಕೊಡಬೇಕಾಗುತ್ತದೆ. ಇದೆಲ್ಲಾ ದೃಷ್ಟಿಯಿಂದ ಮತ್ತು ಲೋಕಲ್ ಕಮಿಟಿ ಹೆಡ್ ಕ್ವಾರ್ಟರ್ಸ್ ಇದು ಆಗಿರುವುದರಿಂದ ಇಲ್ಲೇ ಇರುವುದು ಉತ್ತಮ ಎಂದು ತೀರ್ಮಾನ ಮಾಡಲಾಯಿತು.

**ಶ್ರೀ ಎಂ.ಸಿ.ಬಸಪ್ಪ:** ಕಾಲೇಜಿನ ಆಡಳಿತ ಕೋ–ಆಪರೇಟಿವ್ ಯೂನಿಯನ್ ಗೆ ವಹಿಸುವುದು ಸರಿಯಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ಯೋಚನೆ ಮಾಡಿದ್ದೇವೆ.

# ಸ್ಥಳೀಯ ಅಭಿವೃದ್ಧಿ ಮಂಜೂರಾತಿ ಹಣ ಹಂಚುವ ಬಗ್ಗೆ

7ನೇ ಮಾರ್ಚ್ 1963

**ಶ್ರೀ ಎಮ್.ಸಿ. ಬಸಪ್ಪ (ಚಾಮರಾಜನಗರ)**

ಅ. 1962–63ನೇ ವರ್ಷದ ಕೆಲಸಗಳನ್ನು ಕೈಗೊಳ್ಳಲು ರಾಜ್ಯದಲ್ಲಿರುವ ಎಲ್ಲಾ ತಾಲ್ಲೂಕುಗಳಿಗೆ ಲೋಕಲ್ ಡೆವಲಪ್‌ಮೆಂಟ್ ಗ್ರಾಂಟ್ಸ್‌ನ್ನು ನೀಡಲಾಗುವುದೇ?

ಆ. ಹೌದು ಎಂದಲ್ಲಿ, ಚಾಮರಾಜನಗರ ತಾಲ್ಲೂಕಿಗೆ ಎಷ್ಟು ಹಣವನ್ನು ನೀಡಲಾಗುವುದು?

ಇ. ಇಲ್ಲ ಎಂದಲ್ಲಿ, ವಿಳಂಬವಾಗುತ್ತಿರುವುದಕ್ಕೆ ಕಾರಣಗಳು.

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ)**

ಅ. ಎಲ್ಲಾ ತಾಲ್ಲೂಕುಗಳಿಗೆ ಗ್ರಾಂಟ್ಸ್‌ನ್ನು ಹಂಚಲಾಗುವುದು. ಹಣಕ್ಕೆ / ಫಂಡ್ಸ್‌ನ್ನು ಕೇಳಲಾಗಿದೆ.

ಆ. 13,92021 ರೂಪಾಯಿಗಳು (ಕೇಂದ್ರ ಆಯೋಜಿಸಿರುವ/ಸ್ಟಾಂಡರ್ಡ್ ಕಾರ್ಯಕ್ರಮದ ಅಡಿಯಲ್ಲಿ) 32,250 ರೂಪಾಯಿಗಳನ್ನು (ರಾಜ್ಯ ಎಲ್.ಡಿ.ಡಬ್ಲ್ಯೂಸ್ ಕಾರ್ಯಕ್ರಮದ ಅಡಿಯಲ್ಲಿ)

ಇ. ಉದ್ಭವವಾಗುವುದಿಲ್ಲ.

**ಶ್ರೀ ಎಂ.ಸಿ.ಬಸಪ್ಪ:** ಕೇಂದ್ರ ಸರ್ಕಾರದ ಹಾಗೂ ಸಂಸ್ಥಾನ ಸರ್ಕಾರದ ಗ್ರಾಂಟನ್ನು ಇಂಥ ತಾಲ್ಲೂಕಿಗೆ ಇಷ್ಟು ಮಂಜೂರಾಗಿದೆ. ಎಂಬುದನ್ನು ಯಾವ ರೀತಿ ತಾಲ್ಲೂಕುಗಳಿಗೆ ತಿಳಿವಳಿಕೆ ಕೊಡಲಾಗುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ೧೯೬೨ ನೇ ಏಪ್ರಿಲ್ ತಿಂಗಳಲ್ಲಿ ಬಂದ ೭ ಲಕ್ಷ ೬೪ ಸಾವಿರ ರೂ ಗಳ ಗ್ರಾಂಟ್ ಅನ್ನು ನಾಲ್ಕು ಡಿವಿಜನ್‌ಗಳಿಗೂ ಈಕ್ವಲ್ ಆಗಿ ಡಿಸ್ಟ್ರಿಬ್ಯೂಟ್ ಮಾಡಿದ್ದೇವೆ.

**ಶ್ರೀ ಎಂ.ಸಿ.ಬಸಪ್ಪ:** ನಾನು ಕೇಳುತ್ತಿರುವುದು ನಮ್ಮ ಚಾಮರಾಜನಗರ ತಾಲ್ಲೂಕಿನ ವಿಚಾರ

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ಹೇಳುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಅದನ್ನು ಹೇಳುತ್ತೇನೆ.1962ರ ನವೆಂಬರ್‌ನಲ್ಲಿ ನಾವು 17,36,000 ಲಕ್ಷ ರೂಪಾಯಿಗಳ ಗ್ರ್ಯಾಂಟ್‌ನ್ನು ಸ್ವೀಕರಿಸಿದ್ದೇವೆ ಹಾಗೂ ಸಮನಾಗಿ ಹಂಚಿದ್ದೇವೆ. ವಿಭಾಗಗಳಿಗೆ ಗ್ರ್ಯಾಂಟ್ಸ್‌ನ್ನು ಹಂಚುತ್ತೇವೆ : ಪ್ರತಿಯೊಂದು ಜಿಲ್ಲೆಗೆ ವಿಭಾಗೀಯ ಕಮೀಶನರ್‌ರವರು ಗ್ರ್ಯಾಂಟ್ಸ್‌ನ್ನು ಹಂಚುತ್ತಾರೆ ಮತ್ತು ತಾಲ್ಲೂಕುಗಳಿಗೆ ಜಿಲ್ಲಾಧಿಕಾರಿಗಳು ಗ್ರ್ಯಾಂಟ್ಸ್‌ನ್ನು ಹಂಚುತ್ತಾರೆ.

**ಶ್ರೀ ಎಂ.ಸಿ.ಬಸಪ್ಪ:** ನಾನು ಕೇಳುತ್ತಿರುವುದು ಸರ್ಕಾರದವರು ಈ ಮಂಜೂರಾಗತಕ್ಕ ಗ್ರ್ಯಾಂಟಿನ ವಿಚಾರವನ್ನು ಯಾವ ತಿಂಗಳಲ್ಲಿ ತಾಲ್ಲೂಕಿಗೆ ತಿಳಿಸುತ್ತಾರೆ ಎಂತ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ವಿಚಾರವನ್ನು ಈಗ ಹೇಳುವುದಕ್ಕಾಗುವುದಿಲ್ಲ.

**ಶ್ರೀ ಎಂ.ಸಿ. ಬಸಪ್ಪ:** ಬಡ್ಜೆಟ್ ಮಾರ್ಚಿ ತಿಂಗಳಲ್ಲಿ ಪಾಸಾದರೂ ವರುಷವೆಲ್ಲ ಆ ವಿಚಾರ ತಿಳಿಸದೆ ಮುಂದಿನ ಜನವರಿಯಲ್ಲಿ ಸಹ ಅದರ ಇಂಟಿಮೇಷನ್ ಬರುತ್ತಿಲ್ಲ. ಇಷ್ಟು ನಿಧಾನವಾಗಿ ತಿಳಿಸುತ್ತಿರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಮೂಲತಃ, ರಾಜ್ಯ ಶಾಸಕಾಂಗದಲ್ಲಿ 1962-63 ಬಜೆಟ್ ಅಂದಾಜಿನಲ್ಲಿ ಒಂದು ಮೂರಂಶ ವೆಚ್ಚವನ್ನು ಅಪ್ರೂವ್ ಮಾಡಿದ್ದಾರೆ. ಆದ್ದರಿಂದ, ಒಟ್ಟು 25 ಲಕ್ಷಗಳಲ್ಲಿ ಮೂಲತಃ 7,64,000 ಲಕ್ಷರೂಪಾಯಿಗಳನ್ನು ಮಂಜೂರು ಮಾಡಲಾಗಿದೆ ಹಾಗೂ ನಂತರದಲ್ಲಿ ಉಳಿದ ಬಾಕಿಯು/ಬ್ಯಾಲೆನ್ಸ್ ಹಣವನ್ನು ಹಣವನ್ನು ಹಂಚಲಾಗುವುದು.

**ಶ್ರೀ ಎಂ.ಸಿ. ಬಸಪ್ಪ:** ನಮ್ಮ ಸರ್ಕಾರದವರು ನಮ್ಮ ತಾಲ್ಲೂಕಿಗೆ ಈಗ ರೂ ೩.೨೩.೫೦ ಕೊಟ್ಟಿದ್ದಾರೆ. ಇದು ಯಾವ ಕೆಲಸಕ್ಕೆ? ಇಷ್ಟು ಸಣ್ಣ ಅಮೌಂಟಿನಿಂದ ಏನಾಗುತ್ತದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಸಿಗುತ್ತಿಲ್ಲ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಈ ಸಹಾಯವನ್ನು ಯಾರು ಕೇಳಿದ್ದರೋ ಅವರಿಗೆ ಮಾತ್ರ ಕೊಡಲಾಗುವುದು ಎಂತ ಹೇಳಿದ್ದಾರೆ. ಕೇಳದಿದ್ದರೆ ಕೊಡುವುದಿಲ್ಲವೆಂದು ಅರ್ಥವೋ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಡಿವಿಜನ್ ಕಮಿಷನರುಗಳಿಗೆ ಆ ಮೊಬಲಗನ್ನು ಈಕ್ವಲ್ ಆಫ್ ಹಂಚಿಬಿಡುತ್ತೇವೆ. ಅವರು ಡೆಪ್ಯೂಟಿ ಕಮಿಷನರಿಗೆ ಅದನ್ನು ಹಂಚುತ್ತಾರೆ. ಅವರು ತಾಲ್ಲೂಕುಗಳಿಗೆ ಹಂಚುತ್ತಾರೆ.

**ಶ್ರೀ ಎಸ್.ಸುಬ್ಬಯ್ಯ ನಾಯಕ್** – ಸರಕಾರದವರು ಹಂಚತಕ್ಕದ್ದನ್ನು ಹೇಳಿದರು. ಆದರೆ ಈ ವಿಚಾರ ತಾಲ್ಲೂಕುಗಳಿಗೆ ಇಷ್ಟೇ ಬೇಕು ಎಂಬುದನ್ನು ಆ ಅಧಿಕಾರಿಗಳು ಹೇಗೆ ತಿಳಿದುಕೊಳ್ಳುತ್ತಾರೆ?

**ಶ್ರೀ ಕೊಂಡಜ್ಜಿ ಬಸಪ್ಪ**:ಪ್ರತಿಯೊಂದು ತಾಲ್ಲೂಕಿನ ಅಗತ್ಯಗಳ ಹೇಳಿಕೆಯನ್ನು ಜಿಲ್ಲಾಧಿಕಾರಿಗಳ ಬಳಿ ಹಂಚುವ ಸಮಯದಲ್ಲಿ ಇರಬೇಕು.

**ಶ್ರೀ ಎಸ್. ಸುಬ್ಬಯ್ಯ ನಾಯಕ್** – ಅವರು ಕೇಳದಿದ್ದರೆ ಕೊಡುವುದಿಲ್ಲ ಅಂತ ಅಭಿಪ್ರಾಯವೇ?

**ಶ್ರೀ ಕೊಂಡಜ್ಜಿ ಬಸಪ್ಪ**: ಎಲ್ಲಿ ಅವಶ್ಯಕತೆ ಇದೆಯೋ ಅಲ್ಲಿ ಜಿಲ್ಲಾಧಿಕಾರಿಗೆ ಹಂಚಲಾಗುವುದು. ಅವರಿಗೆ ಕೋರಿಕೆ ಬರದಿದ್ದಲ್ಲ, ಅವರು ಸಹಾಯ ಮಾಡಲು ಆಗುವುದಿಲ್ಲ.

**ಶ್ರೀ ಎಂ.ಸಿ.ಬಸಪ್ಪ**: ಕಾಲ ವಿಳಂಬ ಬಹಳವಾಗಿ ಆಗುತ್ತಿದೆ. ಇದು ಸಫಲವಾಗಲು ಬೇಗ ಜನರಿಗೆ ಸಿಗುವಂತೆ ಏರ್ಪಾಡು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** : ಆದಷ್ಟು ಬೇಗ ತಿಳಿಸುವುದಕ್ಕೆ ಪ್ರಯತ್ನ ಮಾಡುತ್ತೇನೆ.

**ಶ್ರೀ ಜಿ.ರಾಮೇಗೌಡ** – ಜಿಲ್ಲಾಧಿಕಾರಿಗಳು ಮಾಡತಕ್ಕ ತೀರ್ಮಾನ ಜಿಲ್ಲಾಭಿವೃದ್ಧಿ ಮಂಡಳಿಗಳಿಗೆ ಒಳಪಟ್ಟಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ**: ಸಾಮಾನ್ಯವಾಗಿ ಈ ಎಲ್ಲ ಸಂಗತಿಗಳನ್ನು ಅವರು ಜಿಲ್ಲಾಭಿವೃದ್ಧಿ ಮಂಡಳಿಯಲ್ಲಿ ಚರ್ಚಿಸಬೇಕು.

**ಶ್ರೀ ಎಸ್.ಗೋಪಾಲ ಗೌಡ** – ೨೫ ಲಕ್ಷ ರೂಪಾಯಿಗಳನ್ನು ಈ ಬಾಬಿನಲ್ಲಿಟ್ಟಿದ್ದೇನೆಂದು ಹೇಳಿದ್ದಾರೆ. ಇದನ್ನು ಎರಡನೆಯ ಕಂತಿನಲ್ಲಿ ಕೊಡಬೇಕೆಂದು ಸರ್ಕಾರದವರು ಯಾವಾಗ ಮಂಜೂರು ಮಾಡಿದರು?

**ಶ್ರೀ ಕೊಂಡಜ್ಜಿ ಬಸಪ್ಪ** – ನವೆಂಬರ್ ೧೯೬೨ ಎಂದು ಹೇಳಿದೆ.

**ಶ್ರೀ ಎಸ್.ಗೋಪಾಲ ಗೌಡ** – ಈ ಹಣವನ್ನು ಕೊಡುವಾಗ ಅವರ ಅವಶ್ಯಕತೆಯನ್ನು ಗಮನದಲ್ಲಿಟ್ಟು ಹಂಚುತ್ತೇವೆಂದು ಹೇಳಿದರು. ರಸ್ತೆ ಕೆಲಸಗಳು ಹೆಚ್ಚಾಗಿರುತ್ತದೆ ಅವರು ಮಾಡಬೇಕಾದದ್ದು. ಆದರೂ ಕೇಳಿದಷ್ಟು ಹಣವನ್ನು ಸರ್ಕಾರದವರು ಕೊಡುವುದಕ್ಕಾಗಿಲ್ಲವೆನ್ನುವುದನ್ನು ಸರ್ಕಾರದವರು ಒಪ್ಪಿಕೊಳ್ಳುತ್ತಾರೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ** – ಬಡ್ಜೆಟ್ಟಿನಲ್ಲಿರುವುದೇ ೨೫ ಲಕ್ಷ. ಅದನ್ನು ನಾಲ್ಕು ಡಿವಿಜನ್ ಗಳಿಗೂ ಸಮವಾಗಿ ಹಂಚಿದ್ದೇವೆ.

73. 7.42 ಶೈಕ್ಷಣಿಕ ಸಮಿತಿಯನ್ನು ಹೊರತುಪಡಿಸಿ, ಮೇಲ್ಕಂಡ ಎಲ್ಲ ಸಮಿತಿಗಳಿಗೂ ಜಿಲ್ಲಾ ಪರಿಷತ್ತಿನ ಅಧ್ಯಕ್ಷನು ಪದನಿಮಿತ್ತ ಸದಸ್ಯ ಹಾಗೂ ಅಧ್ಯಕ್ಷನಾಗಿಯೂ, ಉಪಾಧ್ಯಕ್ಷನು ಶೈಕ್ಷಣಿಕ ಸಮಿತಿಯ ಸದಸ್ಯ ಹಾಗೂ ಅಧ್ಯಕ್ಷನಾಗಿಯೂ ಇರತಕ್ಕದ್ದು.

74. 7.43 ರಾಜ್ಯ ಸರ್ಕಾರ ಅಥವಾ ಸಾರ್ವಜನಿಕ ಇಲಾಖೆಯ ನಿರ್ದೇಶಕನ ವ್ಯಾಪ್ತಿಗೆ ಹೊರತಾದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಈ ಸಮಿತಿಯಲ್ಲಿ ಒಳಗೊಳ್ಳುವುವು.

75. 7.44 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಈ ಎಲ್ಲ ಸಮಿತಿಗಳ ಕಾರ್ಯದರ್ಶಿಯಾಗಿರುತ್ತಾನೆ. ಸದ್ಯದಲ್ಲಿ ಅಸ್ತಿತ್ವದಲ್ಲಿರುವ ಜಿಲ್ಲಾಭಿವೃದ್ಧಿ ಸಹಾಯಕ ಹುದ್ದೆಯನ್ನು ಜಿಲ್ಲಾಪರಿಷತ್ತಿನ ಕಾರ್ಯ ನಿರ್ವಹಣಾಧಿಕಾರಿ ಮತ್ತು ಸಹಾಯಕ ಕಾರ್ಯದರ್ಶಿ ಎಂದು ಕರೆಯಬಹುದು. ಜಿಲ್ಲೆಯ ವಿವಿಧ ಇಲಾಖೆಗಳ ಜಿಲ್ಲಾಧಿಕಾರಿಗಳು ಅವರ ಇಲಾಖೆಗಳ ಜಂಟಿ ಕಾರ್ಯದರ್ಶಿಗಳಾಗಿ ಈ ಸಮಿತಿಗಳಲ್ಲಿ ಕಾರ್ಯ ನಿರ್ವಹಿಸಬಹುದು.

76. 4.45 ಜಿಲ್ಲಾ ಪರಿಷತ್ತಿನ ವಿವಿಧ ಸಮಿತಿಗಳ ಠರಾವುಗಳು ಮತ್ತು ತೀರ್ಮಾನಗಳ ಅನುಷ್ಠಾನ ಕಾರ್ಯದಲ್ಲಿ ಮುಖ್ಯ ನಿರ್ವಹಣಾಧಿಕಾರಿಯ ಮೇಲೆ ಆಡಳಿತ ಮೇಲ್ವಿಚಾರಣೆಯ ಹಕ್ಕನ್ನು ಜಿಲ್ಲಾ ಪರಿಷತ್ತಿನ ಅಧ್ಯಕ್ಷನು ಹೊಂದಿರುತ್ತಾನೆ. ಜೊತೆಗೆ ಜಿಲ್ಲಾ ಪರಿಷತ್ತು ವಹಿಸಿರುವ ಇತರ ಎಲ್ಲ ಹಕ್ಕುಗಳನ್ನೂ ಚಲಾಯಿಸುವ ಅಧಿಕಾರ ಹೊಂದಿರುತ್ತಾನೆ.

77. 7.48 ಜಿಲ್ಲಾ ಪರಿಷತ್ತು ಈ ಕೆಳಕಂಡ ಆಡಳಿತಾತ್ಮಕ ಅಧಿಕಾರಗಳನ್ನು ಚಲಾಯಿಸಬಹುದು:-

(1) ಹಣಕಾಸಿನ ಅವಕಾಶವಿರುವ ಸಂದರ್ಭದಲ್ಲಿ ಶೈಕ್ಷಣಿಕ ಅಥವಾ ಆರೋಗ್ಯ ಪರಿಹಾರ ಕಾರ್ಯಗಳಿಗಾಗಿ ತನ್ನ ಮಿತಿಗೆ ಹೊರತಾದ ಮೂಲದಿಂದ ಹಣವನ್ನು ವೆಚ್ಚ ಮಾಡಬಹುದು.

(2) ಸಂಬಂಧಪಟ್ಟ ಪ್ರದೇಶದ ಜನತೆಯ ಆರೋಗ್ಯ, ರಕ್ಷಣೆ, ಶಿಕ್ಷಣ, ಸೌಲಭ್ಯ, ಸಾಮಾಜಿಕ, ಆರ್ಥಿಕ ಅಥವಾ ಸಾಂಸ್ಕೃತಿಕ ಒಳಿತಿಗಾಗಿ ಯಾವುದೇ ಕಾರ್ಯ ಕ್ರಮವನ್ನು ಕೈಗೊಳ್ಳಲು ಅವಕಾಶ ಕಲ್ಪಿಸುವುದು.

5749-16

(3) ಗ್ರಾಮ ಪಂಚಾಯತಿಗಳು, ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳಿಗೆ ಸಂಬಂಧಿಸಿದಂತೆ, ಸ್ಥಳೀಯ ಸರ್ಕಾರಗಳ ಸಹಾಯದೊಂದಿಗೆ ರಾಷ್ಟ್ರ, ರಾಜ್ಯ ಅಥವಾ ಅಂತರರಾಜ್ಯ ಮಟ್ಟದ ವಸ್ತುಪ್ರದರ್ಶನಗಳು, ಸೆಮಿನಾರುಗಳು ಮತ್ತು ಸಮ್ಮೇಳನಗಳನ್ನು ಏರ್ಪಡಿಸುವ ಸಂಸ್ಥೆಗಳಿಗೆ ಕೊಡುಗೆ ನೀಡುವುದು.

(4) ಮೇಲ್ಕಂಡ ಸಂಸ್ಥೆಗಳ ಚಟುವಟಿಕೆಗಳ ಬಗ್ಗೆ ಜಿಲ್ಲೆಯ ವ್ಯಾಪ್ತಿಯಲ್ಲಿ ಏರ್ಪಡಿಸುವ ಕಾರ್ಯ ಚಟುವಟಿಕೆಗಳಿಗೆ ಆರ್ಥಿಕ ಹಾಗೂ ಮತ್ತಿತರ ನೆರವನ್ನು ಒದಗಿಸುವುದು.

78. 7.50 ಜಿಲ್ಲಾ ಪರಿಷತ್ತಿನ ವ್ಯಾಪ್ತಿಯಲ್ಲಿ ಬರುವ ಅಧಿಕಾರಿಗಳು ಮತ್ತು ಸಿಬ್ಬಂದಿ ಮತ್ತು ಅಲ್ಲಿನ ಆಡಳಿತ ವಿಷಯಗಳು ಹಾಗೂ ಲೆಕ್ಕಪತ್ರ ಮತ್ತು ಕಾಗದಪತ್ರಗಳ ಮೇಲಿನ ಮೇಲ್ವಿಚಾರಣೆಯನ್ನು ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯು ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು. ಜೊತೆಗೆ, ಜಿಲ್ಲಾ ಪರಿಷತ್ತಿನ ಮಿಕ್ಕ ಎಲ್ಲ ಆಡಳಿತ ವಿಷಯಗಳ ಮೇಲ್ವಿಚಾರಣೆಯ ಅಧಿಕಾರವು ಸಹ ಈ ಅಧಿಕಾರಿಗೇ ಇರುತ್ತದೆ.

79. 8.8 ಪಂಚಾಯತಿಗಳ ಮನೆಗಂದಾಯವನ್ನು ಆಸ್ತಿಯ ಬಾಡಿಗೆ ಮೌಲ್ಯಕ್ಕೆ ಬದಲಾಗಿ, ಆ ಆಸ್ತಿಯ ಒಟ್ಟು ಮೌಲ್ಯವನ್ನು (ಕ್ಯಾಪಿಟಲ್ ವ್ಯಾಲ್ಯು) ದೃಷ್ಟಿಯಲ್ಲಿಟ್ಟುಕೊಂಡು ವಿಧಿಸ ಬಹುದು.

80. 8.9 ಪಂಚಾಯತಿಯ ವ್ಯಾಪ್ತಿಯಲ್ಲಿರುವ ಹುಲ್ಲುಗಾವಲುಗಳಲ್ಲಿ ಜಾನುವಾರುಗಳನ್ನು ಮೇಯಿಸಲು ಒಂದು ನಿರ್ದಿಷ್ಟ ಶುಲ್ಕವನ್ನು ವಿಧಿಸಬಹುದು. ಹಾಗೆಯೇ ಸಾರ್ವಜನಿಕ ಕಕ್ಕಸುಗಳು ಹಾಗೂ ಖಾಲಿ ನಿವೇಶನಗಳು, ಕಾಂಪೌಂಡು ಗಳನ್ನು ಸ್ವಚ್ಛಗೊಳಿಸುವ ಕಾರ್ಯವನ್ನು ಪಂಚಾಯತಿ ಏಜನ್ಸಿಯು ಮಾಡುತ್ತಿರುವ ಸಂದರ್ಭದಲ್ಲಿ ಆ ಕೆಲಸಕ್ಕೂ ವಿಶೇಷ ತೆರಿಗೆಯನ್ನು ವಿಧಿಸಬಹುದು.

81. 8.10 ಪಂಚಾಯತಿಗಳ ವ್ಯಾಪ್ತಿಯಲ್ಲಿ ಇರುವ ಕಾರ್ಖಾನೆಗಳು ಅಗತ್ಯವಾದ ಎಲ್ಲ ಸೌಲಭ್ಯಗಳನ್ನು ಒದಗಿಸುತ್ತಿದ್ದಲ್ಲಿ ರಾಜ್ಯ ಸರ್ಕಾರದ ಅನುಮತಿಯೊಂದಿಗೆ ಪಂಚಾಯತಿಯು ಕಾರ್ಖಾನೆಗಳೊಂದಿಗೆ ಒಂದು ಒಪ್ಪಂದವನ್ನು ಮಾಡಿ ಕೊಂಡು, ಆ ಪ್ರದೇಶದಲ್ಲಿ ಅದು ವಿಧಿಸುತ್ತಿರುವ ಕೆಲವು ಅಥವಾ ಹೆಚ್ಚಿನ ತೆರಿಗೆಗಳ ಬಾಬ್ತು, ಒಂದೇ ಮೊತ್ತದ ಹಣವನ್ನು ತೆಗೆದುಕೊಳ್ಳಬಹುದು.

| | | |
|---|---|---|
| 82. | 8.11 | ಪಂಚಾಯತಿಗಳ ವ್ಯಾಪ್ತಿಯಲ್ಲಿ ಬರುವ ಇನ್ನಿತರ ಸಂಸ್ಥೆ ಗಳಿಂದಲೂ ಆ ಪ್ರದೇಶದಲ್ಲಿ ತಾನು ವಿಧಿಸುತ್ತಿರುವ ತೆರಿಗೆ ಗಳಿಗಾಗಿ ಒಂದು ನಿರ್ದಿಷ್ಟ ಮೊತ್ತದ ಹಣವನ್ನು ಸ್ವೀಕರಿಸಬಹುದು. |
| 83. | 8.12 | ಸ್ಥಿರಾಸ್ತಿಗಳ ವರ್ಗಾವಣೆಯ ಸಂದರ್ಭದಲ್ಲಿ ಹೆಚ್ಚಿನ ಸ್ಟ್ಯಾಂಪ್ ಶುಲ್ಕ ರೂಪದಲ್ಲಿ ವಿಧಿಸುವ ಶುಲ್ಕವನ್ನು ತೆಗೆದು ಕೊಳ್ಳುವುದನ್ನು ತಾಲೂಕು ಅಭಿವೃದ್ಧಿ ಮಂಡಳಿಗಳಿಗೆ ಕಡ್ಡಾಯಗೊಳಿಸತಕ್ಕದ್ದು. |
| 84. | 8.14 | ಸ್ಥಳೀಯ ತೆರಿಗೆ, ಆರೋಗ್ಯ ತೆರಿಗೆ, ಶಿಕ್ಷಣ ತೆರಿಗೆ ಮೊದಲಾದ ವಿವಿಧ ತೆರಿಗೆಗಳನ್ನು ಸಂಗ್ರಹಿಸುವುದಕ್ಕೆ ಬದಲಾಗಿ ರಾಜ್ಯ ಮತ್ತು ಸ್ಥಳೀಯ ರೆವಿನ್ಯೂ ಮಂಡಲಿಗಳು ವಿಧಿಸುತ್ತಿರುವ ಆರೋಗ್ಯ ತೆರಿಗೆಯನ್ನು ಆಧಾರವಾಗಿಟ್ಟು ಕೊಂಡು ಭೂತೆರಿಗೆ, ಅಬ್ಕಾರಿ ತೆರಿಗೆ ಮತ್ತಿತರ ತೆರಿಗೆಗಳನ್ನು ಈ ಕೆಳಕಂಡಂತೆ ವಿಧಿಸಬಹುದು:- |

| | | |
|---|---|---|
| | ಆರೋಗ್ಯ ತೆರಿಗೆ | 99 ಪೈಸೆ |
| | ಶಿಕ್ಷಣ ತೆರಿಗೆ | 19 ಪೈಸೆ |
| | ಭೂಕಂದಾಯ ಮತ್ತು ಅದರಲ್ಲಿ ನೀರಿನ ದರವೂ ಸೇರ್ಪಡೆಯಾಗಿದ್ದಲ್ಲಿ ಸ್ಥಳೀಯ ತೆರಿಗೆಯಾಗಿ ನೀರಿನ ತೆರಿಗೆ | 12 ಪೈಸೆ |
| | **ಒಟ್ಟು** | **40 ಪೈಸೆ** |

| | | |
|---|---|---|
| 85. | 8.15 | ಜಿಲ್ಲೆಯಲ್ಲಿ ಪ್ರಾಣಿಗಳನ್ನು ಮಾರುವುದು ಮತ್ತು ಕೊಳ್ಳುವುದಕ್ಕೆ ಮಾರುಕಟ್ಟೆಗಳನ್ನು ಜಿಲ್ಲಾ ಪರಿಷತ್ತು ನಿರ್ಧರಿಸಬಹುದು. ಈ ಆವರಣಗಳಲ್ಲಿ ಮಾರಾಟಕ್ಕಾಗಿ ಬರುವ ಪ್ರಾಣಿಗಳ ಮೇಲೆ ತಾಲೂಕು ಅಭಿವೃದ್ಧಿ ಮಂಡಲಿಗಳು ತೆರಿಗೆಯನ್ನು ವಿಧಿಸಲು ತಕ್ಕಂತೆ ಈ ಮಾರುಕಟ್ಟೆ ಪ್ರದೇಶ ಗಳನ್ನು ಜಿಲ್ಲಾ ಪರಿಷತ್ತು ನಿರ್ಧರಿಸಬಹುದು. ಮಿಕ್ಕ ಎಲ್ಲಾ ವಿಚಾರಗಳಲ್ಲೂ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಜಿಲ್ಲಾ ಪರಿಷತ್ತು ಒಳಗೊಂಡಿರುತ್ತದೆ. |
| 86. | 8.16 | ಧಾರ್ಮಿಕ ಸಂಸ್ಥೆಗಳು ಅಥವಾ ಇತರ ತಾತ್ಪೂರ್ತಿಕ ಸಂಸ್ಥೆಗಳು ನಡೆಸುವ ದನಗಳ ಜಾತ್ರೆಗಳ ವಿಚಾರದಲ್ಲಿ ನಮ್ಮ ಶಿಫಾರಸುಗಳ ಹಿನ್ನೆಲೆಯಲ್ಲಿ ಸರ್ಕಾರದೊಡನೆ ಪರಿಶೀಲಿಸಿ, ಆ ಜಾತ್ರೆಗಳಿಂದ ಬರುವ ತೆರಿಗೆಗಳು ತಾಲೂಕು ಬೋರ್ಡುಗಳು ಅಥವಾ ಜಿಲ್ಲಾ ಪರಿಷತ್ತುಗಳಿಗೆ ಹೋಗುವಂತೆ ನೋಡಿಕೊಳ್ಳತಕ್ಕದ್ದು. |

87. 8.19 ಸರ್ಕಾರವು ವಿಧಿಸುವ ಸ್ಥಳೀಯ ತೆರಿಗೆಗಳಲ್ಲದೆ ವಿಶೇಷ ತೆರಿಗೆಗಳನ್ನು ವಿಧಿಸುವ ಅಧಿಕಾರವನ್ನೂ ಪಂಚಾಯತಿ ಅಥವಾ ತಾಲೂಕು ಅಭಿವೃದ್ಧಿ ಮಂಡಲಿ ಅಥವಾ ಜಿಲ್ಲಾ ಪರಿಷತ್ತುಗಳು ಹೊಂದಿರಬಹುದು. ಆದರೆ ಇಂತಹ ವಿಶೇಷ ತೆರಿಗೆಗಳು ಸರಾಸರಿ ಒಂದು ನೂರು ಪೈಸೆಗಳಿಗಿಂತ ಹೆಚ್ಚಾಗದಂತೆ ನಿರ್ಧರಿಸಬಹುದು.

88. 8.20 ಸರ್ಕಾರವು ಸಂಗ್ರಹಿಸುವ ೪೦ ಪೈಸೆ ತೆರಿಗೆಯಲ್ಲದೆ ೨೦ ಪೈಸೆಯನ್ನು ಮೀರದಷ್ಟು ತೆರಿಗೆಯನ್ನು ಪಂಚಾಯತ್ ರಾಜ್ ಸಂಸ್ಥೆಗಳು ವಿಧಿಸಬಹುದು.

89. 8.21 ವಿಶೇಷ ತೆರಿಗೆಯ ಹೊಣೆಯು ಪ್ರಮುಖವಾಗಿ ವ್ಯವಸಾಯ ಗಾರರ ಮೇಲೆಯೇ ಬೀಳುವುದರಿಂದ ಮನೆಗಂದಾಯ ಅಥವಾ ವೃತ್ತಿ ತೆರಿಗೆಯಂತಹ ಇತರ ಬಾಬುಗಳ ಮೇಲೆ ಪಂಚಾಯತಿಗಳು ಹೆಚ್ಚಿನ ತೆರಿಗೆಯನ್ನು ವಿಧಿಸಲು ಅವಕಾಶ ಮಾಡಬಹುದಾದುದರಿಂದ ಗ್ರಾಮದ ಎಲ್ಲಾ ವರ್ಗದ ಜನತೆಯ ಮೇಲೂ ಸಮಾನವಾದ ತೆರಿಗೆಯನ್ನು ವಿಧಿಸಿ ದಂತಾಗುತ್ತದೆ.

90. 8.22 ಜಿಲ್ಲಾ ಪರಿಷತ್ತು ಯಾತ್ರಾ ತೆರಿಗೆಯನ್ನು ವಿಧಿಸಬಹುದು. ಆದಾಗ್ಯೂ ಅಂತಹ ಯಾತ್ರೆಗಳ ಸಂಬಂಧದಲ್ಲಿ ಯಾತ್ರಾರ್ಥಿ ಗಳು ಹೋಗುವ ಜಾತ್ರೆ ಮತ್ತು ಉತ್ಸವಗಳಲ್ಲಿ ಅವರಿಗೆ ಅಗತ್ಯವಾದ ಸೌಲಭ್ಯಗಳನ್ನು ಒದಗಿಸಲು ತಾಲೂಕು ಅಭಿವೃದ್ಧಿ ಮಂಡಲಿಗಳು ಅಥವಾ ಪಂಚಾಯಿತಿಗಳು ಶಕ್ಯ ವಾಗಿವೆಯೆ ಎಂಬುದನ್ನು ಗಮನಿಸಿ ಈ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಅವುಗಳಿಗೆ ನೀಡಬಹುದು.

91. 9.6 ವರ್ಷದಲ್ಲಿ ತೆರಿಗೆಯು ಸಂಗ್ರಹದ ವೆಚ್ಚವನ್ನು ಹೊರತುಪಡಿಸಿ ಭೂಕಂದಾಯವನ್ನು ಈ ಕೆಳಕಂಡಂತೆ ಪಂಚಾಯಿತಿ ರಾಜ್ಯ ಸಂಸ್ಥೆಗಳು ಸಂಗ್ರಹಿಸಬಹುದು:-

| | |
|---|---|
| ಪಂಚಾಯಿತಿಗಳು | ಶೇಕಡ ೩೦ |
| ತಾಲೂಕು ಅಭಿವೃದ್ಧಿ ಮಂಡಲಿಗಳು | ಶೇಕಡ ೩೫ |
| ಜಿಲ್ಲಾ ಪರಿಷತ್ತುಗಳು | ಶೇಕಡ ೨೦ |

ಉಳಿದ ಶೇಕಡ ೧೫ರಷ್ಟನ್ನು ರಾಜ್ಯ ಸಮಾನೀಕರಣ ನಿಧಿಗೆ ಕೊಡತಕ್ಕದ್ದು. ಈ ಹಣವನ್ನು ಭೂಕಂದಾಯಕ್ಕೆ ಸಂಬಂಧಿಸಿ ದಂತೆ ಕೊಡಬೇಕಾಗುವ ಅಮಾನತು ಅಥವಾ ಮಾಫಿ ಉದ್ದೇಶಗಳಿಗಾಗಿ ಪ್ರಮುಖವಾಗಿ ಬಳಸಬೇಕು. ಈ ಹಣವನ್ನು ಹಣಕಾಸಿನ ವಿಚಾರದಲ್ಲಿ ದುಃಸ್ಥಿತಿಯಲ್ಲಿರುವ

ಪಂಚಾಯತಿರಾಜ್ಯ ಸಂಸ್ಥೆಗಳಿಗೆ ನೀಡಿ ಅವುಗಳ ದುರ್ಬಲ ಸಂಪನ್ಮೂಲಗಳನ್ನು ವೃದ್ಧಿಪಡಿಸಿ ಆರ್ಥಿಕ ಸಮತೋಲನ ವನ್ನು ರಕ್ಷಿಸಿಕೊಳ್ಳಲು ಬಳಸಬಹುದು. ಈ ಶೇಕಡ ೧೫ರಷ್ಟನ್ನು ಕೆಳಕಂಡಂತೆ ಹಂಚಬಹುದು.

| | |
|---|---|
| ಪಂಚಾಯತಿಗಳು | ಶೇಕಡ ೫ |
| ತಾಲೂಕು ಅಭಿವೃದ್ಧಿ ಮಂಡಲಿಗಳು | ಶೇಕಡ ೫ |
| ಜಿಲ್ಲಾ ಪರಿಷತ್ತುಗಳು | ಶೇಕಡ ೫ |

92. 9.7 ಒಟ್ಟು ತೆರಿಗೆಯಲ್ಲಿ ಒಂದು ರೂಪಾಯಿಗೆ ೪೦ ಪೈಸೆಯನ್ನು ಜಿಲ್ಲಾ ಪರಿಷತ್ತಿಗೆ ಕೊಡತಕ್ಕದ್ದು.

93. 9.8 ರೆವಿನ್ಯೂ ಭೂಮಿಗಳ ಮೇಲೆ ವಿಧಿಸುವ ಅಧಿಕ ಕರವು ತಾತ್ಕಾಲಿಕವಾಗಿದ್ದು ಆದಷ್ಟು ಬೇಗ ಇಡೀ ರಾಜ್ಯದಲ್ಲಿ ಭೂಕಂದಾಯ ಪುನರ್ವಿಮರ್ಶಾ ಕಾರ್ಯವನ್ನು ಕೈಗೆತ್ತಿ ಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. ಕೃಷಿ ಭೂಮಿಗಳ ಮೇಲಿನ ಕಂದಾಯವನ್ನು ಮರು ನಿಷ್ಕರ್ಷೆ ಮಾಡುವುದ ರಿಂದ ಪ್ರತಿ ಒಂದು ರೂಪಾಯಿಯ ಮೇಲೆ ವಿಧಿಸುವ ೪೦ ಪೈಸೆಯು ತೆರಿಗೆಯಲ್ಲಿ ನೂರಕ್ಕೆ ನೂರರಷ್ಟು ಅಧಿಕವಾಗಿ ಸಮದೂಗಿಸುತ್ತದೆ. ಆದ್ದರಿಂದ, ಮರುತೆರಿಗೆ ವಿಧಿಸುವಾಗ ಸದ್ಯದಲ್ಲಿ ವಿಧಿಸುತ್ತಿರುವ ಒಂದು ರೂಪಾಯಿಗೆ ೪೦ ಪೈಸೆ ತೆರಿಗೆಯನ್ನು ೨೦ ಪೈಸೆಗೆ ಇಳಿಸಬಹುದು.

94 9.9 ತಾಲೂಕು ಅಭಿವೃದ್ಧಿ ಮಂಡಲಿಗಳು ವಹಿಸಿಕೊಂಡು ನಿರ್ವಹಿಸುತ್ತಿರುವ ಗ್ರಾಮೀಣ ರಸ್ತೆಗಳ ಮೇಲೆ ಪ್ರತಿ ಮೈಲಿಗೆ ಇನ್ನೂರು ರೂಪಾಯಿ ತೆರಿಗೆ ಇರತಕ್ಕದ್ದು.

95. 9.10 ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅವುಗಳ ನಿರ್ವಹಣೆಯ ಶೇಕಡ ೮೫ರಷ್ಟನ್ನು ಸರ್ಕಾರವು ಭರಿಸಬೇಕು, ಉಳಿದ ಮೊತ್ತವನ್ನು ಸ್ಥಳೀಯ ಸಂಸ್ಥೆಗಳು ಭರಿಸಬೇಕು. ಪ್ರೌಢ ಶಿಕ್ಷಣ ವಿಚಾರದಲ್ಲಿ ಅವುಗಳಿಗೆ ನೀಡುವ ಅನುದಾನವನ್ನು, ಅನುದಾನ ಸಂಹಿತೆಯನ್ವಯ ನಿಯಂತ್ರಿಸಬಹುದು. ಆಸ್ಪತ್ರೆಗಳು ಮತ್ತು ಆರೋಗ್ಯ ಘಟಕಗಳಿಗೆ ಶೇಕಡ ೬೦ರಷ್ಟನ್ನು ನಿರ್ವಹಣಾ ವೆಚ್ಚವಾಗಿ ಸರ್ಕಾರವೂ ಮತ್ತು ಉಳಿದ ಹಣವನ್ನು ಸ್ಥಳೀಯ ಸಂಸ್ಥೆಗಳೂ ಒದಗಿಸಬೇಕು. ಪಶುವೈದ್ಯ ಶಾಲೆಗಳಿಗೆ ಶೇಕಡ ೭೫ರಷ್ಟನ್ನು ನಿರ್ವಹಣಾ ವೆಚ್ಚವಾಗಿ ಸರ್ಕಾರವೂ, ಉಳಿದ ಹಣವನ್ನು ಸ್ಥಳೀಯ ಸಂಸ್ಥೆಗಳೂ ಭರಿಸಬಹುದು.

96. 9.11 ಈ ಶಿಫಾರಸುಗಳಿಂದ ರಾಜ್ಯ ಹಣಕಾಸು ಪರಿಸ್ಥಿತಿಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಬಹುದಾದ್ದರಿಂದ ಕೇಂದ್ರ ಸರ್ಕಾರದಿಂದ ಸೂಕ್ತ ಹಣಕಾಸು ನೆರವನ್ನು ಪಡೆಯಲು ಮುಂದಿನ ಹಣಕಾಸು ಆಯೋಗದಲ್ಲಿ ಕೈಗೆತ್ತಿಕೊಳ್ಳಬಹುದು.

97. 9.12 ಪಂಚಾಯಿತಿ ರಾಜ್ಯ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಮೂರನೇ ದರ್ಜೆಯ ನೌಕರರ ಸಂಬಳ ಸಾರಿಗೆ ಮತ್ತಿತರ ವೆಚ್ಚಗಳಿಗಾಗಿ ಸರ್ಕಾರವು ಜಿಲ್ಲಾ ಪರಿಷತ್ತುಗಳಿಗೆ ಆ ವೆಚ್ಚದ ಸರಾಸರಿ ಶೇಕಡ ೭೫ರಷ್ಟು ಹಣವನ್ನು ಪ್ರತಿವರ್ಷ ಈ ವರ್ಗದ ನೌಕರರ ಸಂಬಳ ಮತ್ತು ಭತ್ಯಗಳಿಗಾಗಿ ನೀಡಬಹುದು. ಈ ಮಂಡಳಿಗಳ ಪ್ರಥಮ ಮತ್ತು ದ್ವಿತೀಯ ದರ್ಜೆಯ ಸಿಬ್ಬಂದಿಯ ಸಂಬಳಗಳನ್ನು ಸರ್ಕಾರವೇ ಭರಿಸತಕ್ಕದ್ದು. ನಾಲ್ಕನೇ ದರ್ಜೆಯ ನೌಕರರ ಸಂಬಳಗಳನ್ನು ಸ್ಥಳೀಯ ಸಂಸ್ಥೆಗಳು ತಮ್ಮ ನಿಧಿಯಿಂದಲೇ ತೆಗೆದು ಕೊಡತಕ್ಕದ್ದು.

98. 9.13 ಸರ್ಕಾರವು ವಿಧಿಸಿರುವ ತೆರಿಗೆಗಳ ಜೊತೆಗೆ ಸ್ಥಳೀಯ ಸಂಸ್ಥೆಗಳು ವಿಶೇಷ ತೆರಿಗೆಗಳನ್ನು ವಿಧಿಸುವುದನ್ನು ಪ್ರೋತ್ಸಾಹಿಸುವ ಸಲುವಾಗಿ ಸರ್ಕಾರವು ಈ ಸಂಸ್ಥೆಗಳಿಗೆ ಅನುರೂಪ ಅನುದಾನಗಳನ್ನು ಮಂಜೂರು ಮಾಡಬಹುದು. ತೆರಿಗೆ ವಿಧಿಸುವ ಸಾಮರ್ಥ್ಯವು ಪ್ರಾಕೃತಿಕ ಅನುಕೂಲ ಅಥವಾ ಅನಾನುಕೂಲಗಳಿಂದ ಜಿಲ್ಲೆಯಿಂದ ಜಿಲ್ಲೆಗೆ, ತಾಲೂಕಿನಿಂದ ತಾಲೂಕಿಗೆ ಅಥವಾ ಒಂದೇ ತಾಲೂಕಿನ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವ್ಯತ್ಯಾಸ ವಾಗುವುದರಿಂದ ಕೆಲವು ಕಡೆ ಲಾಭವಾಗಬಹುದು ಅಥವಾ ತೊಂದರೆಯೂ ಸಂಬಂಧಿಸಬಹುದು. ಈ ದೃಷ್ಟಿಯಿಂದ ತಾಲೂಕುಗಳನ್ನು ಅಥವಾ ತಾಲೂಕಿನ ಬೇರೆ ಬೇರೆ ಭಾಗಗಳನ್ನು ವಿವಿಧ ವರ್ಗಗಳಾಗಿ ವಿಂಗಡಿಸಬಹುದಾಗಿದೆ. ತೆರಿಗೆ ಸಂಗ್ರಹ ವಿಚಾರದಲ್ಲಿ ದುರ್ಬಲವಾಗಿರುವ ತಾಲೂಕು ಗಳು ಅಥವಾ ತಾಲೂಕಿನ ಭಾಗಗಳಿಗೆ ಹೆಚ್ಚಿನ ಅನುರೂಪ ನಿಧಿಗಳನ್ನು ಮಂಜೂರು ಮಾಡಬೇಕು. ಆದರೆ ಸಂಪನ್ಮೂಲ ಗಳನ್ನು ಹೆಚ್ಚಿಸಿಕೊಳ್ಳಲು ವಿಶೇಷ ತೆರಿಗೆಗಳನ್ನು ಸಂಗ್ರಹಿಸುವ ಪ್ರಯತ್ನಗಳನ್ನು ಮಾಡಬೇಕು.

99. 9.14 ಸಮುದಾಯ ಅಭಿವೃದ್ಧಿ ಯೋಜನೆಗಳಿಗೆ ಒದಗಿಸಿರುವ ನಿಧಿಗಳನ್ನು, ಯೋಜನಾತ್ಮಕ ಆಯವ್ಯಯಗಳನ್ನು ರಾಜ್ಯ ಮಟ್ಟದಲ್ಲಿ ಒಟ್ಟುಗೂಡಿಸಿ, ಯೋಜನಾತ್ಮಕ ಆಯವ್ಯಯ ವನ್ನು ಪರಿಗಣಿಸದೆ ತಾಲೂಕು ಅಭಿವೃದ್ಧಿ

ಮಂಡಲಿಗಳಿಗೆ ವಿತರಿಸತಕ್ಕದ್ದು. ಕೃಷಿ ಮತ್ತು ನೀರಾವರಿಗೆ ಸಂಬಂಧಿಸಿದಂತೆ ಮಾಡಿರುವ ಹಣಕಾಸಿನ ಅವಕಾಶಗಳನ್ನು ಒಟ್ಟುಗೂಡಿಸಿ ಸಂಬಂಧಪಟ್ಟ ಇಲಾಖೆಗಳು ಯೋಜನೆ ಮತ್ತು ಯೋಜನೇತರ ವೆಚ್ಚಗಳಿಗೆ ಮಾಡಿಕೊಂಡಿರುವ ವೆಚ್ಚದ ಅವಕಾಶಗಳಿಗೆ ಸಂವಾದಿಯಾಗಿ ಮತ್ತು ಸಮನಾಗಿ ಎಲ್ಲ ಬ್ಲಾಕುಗಳಿಗೂ ವಿತರಿಸತಕ್ಕದ್ದು. ಇವು ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳ ಸಮಗ್ರ ಆಯವ್ಯಯಕ್ಕೆ ಹೊಂದಿಕೆಯಾಗಿರಬೇಕು.

100. 9.15 ಸ್ಥಳೀಯ ಸಂಸ್ಥೆಗಳಿಗೆ ಸಕಾಲದಲ್ಲಿ ಹಣಕಾಸನ್ನು ವಿತರಣೆ ಮಾಡಬೇಕಾದರೆ ವಿವಿಧ ಇಲಾಖೆಗಳ ಪ್ರಸ್ತಾವಗಳನ್ನು ಆದಷ್ಟು ಮುಂಚಿತವಾಗಿ ತರಿಸಿಕೊಳ್ಳಬೇಕು. ಈ ಪ್ರಸ್ತಾವ ಗಳು ಪ್ರತಿ ಜಿಲ್ಲೆಯ ಇಲಾಖಾ ಪ್ರಸ್ತಾವಗಳಿಗೆ ಸಂಬಂಧಿಸಿದ ಶೇಕಡ ೭೫ರಷ್ಟು ಹಣಕಾಸಿನ ಅಗತ್ಯವನ್ನು ಒಳಗೊಂಡಿರ ಬೇಕು. ಉಳಿದ ಶೇಕಡ ೨೫ರಷ್ಟರ ಹಂಚಿಕೆಯನ್ನು ಇಲಾಖೆಗಳ ಮುಖ್ಯಸ್ಥರ ತೀರ್ಮಾನಕ್ಕೆ ಬಿಡಬಹುದು.

101. 9.16 ಜಿಲ್ಲಾ ಪರಿಷತ್ತು ಮತ್ತು ತಾಲೂಕು ಮಂಡಲಿಗಳ ನಿಧಿಯನ್ನು ಖಜಾನೆಗಳಲ್ಲಿ ಇಡಬೇಕು.

102 9.17 ಖಜಾನೆಗಳಿರುವ ಸ್ಥಳದಿಂದ ದೂರ ಇರುವ ಪಂಚಾಯಿತಿ ಗಳು ತಮ್ಮ ನಿತ್ಯದ ಖರ್ಚು ವೆಚ್ಚಗಳಿಗೆ ಅಗತ್ಯವಾದ ಹಣವನ್ನು ತಮ್ಮಲ್ಲೇ ಇಟ್ಟುಕೊಳ್ಳಲು ಅವಕಾಶ ಮಾಡ ಬಹುದು. ಇಂತಹ ಹಣವನ್ನು ಅಗತ್ಯವಿದ್ದಾಗ ಮಾತ್ರ ತೆಗೆದುಕೊಳ್ಳಬಹುದು. ಹೀಗೆ ಪಡೆಯುವ ಹಣವು ದಿನ ನಿತ್ಯದ ಕೆಲಸ ಕಾರ್ಯಗಳಿಗೆ ಅಗತ್ಯವಾದಷ್ಟು ಮಾತ್ರಕ್ಕೆ ಸೀಮಿತವಾಗಿರತಕ್ಕದ್ದು. ಆ ಹಣವು ಉದ್ದೇಶಿತ ನಿತ್ಯದ ಕೆಲಸಗಳಿಗೆ ಹೆಚ್ಚಾಗದಂತೆ ಅಥವಾ ಕಡಿಮೆಯಾಗದಂತೆ ಇರಬೇಕು. ಈ ನಿಯಮಗಳ ಅನುಸಾರ ತಾವು ಪಡೆದ ಹಣದ ಸ್ವಲ್ಪ ಭಾಗವನ್ನು ನಗದಾಗಿ ಷೆಡ್ಯೂಲ್ ಬ್ಯಾಂಕು ಗಳಲ್ಲಿ ಅಥವಾ ಪೋಸ್ಟಾಫೀಸುಗಳ ಶಿಲ್ಕು ಖಾತೆಯಲ್ಲಿ ಉಳಿಸಿಕೊಳ್ಳುವುದು ಅನುಕೂಲಕರವೆಂದು ಕಂಡುಬಂದಲ್ಲಿ ಹಾಗೆ ಮಾಡಲು ಯಾವುದೇ ಅಭ್ಯಂತರವಿಲ್ಲ.

103 9.19 ಸ್ಥಳೀಯ ಸಂಸ್ಥೆಗಳು, ಸಂಬಂಧಪಟ್ಟ ಕಾರ್ಯಕ್ರಮಗಳಿಗೆ ಕೊಡಮಾಡಿದ ಹಣವನ್ನು ಕ್ರಮವಾಗಿ ಮತ್ತು ಪೂರ್ತಿಯಾಗಿ ಪಡೆದುಕೊಳ್ಳುತ್ತಿವೆಯೆ ಎಂಬುದನ್ನು ಹಾಗೂ ಮತ್ತು ಆ ಹಣವನ್ನು ಬಿಡುಗಡೆ ಮಾಡುವುದಕ್ಕೆ ಮುಂಚೆ ಆ ಹಣಕಾಸಿಗೆ ಸಂಬಂಧಪಟ್ಟ ಪ್ರಸ್ತಾವಗಳನ್ನು ಸಮಗ್ರವಾಗಿ

ಪರಿಶೀಲಿಸಲಾಗಿದೆಯೆ ಎಂಬುದನ್ನೂ ಗಮನವಿಟ್ಟು ನೋಡಲು ಪ್ರತಿ ಜಿಲ್ಲಾ ಪರಿಷತ್ತಿನಲ್ಲೂ ಒಂದು ಸಮರ್ಥವಾದ ಲೆಕ್ಕಪತ್ರ ವಿಭಾಗವು ಇರುವುದು ಅಪೇಕ್ಷಣೀಯ.

104 9.21 ಪಂಚಾಯತಿಯ ಲೆಕ್ಕಪತ್ರಗಳನ್ನು ತಾಳೆನೋಡಿ ಪರಿಶೀಲಿಸುವುದು ಪಂಚಾಯತಿ ವಿಸ್ತರಣಾಧಿಕಾರಿಯ ಜವಾಬ್ದಾರಿಯಾಗಿರುತ್ತದೆ. ಜಿಲ್ಲಾ ಪರಿಷತ್ತುಗಳು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳ ಲೆಕ್ಕಪತ್ರಗಳನ್ನು ಪರಿಶೀಲಿಸುವುದು ರಾಜ್ಯ ಲೆಕ್ಕಪತ್ರ ಇಲಾಖೆಯ ನಿಯಂತ್ರಕನ ಜವಾಬ್ದಾರಿಯಾಗಿರುತ್ತದೆ.

105 9.24 ಪ್ರಜಾಪ್ರಭುತ್ವದ ಉದ್ದೇಶಿತ ಅಧಿಕಾರ ವಿಕೇಂದ್ರೀಕರಣದ ಪರಿಣಾಮವಾಗಿ ಸ್ಥಳೀಯ ನಿಧಿಗಳನ್ವಯ ಜಿಲ್ಲಾಮಟ್ಟದ ವಿವಿಧ ಸ್ಥಳೀಯ ಸಂಸ್ಥೆಗಳಿಗೆ ಹಣಕಾಸಿನ ನಿರ್ವಹಣೆಯ ಕೆಲಸವನ್ನು ಹೆಚ್ಚಿನ ಸಂಖ್ಯೆಯಲ್ಲಿ ವಹಿಸಿರುವುದರಿಂದ ಅಕೌಂಟೆಂಟ್ ಜನರಲ್‌ನ ಕೆಲಸವು ಸಾಕಷ್ಟು ರೀತಿಯಲ್ಲಿ ಕಡಿಮೆಯಾಗಿದೆ.

106 10.4 ಈ ಸಂಸ್ಥೆಗಳಿಗೆ ಸಿಬ್ಬಂದಿಯನ್ನು ನೇಮಿಸಿಕೊಳ್ಳಲು ರಾಜ್ಯ ಮಟ್ಟದಲ್ಲಿ ಅಥವಾ ಜಿಲ್ಲಾಮಟ್ಟದಲ್ಲಿ ಪ್ರತ್ಯೇಕವಾದ ಆಯ್ಕೆ ಮಂಡಲಿಗಳ ಅಗತ್ಯವಿರುವುದಿಲ್ಲ. ಪ್ರಾಥಮಿಕ ಶಾಲಾ ಶಿಕ್ಷಕರನ್ನು ಹೊರತುಪಡಿಸಿ, ಆಡಳಿತಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಹೊರತಾದ ಮೂರನೇ ದರ್ಜೆಯ ಸಿಬ್ಬಂದಿಯನ್ನು ರಾಜ್ಯ ಲೋಕಸೇವಾ ಆಯೋಗ, ರಾಜ್ಯಮಟ್ಟದ ನೇಮಕಾತಿ ಸಮಿತಿ ಹಾಗೂ ವಿಭಾಗ ಮಟ್ಟದ ನೇಮಕಾತಿ ಸಮಿತಿಗಳು ನೇಮಿಸಿಕೊಳ್ಳಬೇಕು. ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಯನ್ನು ಈ ಕೆಳಕಂಡವರನ್ನು ಒಳಗೊಂಡ ಜಿಲ್ಲಾಮಟ್ಟದ ನೇಮಕಾತಿ ಸಮಿತಿಯು ಮಾಡತಕ್ಕದ್ದು.

(1) ಅಧ್ಯಕ್ಷ, ಜಿಲ್ಲಾಧಿಕಾರಿ
(2) ಜಿಲ್ಲಾ ಪರಿಷತ್ತಿನ ಶಿಕ್ಷಣ ಸಮಿತಿಯ ಅಧ್ಯಕ್ಷ, ಮತ್ತು
(3) ಜಿಲ್ಲಾ ಶಿಕ್ಷಣಾಧಿಕಾರಿ

107. 10.5 ಸದ್ಯದಲ್ಲಿರುವ ಸ್ಥಳೀಯ ಸರ್ಕಾರಿ ನೌಕರರನ್ನು ಸರ್ಕಾರಿ ನೌಕರರೆಂದು ಪರಿಗಣಿಸತಕ್ಕದ್ದು. ಮತ್ತು ಆ ನೌಕರರ ಸಂಬಳಗಳನ್ನು ಸರ್ಕಾರಿ ನೌಕರರ ಸಂಬಳಗಳಿಗೆ ಸಮ ಗೊಳಿಸತಕ್ಕದ್ದು.

108. 10.7 ನಮ್ಮ ಶಿಫಾರಸುಗಳನ್ವಯ ಜಿಲ್ಲೆಯಲ್ಲಿರುವ ಎಲ್ಲ ನೌಕರರನ್ನು ಯಾವುದೇ ತಾರತಮ್ಯವಿಲ್ಲದೆ ಸರ್ಕಾರಿ ನೌಕರರೆಂದು ಪರಿಗಣಿಸುವುದರಿಂದ ನಿವೃತ್ತಿ

ವೇತನದ ಮೊತ್ತವು ಅತ್ಯಂತ ಹೆಚ್ಚಾಗುವ ಸಂಭವವುಂಟು. ಈ ಹಿನ್ನೆಲೆಯಲ್ಲಿ ಮೂರನೇ ದರ್ಜೆಯ ಎಲ್ಲ ನೌಕರರ ಸೇವಾವಧಿಯ ವಯೋಮಿತಿಯನ್ನು ೫೮ ವರ್ಷಗಳಿಗೆ ಏರಿಸತಕ್ಕದ್ದು ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರ ಸಂಬಂಧದಲ್ಲಿ ಈ ವಯೋಮಿತಿಯು ೬೦ ವರ್ಷಗಳಿಗಿರತಕ್ಕದ್ದು.

109. 10.9 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಜಿಲ್ಲಾಧಿಕಾರಿಯ ದರ್ಜೆಯ ಅಧಿಕಾರಿಯಾಗಿರತಕ್ಕದ್ದು. ಈ ಹುದ್ದೆಗಳು ಸಿನೀಯರ್ ಟೈಮ್ ಸ್ಕೇಲ್ ಹುದ್ದೆಗಳಲ್ಲಿ ಸೇರತಕ್ಕದ್ದು. ಆದರೆ ಈ ಹುದ್ದೆಗಳಿಗೆ ಈ ದರ್ಜೆಯ ಅಗತ್ಯ ಸಂಖ್ಯೆಯ ಅಧಿಕಾರಿಗಳು ಲಭ್ಯವಿಲ್ಲದ ಸಂದರ್ಭ ಗಳಲ್ಲಿ ಎಂ.ಎ.ಎಸ್. ಅಧಿಕಾರಿಗಳನ್ನು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಾಗಿ ನೇಮಿಸಬಹುದು.

110. 10.10 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಜಿಲ್ಲೆಯ ಸ್ಥಳೀಯ ಸರ್ಕಾರಿ ಆಡಳಿತದ ಸಂಪೂರ್ಣ ನಿರ್ವಹಣೆಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುವನು. ಹಾಗೆಯೇ ಜಿಲ್ಲಾ ಪರಿಷತ್ತಿನ ಎಲ್ಲ ಸಿಬ್ಬಂದಿಯೂ ಈ ಅಧಿಕಾರಿಯ ನಿಯಂತ್ರಣದಲ್ಲಿ ಕೆಲಸ ಮಾಡುವುದು. ಈ ಅಧಿಕಾರಿಗೆ ೩ ಮತ್ತು ೪ನೇ ದರ್ಜೆಯ ಸಿಬ್ಬಂದಿಯ ಮೇಲಿನ ಶಿಸ್ತುಬದ್ಧ ನಿಯಂತ್ರಣಕ್ಕೆ ಸಂಬಂಧಿಸಿ ಅಗತ್ಯವಾದ ಅಧಿಕಾರಗಳು ಇರತಕ್ಕದ್ದು. ೨ನೇ ವರ್ಗದ ಅಧಿಕಾರಿಗಳ ವಿಚಾರದಲ್ಲೂ ಚಿಕ್ಕಪುಟ್ಟ ಶಿಕ್ಷೆಗಳ ಸಂಬಂಧದಲ್ಲಿ ಪ್ರಾಥಮಿಕ ಹುಕುಂಗಳನ್ನು ಮಾಡುವ ಅಧಿಕಾರವೂ ಈ ಅಧಿಕಾರಿಗೇ ಇರುವುದು.

111 10.13 ೩ನೇ ದರ್ಜೆಯ ಪಂಚಾಯಿತಿಗಳಿಗೆ ಗ್ರಾಮಲೆಕ್ಕಿಗ ಪಂಚಾಯತಿ ಕಾರ್ಯದರ್ಶಿಗೆ ಬದಲಾಗಿ, ಈ ವರ್ಗದಲ್ಲಿ ಪ್ರತಿ ಪಂಚಾಯತಿಗೂ ಒಬ್ಬ ಪ್ರತ್ಯೇಕ ಪಂಚಾಯತಿ ಕಾರ್ಯದರ್ಶಿಯು ಇರಬಹುದು. ದೊಡ್ಡ ವ್ಯಾಪ್ತಿಯ ಪಂಚಾಯತಿಗಳಿಗೆ ಪೂರ್ಣಾವಧಿಯ ಕಾರ್ಯದರ್ಶಿಗಳೂ ಮತ್ತು ಚಿಕ್ಕ ವ್ಯಾಪ್ತಿಯ ಪಂಚಾಯತಿಗಳಿಗೆ ಅರೆಕಾಲಿಕ ಕಾರ್ಯದರ್ಶಿಗಳೂ ಇರತಕ್ಕದ್ದು. ಈ ಪಂಚಾಯತಿ ಕಾರ್ಯದರ್ಶಿಗಳು ಸರ್ಕಾರಿ ನೌಕರರಾಗಿರುವುದಿಲ್ಲ. ಇವರ ಸಂಬಳ ಮತ್ತು ಭತ್ಯೆಗಳನ್ನು ಸಂಬಂಧಪಟ್ಟ ಪಂಚಾಯಿತಿ ಗಳೇ ಭರಿಸತಕ್ಕದ್ದು.

112 10.14 ಕ್ಷೇತ್ರದ ದರ್ಜೆಗನುಗುಣವಾಗಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಒಂದು ಸಮನಾದ ಸಿಬ್ಬಂದಿ ಮಾದರಿಯು ಇರುವ ಅಗತ್ಯವಿದೆ.

113 10.18 ಡೆಪ್ಯುಟಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಹುದ್ದೆಯು ಹೆಚ್ಚುವರಿಯಾಗಿದ್ದಲ್ಲಿ, ಆ ಹುದ್ದೆಗಳನ್ನು ರದ್ದುಗೊಳಿಸ ಬೇಕು. ಯಾವುದೇ ತಾಲೂಕಿನಲ್ಲಿ ಒಂದು

ಅಥವಾ ಎರಡು ಬ್ಲಾಕುಗಳಿದ್ದಲ್ಲಿ ತಾಲೂಕು ಅಭಿವೃದ್ಧಿ ಅಧಿಕಾರಿಯ ಕಚೇರಿಯ ದೈನಂದಿನ ಆಡಳಿತ ಕಾರ್ಯಗಳಲ್ಲಿ ನೆರವಾಗಲು ತಾಲೂಕು ಶಿರಸ್ತೇದಾರ್ ದರ್ಜೆಯ ಓರ್ವ ಕಚೇರಿ ನಿರ್ವಾಹಕನನ್ನು ನೇಮಿಸಿಕೊಳ್ಳಬೇಕು. ಯಾವುದೇ ತಾಲೂಕಿ ನಲ್ಲಿ ೩ ಅಥವಾ ೪ ಬ್ಲಾಕುಗಳಿದ್ದಾಗ, ತಾಲೂಕು ಅಭಿವೃದ್ಧಿ ಅಧಿಕಾರಿ ಕಚೇರಿಯ ದೈನಂದಿನ ಕೆಲಸಗಳಲ್ಲಿ ನೆರವಾಗಲು ಡೆಪ್ಯುಟಿ ತಹಶೀಲ್ದಾರ್ ದರ್ಜೆಯ ಓರ್ವ ಸಹಾಯಕ ತಾಲೂಕು ಅಭಿವೃದ್ಧಿ ಅಧಿಕಾರಿಯನ್ನು ನೇಮಿಸಿಕೊಳ್ಳಬೇಕು.

114. 10.19 ಜಿಲ್ಲಾಧಿಕಾರಿಗಳ ಜಿಲ್ಲಾ ಅಭಿವೃದ್ಧಿ ಸಹಾಯಕರಾಗಿ ಮುಂಬಡ್ತಿಯ ಮೇರೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ಹಾಗೂ ಮುಂಬಯಿ ಪ್ರಾಂತದ ಸ್ಥಳೀಯ ಸರ್ಕಾರಿ ಸೇವೆಯ ಅಧಿಕಾರಿಗಳನ್ನು ಹೈದರಾಬಾದು ಮತ್ತು ಮದರಾಸು ರಾಜ್ಯಗಳ ಅಧಿಕಾರಗಳನ್ನು ನೇಮಿಸಿಕೊಳ್ಳತಕ್ಕದ್ದು. ಕೆಲವು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ಜಿಲ್ಲಾಧಿಕಾರಿಗಳ ಹಾಗೂ ವಿಭಾಗಾಧಿಕಾರಿಗಳ ಕಚೇರಿಗಳಲ್ಲಿ ಕಚೇರಿ ಸಹಾಯಕರು ಗಳಾಗಿ ನೇಮಿಸಿಕೊಳ್ಳಬಹುದು. ಇಷ್ಟಾದಮೇಲೂ ಉಳಿಯುವ ಹೆಚ್ಚಿನ ಸಿಬ್ಬಂದಿಯನ್ನು ಪುರಸಭೆಗಳ ಚೀಫ್ ಆಫೀಸರುಗಳಾಗಿ ನೇಮಿಸಿಕೊಳ್ಳಬಹುದು.

115. 10.20 ಒಂದು ಬ್ಲಾಕಿಗೆ ಒಬ್ಬರಂತೆ, ಅಲ್ಲಿ ನಿರ್ವಹಿಸ ಬಹುದಾದಷ್ಟು ಕೆಲಸಗಳು ಇದ್ದಲ್ಲಿ ಕೃಷಿ, ಗ್ರಾಮೀಣ ಇಂಜಿನಿಯರಿಂಗ್ ಮತ್ತು ಸಹಕಾರ ವಿಸ್ತರಣಾಧಿಕಾರಿಗಳ ಸೇವೆಯನ್ನು, ಅಂತಹ ಬ್ಲಾಕುಗಳಲ್ಲಿ ಮುಂದುವರಿಸ ತಕ್ಕದ್ದು.

116. 10.21 ಪ್ರತಿಯೊಂದು ಬ್ಲಾಕಿಗೂ ಒಬ್ಬ ಪಂಚಾಯಿತಿ ವಿಸ್ತರಣಾ ಅಧಿಕಾರಿಯೂ ಇರಬಹುದು.

117. 10.22 ಪಶುಸಂಗೋಪನಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ರದ್ದು ಗೊಳಿಸಬಹುದು.

118. 10.23 ಯಾವ ಜಿಲ್ಲೆಗಳಲ್ಲಿ ಗ್ರಾಮೀಣ ಕೈಗಾರಿಕೆಗಳನ್ನು ಆರಂಭಿಸಲು ನಿರ್ದಿಷ್ಟ ವ್ಯಾಪ್ತಿಯ ಅವಕಾಶವಿದೆಯೊ ಅಂತಹ ಜಿಲ್ಲೆಗಳ ಕೈಗಾರಿಕೆ ಮತ್ತು ವಾಣಿಜ್ಯ ಸಹಾಯಕ ನಿರ್ದೇಶಕನ ಅಧೀನದಲ್ಲಿ ಒಂದು ಅಥವಾ ಎರಡು ಕೈಗಾರಿಕಾ ವಿಸ್ತರಣಾಧಿಕಾರಿಗಳ ಹುದ್ದೆಗಳು ಇರಬಹುದು. ಉಳಿದ ಎಲ್ಲ ಹುದ್ದೆಗಳನ್ನು ರದ್ದುಗೊಳಿಸಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸೂಕ್ತ ಹುದ್ದೆಗಳಿಗೆ ನೇಮಿಸ ಬಹುದು.

119. 10.24 ಗ್ರಾಮಸೇವಕರ ಹುದ್ದೆಗಳನ್ನು ರಾಜ್ಯದ ಎಲ್ಲ ಬ್ಲಾಕು ಗಳಲ್ಲೂ ೧೦ರಿಂದ ೮ ಹುದ್ದೆಗಳಿಗೆ ಇಡೀ ರಾಜ್ಯಕ್ಕೆ ಸಮನಾಗುವಂತೆ ಕಡಿತಗೊಳಿಸಬಹುದು.

120. 10.25 ಮದ್ರಾಸ್ ಸಂಸ್ಥಾನದಲ್ಲಿರುವಂತೆ ಇಲ್ಲಿಯೂ ಒಬ್ಬ ಮಂತ್ರಿ ಅಥವಾ ಅಧಿಕಾರೇತರ ಮಹಿಳೆಯ ಅಧ್ಯಕ್ಷತೆಯಲ್ಲಿ ರಾಜ್ಯ ಸಾಮಾಜಿಕ ಕ್ಷೇಮ ಸಲಹಾ ಮಂಡಲಿಯು ಇರತಕ್ಕದ್ದು. ಓರ್ವ ಮಹಿಳಾ ಅಧಿಕಾರಿಯು ನಿರ್ದೇಶಕರಾಗಿರುವ ಒಂದು ಪ್ರತ್ಯೇಕ ಇಲಾಖೆಯನ್ನು ಮಹಿಳಾ ಅಭಿವೃದ್ಧಿಗಾಗಿಯೇ ಸೃಷ್ಟಿಸತಕ್ಕದ್ದು. ಈ ನಿರ್ದೇಶಕಿಯು ರಾಜ್ಯ ಮಂಡಲಿಯ ಪದನಿಮಿತ್ತ ಕಾರ್ಯದರ್ಶಿಯಾಗಿಯೂ ಕೆಲಸ ನಿರ್ವಹಿಸುವರು. ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಕ್ಷೇಮಾಭ್ಯುದಯ ಕಾರ್ಯಕ್ರಮಗಳ ಹೊಣೆಯನ್ನು ನಿರ್ವಹಿಸಲು ಪ್ರತಿಜಿಲ್ಲೆಗೂ ಓರ್ವ ಮಹಿಳಾ ಕ್ಷೇಮಾಭ್ಯುದಯ ಅಧಿಕಾರಿಯು ಇರತಕ್ಕದ್ದು. ಈ ಇಲಾಖೆ ಯಲ್ಲಿ ಗ್ರಾಮಸೇವಕಿಯರು ಮತ್ತು ಮುಖ್ಯ ಸೇವಕಿಯರು ಇದ್ದು ಅವರ ಸಂಬಳ ಮತ್ತು ಭತ್ಯಗಳನ್ನು ಆ ಇಲಾಖೆಯೇ ಭರಿಸತಕ್ಕದ್ದು. ಗ್ರಾಮಸೇವಕಿಯರು ಮತ್ತು ಮುಖ್ಯ ಸೇವಕಿಯರ ಹುದ್ದೆಗಳನ್ನು ನೇಮಿಸಲು ಆಗದಿದ್ದಲ್ಲಿ ಸದರಿ ಹುದ್ದೆಗಳನ್ನು ರದ್ದುಗೊಳಿಸತಕ್ಕದ್ದು.

121. 10.27 ಸಮಾಜ ಶಿಕ್ಷಣಾಧಿಕಾರಿಗಳ ಹುದ್ದೆಗಳನ್ನು ರದ್ದುಗೊಳಿಸಿ, ಅವರನ್ನು ಅವರ ಸಾಮರ್ಥ್ಯಕ್ಕೆ ಅನುಗುಣವಾಗಿ ಶಿಕ್ಷಣ ಇಲಾಖೆಯ ಸೂಕ್ತ ಹುದ್ದೆಗಳಲ್ಲಿ ನೇಮಿಸತಕ್ಕದ್ದು.

122 10.29 ಸರ್ಕಾರವು ರೂಪಿಸಿರುವ ಕಾನೂನು ಕಾಯಿದೆಗಳನ್ವಯ ಈ ಕೆಳಕಂಡ ವಿವಿಧ ಇಲಾಖೆಗಳ ಜಿಲ್ಲಾಮಟ್ಟದ ಇಲಾಖೆಗಳ ಕಾರ್ಯಕ್ರಮಗಳನ್ನು ಜಿಲ್ಲಾ ಪರಿಷತ್ತಿಗೆ ವಹಿಸಿಕೊಡಬಹುದು.

(1) ಜಿಲ್ಲಾ ಕೃಷಿ ಅಧಿಕಾರಿ

(2) ಜಿಲ್ಲಾ ಆರೋಗ್ಯಾಧಿಕಾರಿ.

(3) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ

(4) ಓರ್ವ ಕಾರ್ಯಪಾಲಕ ಇಂಜಿನಿಯರ್

(5) ಜಿಲ್ಲಾ ಅಂಕಿಅಂಶಗಳ ಅಧಿಕಾರಿ

(6) ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್

(7) ಜಿಲ್ಲಾ ಶಿಕ್ಷಣಾಧಿಕಾರಿ

(8) ಕೈಗಾರಿಕೆ ಮತ್ತು ವಾಣಿಜ್ಯ ಸಹಾಯಕ ನಿರ್ದೇಶಕ

(9) ಜಿಲ್ಲಾ ಪಶುಸಂಗೋಪನಾಧಿಕಾರಿ

(10) ಭೂ ಸಂರಕ್ಷಣಾಧಿಕಾರಿ
(ಅಸ್ತಿತ್ವದಲ್ಲಿರುವಲ್ಲಿ ಮಾತ್ರ)

(11) ಜಿಲ್ಲಾ ಪ್ರಚಾರಾಧಿಕಾರಿ
(ಅಸ್ತಿತ್ವದಲ್ಲಿರುವಲ್ಲಿ ಮಾತ್ರ)

-ಈ ಇಲಾಖೆಗಳ ಕಾರ್ಯಕ್ರಮಗಳನ್ನು ಸರ್ಕಾರವು ಜಿಲ್ಲಾ ಪರಿಷತ್ತುಗಳಿಗೆ ವಹಿಸಿಕೊಡಬಹುದು.

123. 10.31 ಕೆಲಸ ಕಾರ್ಯಗಳ ವಿಕೇಂದ್ರೀಕರಣದಿಂದ ಎಲ್ಲ ಹಂತ ಗಳಲ್ಲೂ ಸಿಬ್ಬಂದಿಯನ್ನು ಕಡಿಮೆಗೊಳಿಸಲು ಅವಕಾಶ ಇದೆ. ಜಿಲ್ಲಾ ಪರಿಷತ್ತುಗಳು ಮತ್ತು ತಾಲೂಕು ಮಂಡಲಿ ಗಳಿಗೆ ಸಂಬಂಧಿಸಿದ ವಿವಿಧ ಆಡಳಿತ ವಿವರಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅಗತ್ಯವಾಗಿದೆ. ರಾಜ್ಯದ ಪ್ರತಿ ವಿಭಾಗಾಧಿಕಾರಿಗಳ ಅಧೀನದಲ್ಲಿ ಅಗತ್ಯವಾದ ಸಿಬ್ಬಂದಿಯ ವಿವರಗಳನ್ನು ಗಣನೆಗೆ ತೆಗೆದುಕೊಂಡು ಪಂಚಾಯತಿ ಮಂಡಲಿಗಳಿಗೆ ವರ್ಗಾಯಿಸಬೇಕಾದ ಎಲ್ಲ ಇಲಾಖೆಗಳ ಬಗ್ಗೆ ವಿವರ ಸಲ್ಲಿಸಲು ಓರ್ವ ಅನುಭವಿ ಅಸಿಸ್ಟೆಂಟ್ ಕಮೀಷನರನ್ನು ನಿಯೋಜಿಸಬಹುದು.

124. 10.32 ಜಿಲ್ಲಾ ಪರಿಷತ್ತು ಮತ್ತು ಇತರ ಸ್ಥಳೀಯ ಮಂಡಲಿಗಳ ಹಣಕಾಸು ವ್ಯವಹಾರಗಳ ವ್ಯಾಪ್ತಿಯು ಗಣನೀಯವಾಗಿ ಅಧಿಕವಾಗುವುದರಿಂದ ಪ್ರತಿಯೊಂದು ಜಿಲ್ಲಾ ಪರಿಷತ್ತಿಗೂ ಅಕೌಂಟೆಂಟ್ ಜನರಲ್ ಇಲಾಖೆಯಿಂದ ಓರ್ವ ಸಮರ್ಥ ಅಕೌಂಟ್ಸ್ ಆಫೀಸರನ ಸೇವೆಯನ್ನು ಒದಗಿಸುವುದು ಅಗತ್ಯ ವಾಗಿದೆ. ಹಾಗೆ ನೇಮಕಗೊಳ್ಳುವ ಅಧಿಕಾರಿಗೆ ಮುಖ್ಯ ಲೆಕ್ಕ ಪತ್ರಾಧಿಕಾರಿ ಮತ್ತು ಹಣಕಾಸು ಸಲಹೆಗಾರ ಎಂಬ ಪದನಾಮವನ್ನು ನೀಡತಕ್ಕದ್ದು.

125 10.23 ಯಾವುದೇ ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಯ ಸೇವೆಯನ್ನು ರಾಜ್ಯ ಸರ್ಕಾರವು ಹಿಂದಕ್ಕೆ ಪಡೆಯಲು ಅಧಿನಿಯಮದಲ್ಲಿ ಅವಕಾಶವಿರಬೇಕು. ಹೀಗೆ ಹಿಂದಕ್ಕೆ ಪಡೆಯುವ ಸಂದರ್ಭದಲ್ಲಿ ಜಿಲ್ಲಾ ಪರಿಷತ್ತಿನ ವಿಶೇಷ ಸಭೆಯಲ್ಲಿ ನಾಮಕರಣ ಸದಸ್ಯರನ್ನು ಹೊರತು ಪಡಿಸಿ, ಪರಿಷತ್ತಿನ ಒಟ್ಟು ಸದಸ್ಯರ 2/3 ಭಾಗದಷ್ಟು ಸದಸ್ಯರು ಒಪ್ಪಿಗೆಯ ಮತ ಸೂಚಿಸಿದಾಗ ಮಾತ್ರ ಈ ಬಗ್ಗೆ ಸದರಿ ಅಧಿಕಾರಿಯ ಸೇವೆಯನ್ನು ಹಿಂದಕ್ಕೆ ಪಡೆಯುವ ಬಗ್ಗೆ ಒಂದು ಠರಾವನ್ನು ಹೊರಡಿಸಬಹುದು.

| | | |
|---|---|---|
| 126. | 10.34 | ಯೋಜನೆಗಳು ಮತ್ತು ಕಾರ್ಯಕ್ರಮಗಳಿಗೆ ಅಗತ್ಯವಾದ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾ ಪರಿಷತ್ತು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಯ ಅಧಿಕಾರಿಗಳಿಗೆ ಇರತಕ್ಕದ್ದು. |
| 127. | 11.5 | ಈ ಸಂಸ್ಥೆಗಳಲ್ಲಿ ಮೇಲ್ವಿಚಾರಣೆ, ತಪಾಸಣೆ ಮತ್ತು ನಿರ್ದೇಶನ ನೀಡುವ ಮುಖ್ಯ ಉದ್ದೇಶದ ಸಂಸ್ಥೆಗಳಲ್ಲಿ ಒಳ್ಳೆಯ ಸಂಪ್ರದಾಯ ಹಾಗೂ ನೌಕರ ಮತ್ತು ನೌಕರೇತರರ ನಡುವೆ ಒಳ್ಳೆಯ ಸಂಬಂಧ ಹಾಗೂ ಪರಸ್ಪರ ಚರ್ಚೆಯಿಂದ ಒಬ್ಬರೊಡನೊಬ್ಬರು ಸಹಕಾರದಿಂದ ನಡೆಯುವ ಆರೋಗ್ಯಾತ್ಮಕವಾದ ನಡತೆಯನ್ನು ವೃದ್ಧಿ ಪಡಿಸುವುದೇ ಆಗಿದೆ. |
| 128. | 11.9 | ಸರ್ಕಾರಿ ಅಧಿಕಾರಿಗಳ ಕಾರ್ಯವ್ಯಾಪ್ತಿಯಲ್ಲಿ ಮುನ್ನಡೆಯುವ ಪಂಚಾಯತ್ ರಾಜ್ ಸಂಸ್ಥೆಗಳ ಮೇಲಿನ ನಿಯಂತ್ರಣವನ್ನು ರಾಜ್ಯಸರ್ಕಾರವೇ ಹೊಂದಿರುತ್ತದೆ. ಮತ್ತು ಮೇಲ್ವಿಚಾರಣೆ ಮತ್ತು ನಿರ್ದೇಶನದ ಅಧಿಕಾರವು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲೇ ಇರುತ್ತದೆ. |
| 129. | 11.10 | ಪಂಚಾಯತಿಗಳ ಚಟುವಟಿಕೆಗಳಿಗೆ ಸಂಬಂಧಿಸಿದ ನಿರ್ದೇಶನ ಮತ್ತು ಮೇಲ್ವಿಚಾರಣೆಯ ಜವಾಬ್ದಾರಿಯು ಪ್ರಮುಖವಾಗಿ ತಾಲೂಕು ಅಭಿವೃದ್ಧಿ ಮಂಡಲಿಗಳಿಗೇ ಇರತಕ್ಕದ್ದು. |
| 130. | 11.12 | ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ತಾಲೂಕು ಅಭಿವೃದ್ಧಿ ಮಂಡಲಿಗಳ ಕಚೇರಿಗಳ ತಪಾಸಣೆ ಮಾಡಬಹುದು. |
| 131 | 11.13 | ಸಂಬಂಧಪಟ್ಟ ವಿಭಾಗಾಧಿಕಾರಿಯು ಜಿಲ್ಲಾ ಪರಿಷತ್ತಿನ ತಪಾಸಣೆಯನ್ನು ನಡೆಸಬಹುದು. |
| 132. | 11.14 | ಪಂಚಾಯತಿ ಸಂಸ್ಥೆಗಳ ಆಯವ್ಯಯವನ್ನು ಅದಕ್ಕಿಂತ ಮೇಲಿನ ಹಂತದ ಮಂಡಲಿಯು ಅನುಮೋದಿಸಬೇಕು. ಅಂತಹ ಅನುಮೋದನೆಗಳನ್ನು, ಕಾರ್ಯಕ್ರಮಗಳ ವಿವರ ಗಳನ್ನು ಹೊರತುಪಡಿಸಿ, ಮಂಡಲಿಯ ಹಂಚಿಕೆಗಾಗಿ ಸಾಂಪ್ರದಾಯಕವಾಗಿ ಕಳುಹಿಸಿಕೊಡತಕ್ಕದ್ದು. ಮೇಲಿನ ಹಂತದಲ್ಲಿ ಆಯವ್ಯಯಗಳಿಗೆ ಅನುಮೋದನೆಯು ಬರುವುದು ತಡವಾದ ಸಂದರ್ಭದಲ್ಲಿ ಪಂಚಾಯತಿಗಳು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳು ಅನುಮೋದನೆ ಯನ್ನು ಕಾಯ್ದಿರಿಸಿ, ನಿರಂತರ ಯೋಜನೆಗಳ ಅನುಷ್ಠಾನ ವನ್ನು ಕೈಗೊಂಡು, ಅದಕ್ಕೆ ಅಗತ್ಯವಾದ ವೆಚ್ಚಗಳನ್ನು ಮಾಡತಕ್ಕದ್ದು. |

133. 11.21 ಸರ್ಕಾರದ ನಿಯಂತ್ರಣ ಮತ್ತು ಆಜ್ಞೆಗಳಿಗೆ ಒಳಪಟ್ಟು ವಿಭಾಗಾಧಿಕಾರಿಯು ಈ ಮಂಡಲಿಗಳ ಆಡಳಿತಾತ್ಮಕ ವಿಚಾರಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಮೇಲೂ ಹಿಡಿತ ಹೊಂದಿರುವ ಮುಖ್ಯ ನಿಯಂತ್ರಣ ಪ್ರಾಧಿಕಾರಿ ಯಾಗಿರಬಹುದು.

134. 11.22 ತುರ್ತು ಅಥವಾ ವಿಶೇಷ ಸನ್ನಿವೇಶಗಳಲ್ಲಿ ಜಿಲ್ಲಾ ಅಧಿಕಾರಿಯು ಕೆಲವು ಅಧಿಕಾರಗಳನ್ನು ಚಲಾಯಿಸುವ ಅಧಿಕಾರವನ್ನು ಹೊಂದಿರಬಹುದು.

135. 12.6 ಈಗ ಇರುವ ರಾಜ್ಯ ಅನೌಪಚಾರಿಕ ಸಮಾಲೋಚನಾ ಸಮಿತಿಗೆ ಬದಲಾಗಿ ಒಂದು ರಾಜ್ಯ ಪಂಚಾಯತಿ ರಾಜ್ ಸಮಿತಿಯನ್ನು ರಚಿಸಬಹುದು. ಈ ಸಮಿತಿಯು ಕೆಳಕಂಡ ಸದಸ್ಯರನ್ನು ಒಳಗೊಂಡಿರಬೇಕು.

(1) ಅಧ್ಯಕ್ಷ ಅಭಿವೃದ್ಧಿ ಇಲಾಖೆಯ ಮಂತ್ರಿ
(2) ಉಪಾಧ್ಯಕ್ಷ ಅಭಿವೃದ್ಧಿ ಇಲಾಖೆಯ ಉಪಮಂತ್ರಿ.
(3) ಜಿಲ್ಲಾ ಪರಿಷತ್ತುಗಳ ಅಧ್ಯಕ್ಷರುಗಳು
(4) ರಾಜ್ಯ ಸರ್ಕಾರದಿಂದ ನಾಮಕರಣಗೊಂಡ ಮೂವರು ಅಧಿಕಾರಿಗಳು
(5) ಕಾರ್ಯದರ್ಶಿ—ರಾಜ್ಯ ಸರ್ಕಾರವು ಸೂಕ್ತವೆಂದು ತೋರಿದ ಒಬ್ಬ ಅಧಿಕಾರಿ.

—ಸಮಿತಿಯ ಕಾರ್ಯಗಳು ಈ ಕೆಳಕಂಡಂತೆ ಇರತಕ್ಕದ್ದು.

(1) ಪಂಚಾಯತ್ ರಾಜ್ಯಕ್ಕೆ ಸಂಬಂಧಿಸಿದ ಎಲ್ಲ ಸಾಮಾನ್ಯ ಪ್ರಶ್ನೆಗಳಿಗೂ ರಾಜ್ಯ ಸರ್ಕಾರಕ್ಕೆ ತಿಳುವಳಿಕೆ ಕೊಡುವುದು.

(2) ಸ್ಥಳೀಯ ಮಂಡಲಿಗಳ ಆಡಳಿತವನ್ನು ಪರಾಮರ್ಶಿಸು ವುದು ಮತ್ತು ಸಮನ್ವಯ ಮಾರ್ಗಗಳ ಸಲಹೆ ಮಾಡುವುದು.

(3) ಈ ಮಂಡಲಿಗಳ ಹಣಕಾಸು ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳುವ ಮಾರ್ಗೋಪಾಯಗಳ ಸಲಹೆ ಮಾಡುವುದು.

(4) ಮಂಡಲಿಗಳು ಸೂಚಿಸಬಹುದಾದ ವಿಷಯಗಳ ಅಂಶಗಳನ್ನು ಸರ್ಕಾರದ ಅಭಿಪ್ರಾಯಕ್ಕಾಗಿ ವರದಿ ಮಾಡುವುದು.

136 12.7 ಜಿಲ್ಲಾ ಪರಿಷತ್ತುಗಳ ಆಡಳಿತ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸಬೇಕು.

137. 12.8 ಸದ್ಯಕ್ಕೆ ಕಂದಾಯ ವಸೂಲಿಯನ್ನು ರೆವಿನ್ಯೂ ಏಜನ್ಸಿಯು ಮಾಡಬಹುದು. ಮನೆಗಂದಾಯ ವಸೂಲಿಯನ್ನು ರೆವಿನ್ಯೂ ಏಜನ್ಸಿಗೇ ವಹಿಸಬಹುದು.

138. 12.9 ಅಭಿವೃದ್ಧಿ ಇಲಾಖೆಗಳ ಮುಖ್ಯಸ್ಥರಿಗೆ ವರ್ಗಾವಣೆಗಳು, ನೇಮಕಾತಿಗಳು, ಶಿಸ್ತುಕ್ರಮಗಳು ಮುಂತಾದ ಆಡಳಿತಾತ್ಮಕ ಕೆಲಸಗಳ ಹೆಚ್ಚಿನ ಹೊರೆ ಇರುವುದರಿಂದ ದ್ವಿತೀಯ ದರ್ಜೆಯ ಅಧಿಕಾರಿಗಳ ವರ್ಗಾವಣೆ ಕಾರ್ಯವನ್ನು ಹಿಂತೆಗೆದುಕೊಂಡು ರಾಜ್ಯ ಸರ್ಕಾರವೇ ಇಟ್ಟುಕೊಳ್ಳ ತಕ್ಕದ್ದು. ಮೂರನೇ ದರ್ಜೆಯ ತಾಂತ್ರಿಕ ಸಿಬ್ಬಂದಿಯ ನೇಮಕಾತಿಗಳಿಗೆ ಸಂಬಂಧಿಸಿದ ಕಾರ್ಯವನ್ನು ಅಭಿವೃದ್ಧಿ ಇಲಾಖೆಗಳ ಕಚೇರಿಗಳಲ್ಲಿರುವ ಒಬ್ಬ ಹಿರಿಯ ಅಧಿಕಾರಿಯು ನೋಡಿಕೊಳ್ಳಬಹುದು.

139. 12.10 ಸಚಿವಾಲಯ ಮಟ್ಟದಲ್ಲಿ ಅಭಿವೃದ್ಧಿ ಕಮಿಷನರಿಗೆ ನೆರವಾಗಲು ಜಂಟಿ ಅಭಿವೃದ್ಧಿ ಕಮಿಷನರ್ ಮತ್ತು ಸರ್ಕಾರದ ಹೆಚ್ಚಿನ ಕಾರ್ಯದರ್ಶಿ ಎಂಬ ಒಂದು ಹುದ್ದೆಯನ್ನು ಸೃಷ್ಟಿಸಬಹುದು. ಈ ಅಧಿಕಾರಿಯು ಸಮುದಾಯ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಆಡಳಿತದ ಎಲ್ಲ ಹೊಣೆಯನ್ನೂ ನಿರ್ವಹಿಸಬೇಕು. ಇದರ ಜೊತೆಗೆ ಕೆಲವು ಇತರ ಅಧಿಕಾರಿ ಹುದ್ದೆಗಳನ್ನು ಸೃಷ್ಟಿಸಬಹುದು.

140. 12.16 ಸಮಾಜದ ದುರ್ಬಲ ವರ್ಗಗಳವರಿಗೆ ಸಾಲಗಳನ್ನು ನೀಡಲು ಅಥವಾ ಅನುದಾನ ರೂಪದಲ್ಲಿ ಕೊಡಲು ಸಮುದಾಯ ಅಭಿವೃದ್ಧಿ ಮಂಡಲಿಗಳ ಆಯವ್ಯಯದಲ್ಲಿ ಒಂದು ನಿರ್ದಿಷ್ಟ ಮೊತ್ತದ ಹಣವನ್ನು ಕಾಯ್ದಿರಿಸಬಹುದು. ಸಮಾಜದ ದುರ್ಬಲ ವರ್ಗಗಳ ಕ್ಷೇಮಾಭ್ಯುದಯಕ್ಕಾಗಿ ಪಂಚಾಯತಿಗಳು ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳು ನಿರ್ದಿಷ್ಟಪಡಿಸಿದಷ್ಟು ಶೇಕಡಾವಾರು ನಿಧಿಯನ್ನು ಪ್ರತ್ಯೇಕವಾಗಿ ತೆಗೆದಿರಿಸ ಬಹುದು. ಹೀಗೆ ನೀಡುವ ಹಣಕಾಸಿನ ನೆರವಿನಿಂದ ದುರ್ಬಲ ವರ್ಗದ ಜನರು ಜೀವನೋಪಾಯಕ್ಕೆ ಮಾರ್ಗ ಗಳನ್ನು ರೂಪಿಸಿಕೊಳ್ಳುವಂತಹ ಆರ್ಥಿಕ ಸ್ವರೂಪದ ನೆರವುಗಳಾಗಿರಬೇಕು.

141. 12.17 ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳು ಮುಂತಾದ ಸಮಾಜದ ದುರ್ಬಲ ವರ್ಗದ ಜನತೆಗೆ ನೆರವಾಗುವಂತಹ ಎಲ್ಲ ಕಾರ್ಯಕ್ರಮಗಳ ಅನುಷ್ಠಾನದ ಉಸ್ತುವಾರಿಯನ್ನು ತಾಲೂಕು ಅಭಿವೃದ್ಧಿ ಮಂಡಲಿ ಮತ್ತು ಜಿಲ್ಲಾ ಪರಿಷತ್ತು ಗಳ ಸಂಬಂಧಪಟ್ಟ ಸಮಿತಿಗಳು ನೋಡಿಕೊಳ್ಳುವುದು ಅವುಗಳ ಪ್ರಾಥಮಿಕ ಹೊಣೆಯಾಗಿರುತ್ತದೆ.

| | | |
|---|---|---|
| 142 | 12.25 | ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರೇತರ ಸಿಬ್ಬಂದಿಗಳಿಗೆ ಒಂದು ಸಮಗ್ರ ತರಬೇತಿ ಕಾರ್ಯಕ್ರಮವು ಅತ್ಯಂತ ಅಗತ್ಯವಾಗಿದೆ. ಈ ಉದ್ದೇಶಕ್ಕಾಗಿ ಪ್ರಾಂತೀಯ ತರಬೇತಿ ಕೇಂದ್ರಗಳನ್ನು ವ್ಯವಸ್ಥೆ ಮಾಡುವುದಕ್ಕೆ ಬದಲಾಗಿ ಜಿಲ್ಲಾ ಪರಿಷತ್ತು ಮತ್ತು ತಾಲೂಕು ಮಂಡಲಿಗಳ ಸದಸ್ಯರಿಗೆ ನೆರವಾಗುವಂತಹ ಪುನರ್‌ಮನನ ತರಬೇತಿಗಳು ಅಥವಾ ವಿಚಾರಗೋಷ್ಠಿಗಳನ್ನು ಏರ್ಪಡಿಸಬಹುದು. ಗ್ರಾಮ ಪಂಚಾಯಿತಿಗಳ ಸದಸ್ಯರಿಗೆ ಸಂಚಾರಿ ತರಬೇತಿಯಂತಹ ತಿಳುವಳಿಕೆ ನೀಡುವ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಬಹುದು. ಹೊಣೆಗಾರಿಕೆಯನ್ನು ಜಿಲ್ಲಾ ಪರಿಷತ್ತುಗಳಿಗೆ ವಹಿಸಬಹುದು. |
| 144 | 12.29 | ಭೂ ಕಂದಾಯ ವಸೂಲಾತಿಯಲ್ಲದೆ ಪಂಚಾಯತಿಗಳು ವಿಧಿಸುವ ಮನೆಗಂದಾಯದ ವಸೂಲಾತಿಯ ಕೆಲಸವೂ ಸಹ ರೆವಿನ್ಯೂ ಏಜನ್ಸಿಯ ವ್ಯಾಪ್ತಿಗೇ ಸೇರಬೇಕು. ಅಂದರೆ ಅಸಿಸ್ಟೆಂಟ್ ಕಮಿಷನರುಗಳ ಹುದ್ದೆಗಳನ್ನು ರದ್ದು ಮಾಡುವಂತಿಲ್ಲ. ಆದಾಗ್ಯೂ ಅಭಿವೃದ್ಧಿಗೆ ಸಂಬಂಧಿಸಿದಂತೆ ಅಸಿಸ್ಟೆಂಟ್ ಕಮಿಷನರುಗಳ ಕೆಲಸವು ಕಡಿಮೆಯಾಗುವುದ ರಿಂದ ವಿಶೇಷ ಭೂಸ್ವಾಧೀನಾಧಿಕಾರಿಗಳ ಹುದ್ದೆಗಳನ್ನು (ಬೃಹತ್ ನೀರಾವರಿ ಯೋಜನೆಗಳನ್ನು ಹೊರತುಪಡಿಸಿ) ರದ್ದುಗೊಳಿಸಬಹುದು ಮತ್ತು ಭೂಸ್ವಾಧೀನ ಕೆಲಸವನ್ನು ಉಪವಿಭಾಗಗಳ ಅಸಿಸ್ಟೆಂಟ್ ಕಮಿಷನರುಗಳು ನೋಡಿ ಕೊಳ್ಳಬೇಕು. |

**ಶ್ರೀ ಎಸ್.ಗೊಪಾಲ ಗೌಡ** – ಸರ್ಕಾರದವರು ಹಂಚಿರತಕ್ಕ ಹಣ ಏನೇನೂ ಸಾಲದು ಅವರಿಗೆ ವಹಿಸಿರತಕ್ಕ ಕೆಲಸಗಳ ದೃಷ್ಟಿಯಿಂದ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಚಾಮರಾಜನಗರದ ತಾಲ್ಲೂಕಿಗೆ ೧೩ ಸಾವಿರ ರೂಪಾಯಿ ಕೊಟ್ಟಿದೆ. ಪ್ರತಿ ತಾಲ್ಲೂಕಿಗೆ ಅಷ್ಟೇ ಕೊಟ್ಟಿದೆ ಎಂದಲ್ಲ.

**ಶ್ರೀ ಎಸ್.ಗೋಪಾಲ ಗೌಡ** – ಬೇರೆ ಬೇರೆ ತಾಲ್ಲೂಕುಗಳಿಗೆ ಎಷ್ಟೆಷ್ಟು ಕೊಟ್ಟದ್ದಿರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಸಿಗುವುದಿಲ್ಲ. ನಾನು ನೋಟೀಸ್ ಕೇಳುತ್ತೇನೆ, ಸರ್

# ಗ್ರಾಮ ಮಟ್ಟದಲ್ಲಿ ಮಹಿಳಾ ನೌಕರರ ನೇಮಕಾತಿ

19ನೇ ಸೆಪ್ಟೆಂಬರ್ 1962

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ (ಗುಂಡ್ಲುಪೇಟೆ):**

ಅ. ಕಳೆದ 3 ವರ್ಷದ ಅವಧಿಯಲ್ಲಿ ನೇಮಕಗೊಂಡ ಗ್ರಾಮ ಸೇವಿಕೆಯರ ಸಂಖ್ಯೆ:

ಆ. ಅವರಲ್ಲಿ ಗೃಹ ವಿಜ್ಞಾನದಲ್ಲಿ ತರಬೇತಿ ಪಡೆಯಲು ಕಳುಹಿಸಿಕೊಟ್ಟ ಗ್ರಾಮ ಸೇವಿಕೆಯರ ಸಂಖ್ಯೆ ಜೊತೆಯಲ್ಲಿ ಅವರನ್ನು ಕಳುಹಿಸಿಕೊಟ್ಟಿರುವ ತರಬೇತಿ ಕೇಂದ್ರಗಳ ಸಂಖ್ಯೆ.

ಇ. ಅಂಥ ತರಬೇತಿ ಶಾಲೆಗಳಲ್ಲಿ ಸರಿಯಾಗಿ ತರಬೇತಿ ಹೊಂದಿದ ವ್ಯಕ್ತಿಗಳು ಇದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಖಾತೆಯ ಉಪಮಂತ್ರಿ)**

ಅ. 190

ಆ. ಮಾಹಿತಿಯು ಕೆಳಗಿನಂತಿದೆ:

107 ಗ್ರಾಮ ಸೇವಿಕ ತರಬೇತಿ ಕೇಂದ್ರ, ಮಂಡ್ಯ.

63 – ಗ್ರಾಮ ಸೇವಿಕ ತರಬೇತಿ ಕೇಂದ್ರ, ಧಾರವಾಡ

20 – ಗ್ರಾಮ ಸೇವಿಕ ತರಬೇತಿ ಕೇಂದ್ರ, ಗಂಗಾವತಿ

ಇ. ಹೌದು

ಶ್ರೀ ಕೊಂಡಜ್ಜಿ ಬಸಪ್ಪ: 1959ರಲ್ಲಿ:– ಮಂಡ್ಯದಲ್ಲಿ ನಾವು ಸೆಲೆಕ್ಟ್ ಮಾಡಿದ್ದು= 55

ಧಾರವಾಡದಲ್ಲಿ ನಾವು ಸೆಲೆಕ್ಟ್ ಮಾಡಿದ್ದು = 33

ಒಟ್ಟು 88 ಗ್ರಾಮ ಸೇವಿಕೆಯರು

1961ರಲ್ಲಿ :– ಮಂಡ್ಯದಲ್ಲಿ ನಾವು ಸೆಲೆಕ್ಟ್ ಮಾಡಿದ್ದು = 52

ಧಾರವಾಡದಲ್ಲಿ ನಾವು ಸೆಲೆಕ್ಟ್ ಮಾಡಿದ್ದು = 30

ಗಂಗಾವತಿಯಲ್ಲಿ ನಾವು ಸೆಲೆಕ್ಟ್ ಮಾಡಿದ್ದು = 20

ಒಟ್ಟು = 102 ಗ್ರಾಮ ಸೇವಿಕೆಯರು

ಒಟ್ಟು 198 ಗ್ರಾಮಸೇವಿಕೆಯರನ್ನು ಆರಿಸಲಾಯಿತು.

**ಶ್ರೀ ಕೊಂಡಜ್ಜಿ ಬಸಪ್ಪ:** ಸ್ಕೀಮ್‌ನ ಪ್ರಾರಂಭದಲ್ಲಿ ಎಸ್.ಎಸ್.ಎಲ್.ಸಿ. ಪಾಸ್ ಆದವರನ್ನು ಆಯ್ಕೆ ಮಾಡುವ ಅಭ್ಯಾಸವಿತ್ತು. ನಂತರದಲ್ಲಿ ನಾವೀಗ ಎಸ್.ಎಸ್.ಎಲ್.ಸಿ. ಕೋರ್ಸ್‌ಗೆ ಎಂದು ಕಡಿಮೆ ಮಾಡಿದೆವು. ನಾವೀಗ ಲೋಯರ್ ಸೆಕೆಂಡರಿ ಅಥವಾ ಮುಲ್ಕಿ ಪರೀಕ್ಷೆಗೆ ಇಳಿಸಿದ್ದೇವೆ. ಇದಾದ ನಂತರವೂ ಬೆಳಗಾಂ/ ಗುಲ್ಬರ್ಗಾ ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಅಭ್ಯರ್ಥಿಗಳು ಸಿಗುತ್ತಿಲ್ಲ/ಬರುತ್ತಿಲ್ಲ. ಮಂಡ್ಯ, ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳು ಬಿಟ್ಟರೆ, ಈ ತರಬೇತಿಗೆ ಇತರ ಜಿಲ್ಲೆಗಳಿಂದ ಬರುತ್ತಿರುವ ಪ್ರತಿಕ್ರಿಯೇ ತುಂಬಾ ಕಡಿಮೆ. ಪದೇ ಪದೇ ಜಾಹಿರಾತುಗಳನ್ನು ಕೊಟ್ಟಿದ್ದರೂ ನಮಗೆ ದೊರಕುತ್ತಿಲ್ಲ. ನಮಗೆ ಬೇಕಾಗುವಷ್ಟು ಅಭ್ಯರ್ಥಿಗಳು ಸಿಗುತ್ತಿಲ್ಲ, ಉದ್ಯೋಗಿಗಳು ಅದೇ ನಮಗೆ ತೊಂದರೆಯಾಗಿರುವುದು.

**ಶ್ರೀ ಕೊಂಡಜ್ಜಿ ಬಸಪ್ಪ:** ಅಷ್ಟೇ ಸಂಖ್ಯೆಯಲ್ಲಿ ನೇಮಕಾತಿ ಆಗಿದ್ದು, ಏಕೆಂದರೆ ಯಾರು ಮುಂದೆ ಬರಲಿಲ್ಲ. ನಮಗೆ ಬೇಕಾಗುವಷ್ಟು ಸಂಖ್ಯೆಯಲ್ಲಿ ಅಭ್ಯರ್ಥಿಗಳು ಸಿಗುತ್ತಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಕೇಂದ್ರದಿಂದ ನಮಗೆ ಅಂಥ ನಿರ್ದೇಶನ ಇಲ್ಲ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಮಂಡ್ಯದಲ್ಲಿರತಕ್ಕ ಪ್ರಿನ್ಸಿಪಾಲರಿಂದ ಯಾವ ಕಂಪ್ಲೆಂಟೂ ಬಂದಿಲ್ಲ ಎಂದು ಅಪ್ಪಣೆ ಕೊಡಿಸಿದ್ದೀರಿ. ತಮ್ಮ ಅಡ್ವರ್ಟೈಜ್ ಮೆಂಟ್‌ಗೆ ರೆಸ್ ಪಾನ್ಸ್ ಮಾಡಿ ಎಷ್ಟು ಅಪ್ಲಿಕೇಷನ್ ಬಂದವು ಎಷ್ಟು ಜನ ಹೆಣ್ಣು ಮಕ್ಕಳನ್ನು ತಾವು ಟ್ರೈನಿಂಗಿಗೆ ತೆಗೆದುಕೊಂಡಿರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ನನ್ನ ಹತ್ತಿರವಿಲ್ಲ, ಸರ್.

**ಶ್ರೀಮತಿ ಬಸವರಾಜೇಶ್ವರಿ** – ಸೋಷಿಯಲ್ ವೆಲ್‌ಫೇರ್ ಡಿಪಾರ್ಟ್‌ಮೆಂಟಿನಲ್ಲಿ ಕೆಲವು ಗ್ರಾಮ ಸೇವಕಿಯರನ್ನು ಅಬ್ಸಾರ್ಬ್ ಮಾಡಿಕೊಂಡಿದ್ದಾರೆ. ಅವರ ಸಂಖ್ಯೆ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ಸಮಾಜ ಕಲ್ಯಾಣ ಇಲಾಖೆಯಿಂದ 180 ವ್ಯಕ್ತಿಗಳನ್ನು ನಾವು ಸೇರಿಸಿಕೊಂಡಿದ್ದೇವೆ.

**ಶ್ರೀ ಬಿ.ಎಲ್.ಗೌಡ:** ಮಹಿಳೆಯರಿಂದ ಸಾಕಷ್ಟಿಲ್ಲದ ಪ್ರತಿಕ್ರಿಯೆಯ ದೃಷ್ಟಿಯಿಂದ, ಅವರ ವೇತನ ಹೆಚ್ಚಿಸುವ ಪ್ರಶ್ನೆಯನ್ನು ಸರ್ಕಾರ ಪರಿಗಣಿಸುವುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರ್ಕಾರದ ಗಮನವನ್ನು ಹಿಡಿದಿಟ್ಟಿದೆ. ಸಾಧ್ಯವಿದ್ದಷ್ಟು ಹಲವು ಅಭ್ಯರ್ಥಿಗಳನ್ನು ಆಕರ್ಷಿಸಲು, ಅವರ ವೇತನವೊಂದನ್ನು ಪರಿಗಣಿಸುತ್ತಿಲ್ಲ,

ಜೊತೆಯಲ್ಲಿ ಅಲ್ಲಿ ಆದರೆ ಸ್ಥಳೀಯ ಜನರು ಮುಂದೆ ಬರುತ್ತಾರೆಯೇ, ವಿದ್ಯಾಭ್ಯಾಸದ ಅರ್ಹತೆಗಳನ್ನು ಇನ್ನು ಕಡಿಮೆ ಮಾಡಬೇಕೇ ಎಂಬುದನ್ನು ಸಹ ನೋಡುತ್ತಿದ್ದೇವೆ.

**ಶ್ರೀಮತಿ ಬಸವರಾಜೇಶ್ವರಿ** – ಗುಲ್ಬರ್ಗಾಕ್ಕೆ ಎಷ್ಟು ಜನ ಗ್ರಾಮ ಸೇವಕಿಯರನ್ನು ಅಲಾಟ್ ಮಾಡಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ನನ್ನ ಬಳಿ ಮಾಹಿತಿಯಿಲ್ಲ.

**ಶ್ರೀಮತಿ ಕೆ.ಎಸ್.ನಾಗರತ್ನಮ್ಮ:** ಅಲಹಾಬಾದ್ ಯೂನಿವರ್ಸಿಟಿ ಟ್ರೈನಿಂಗ್ ಸೆಂಟರ್‌ಗೆ ಕಳುಹಿಸಿಕೊಡಿ ಎಂದು ಎಷ್ಟು ಕಾಗದವನ್ನು ಬರೆದರೂ ಜವಾಬು ಕೊಡದೆ ಅವರೇ ಹೋಗಿ ಸೇರಿಕೊಂಡು ಹೆಣ್ಣು ಮಕ್ಕಳಿಗೆ ಲೀವ್ ಗ್ರ್ಯಾಂಟ್ ಮಾಡದೆ ಅವರನ್ನು ಡಿಸ್‌ಮಿಸ್ ಮಾಡುತ್ತೇವೆಂದು ಹೆದರಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ತರಬೇತಿ ಕೇಂದ್ರದಲ್ಲಿ ತರಬೇತಿ ನೀಡುವ ಸಿಬ್ಬಂದಿಯನ್ನು ನಾವು ಹೊಂದಿದ್ದೇವೆ ಎಂಬುದನ್ನು ಮಾನ್ಯ ಸದಸ್ಯರು ಹೇಳುತ್ತಾರೆಯೇ? ಸದ್ಯಕ್ಕೆ ಒಬ್ಬರನ್ನು ನಿಯೋಜಿಸಿದ್ದೇವೆ. (ಡೆಪ್ಯೂಟೆಡ್). ನಮ್ಮ ನೋಟಿಫಿಕೇಶನ್ ಪ್ರತಿಕ್ರಿಯೆಯಾಗಿ ಪ್ರಯಾಸವಾಗಿ 2 ಗೃಹ ವಿಜ್ಞಾನ ಪದವೀಧರು ಮುಂದೆ ಬಂದರು; ನಾವು ಅವರನ್ನು ನೇಮಕ ಮಾಡಿದೆವು. ಕೆಲವು ತಿಂಗಳಲ್ಲಿ ಕೆಲಸಕ್ಕೆ ಸೇರಿದವರು ಬಿಟ್ಟು ಹೋದರು. ನಮಗೆ ಈ ಗೃಹ ವಿಜ್ಞಾನ ಪದವೀಧರರ ಕೊರತೆ ಇದೆ.

**ಶ್ರೀ ಸಿ.ಜಿ. ಮುಕ್ಕಣ್ಣಪ್ಪ:** ಲೋಕಸೇವಾ ಆಯೋಗ ಆಯ್ಕೆ ಮಾಡಿದ ಅಭ್ಯರ್ಥಿಗಳಲ್ಲಿ ಮಂಡ್ಯ ತರಬೇತಿ ಕೇಂದ್ರವನ್ನು ಸೇರಿದ್ದಾರೆ ಎಂದು ನಾನು ತಿಳಿದು ಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಜಿಲ್ಲಾವಾರು ಸಂಖ್ಯೆಯನ್ನು ನೀಡಿದ್ದೇನೆ.

**ಶ್ರೀ ಸಿ.ಜಿ.ಮುಕ್ಕಣ್ಣಪ್ಪ:** ನಾನು ಹುಡುಗರ ಬಗ್ಗೆ ಕೇಳಿಲ್ಲ, ಆದರೆ ಕೇಳಿದ್ದು ಹುಡುಗಿಯರ ಬಗ್ಗೆ.

**ಶ್ರೀ ಕೊಂಡಜ್ಜಿ ಬಸಪ್ಪ:** 1959 ನೇಯ ವರ್ಷದಲ್ಲಿ 19 ಹಾಗೂ 1961 ರಲ್ಲಿ 52.

**ಶ್ರೀ ಸಿ.ಜಿ.ಮುಕ್ಕಣ್ಣಪ್ಪ:** ಅವರಲ್ಲಿ ಎಷ್ಟು ಜನ ಸೇರಿಕೊಂಡರು ಹಾಗೂ ಎಷ್ಟು ಜನ ಬಿಟ್ಟರು.

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸುಬೇಕು.

**ಸಭಾಧ್ಯಕ್ಷರು :** ಲೋಕಸೇವಾ ಆಯೋಗದವರು ಜಾಹೀರಾತು ಕೊಟ್ಟಿದ್ದು ಎಂದು ಮಾನ್ಯಮಂತ್ರಿಯವರು ಹೇಳಿದರು ಹಾಗೂ ಅವರ ಹತ್ತಿರ ಮಾಹಿತಿ ಇಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು.

**ಶ್ರೀ ಎಸ್.ಸುಬ್ಬಯ್ಯ –** ಗ್ರಾಮ ಸೇವಕಿಯರು ಕೆಲಸಕ್ಕೆ ಬರುತ್ತಾ ಇಲ್ಲ ಎಂದು ಹೇಳಿದಿರಿ. ಅವರು ಕೆಲಸಕ್ಕೆ ಬರುವ ಹಾಗೆ ಏನೇನು ಕ್ರಮವನ್ನು ತೆಗೆದುಕೊಂಡಿದ್ದಿರಿ? ಯಾವ ಯಾವ ಪೇಪರ್ ನಲ್ಲಿ ಪ್ರಕಟಣೆ ಕೊಡುತ್ತಿದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಪ್ರಶ್ನೆಗೆ ಈಗಾಗಲೇ ಉತ್ತರಿಸಿದ್ದೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಈಗ ಆ ಕೆಲಸಕ್ಕೆ ಮುಲ್ಕೀ ಪರೀಕ್ಷೆ ಅಥವಾ ಎಲ್.ಎಸ್ ಪಾಸಾಗಿದ್ದರೆ ಸಾಕು ಎಂದು ಹೇಳಿದ್ದೇವೆ. ಅದಕ್ಕೂ ಸಾಕಷ್ಟು ಜನ ಮುಂದೆ ಬರುತ್ತಾ ಇಲ್ಲ. ಲೋಕಲ್ ಸರ್ವಿಸ್ ಮಾಡಿಕೊಳ್ಳಬೇಕು. ಸಾಧ್ಯವಾದರೆ ಅದನ್ನು ಮಾಡೋಣವೆಂದು ಯೋಚನೆ ಮಾಡುತ್ತಿದ್ದೇವೆ. ಮಾನ್ಯ ಸದಸ್ಯರೊಬ್ಬರು ಹೇಳಿದರು, ಅವರ ಪೇಸ್ಕೇಲ್ ಅಷ್ಟು ಅಟ್ರಾಕ್ಟಿವ್ ಆಗಿಲ್ಲ ಎಂದು. ಅದನ್ನು ಮಾಡಿದರೆ ಅದು ಸಾದ್ಯವಾಗುತ್ತದೆಯೇನೋ ಗೊತ್ತಿಲ್ಲ. ಆ ವಿಷಯವೂ ಕೂಡ ಸರ್ಕಾರದ ಮುಂದೆ ಇದೆ.

**ಶ್ರೀ ಎಸ್.ಶಿವಪ್ಪ:** ಗ್ರಾಮ ಸೇವಕಿಯರ ಸೇವಾ ಕ್ಷೇತ್ರದಲ್ಲಿ ಭದ್ರತೆಯ ಅಭಾವದಿಂದ ಆ ಕೆಲಸಕ್ಕೆ ಬರುವುದಕ್ಕೆ ಅವರು ಹಿಂಜರಿಯುತ್ತ ಇರುವುದು ಪ್ರಬಲವಾದ ಕಾರಣ ಎಂಬುದು ಸರಕಾರಕ್ಕೆ ಗೊತ್ತಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ಕಾರಣವಲ್ಲ.

**ಶ್ರೀ ಬಿ.ಎಲ್. ಸುಬ್ಬಮ್ಮ:** ಟ್ರೈನಿಂಗ್ ಆಗಿ ಕೆಲಸಕ್ಕೆ ಬಂದ ಹೆಣ್ಣು ಮಕ್ಕಳು ಸ್ವಲ್ಪ ದಿವಸ ಇದ್ದು ಆಮೇಲೆ ಬಿಟ್ಟು ಹೊರಟುಹೋಗುತ್ತಾರೆ. ಇದಕ್ಕೆ ಕಾರಣವೇನೆಂಬುದನ್ನು ಸರ್ಕಾರದವರು ಕಂಡುಹಿಡಿದಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಸಾಮಾನ್ಯವಾಗಿ ಈ ಕೆಲಸಕ್ಕೆ ಚುನಾಯಿತರಾಗಿ ಬರುವವರೆಲ್ಲ ಪಟ್ಟಣಗಳಿಂದ ಬರುತ್ತಿದ್ದಾರೆ. ಗ್ರಾಮಾಂತರ ಪ್ರದೇಶದಿಂದ ಹೆಚ್ಚಿಗೆ ಬರುತ್ತಾ ಇಲ್ಲ. ಬಹು ಮಟ್ಟಿಗೆ ಟೌನಿನಿಂದ ಬರುವವರೆಲ್ಲರಿಗೂ ಹಳ್ಳಿಗಳ ವಾತಾವರಣ ಸರಿ ಹೋಗದೆ ಸ್ವಲ್ಪ ದಿವಸ ಕೆಲಸದಲ್ಲಿದ್ದು ಆ ಮೇಲೆ ಅವರು ಬಿಟ್ಟು ಹೋಗುತ್ತಾರೆ.

**ಶ್ರೀ ಕೆ.ಹೆಚ್. ರಂಗನಾಥ:** ಆಯ್ಕೆಯಾದ ಅಭ್ಯರ್ಥಿಗಳಲ್ಲಿ ಎಷ್ಟು ಜನರನ್ನು ಮಂಡ್ಯ ತರಬೇತಿ ಕೇಂದ್ರಕ್ಕೆ ಕಳುಹಿಸಲಾಗಿದೆ/ನಿಯೋಜಿಸಿಲಾಗಿದೆ.

**ಸಭಾಧ್ಯಕ್ಷರು:** ಆ ಪ್ರಶ್ನೆಯನ್ನು ಕೇಳಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಮಂಡ್ಯ ತರಬೇತಿ ಕೇಂದ್ರಕ್ಕೆ ಗೃಹ ವಿಜ್ಞಾನ ವಿಭಾಗವು ಅಟ್ಯಾಚ್ ಆಗಿದೆ. ಆಯ್ಕೆಯಾದವರೆಲ್ಲಾ ಗೃಹ ವಿಜ್ಞಾನಕ್ಕೆ ಮಾತ್ರ.

**ಶ್ರೀಮತಿ ಕೆ.ಎಸ್.ನಾಗರತ್ನಮ್ಮ:** ಗ್ರಾಮ ಸೇವಕಿಯರಲ್ಲಿ ಕ್ವಾಲಿಫೈಡ್ ಆದವರು ಇದ್ದರೆ ಅವರಿಗೆ ಬಿ.ಡಿ.ಓ ಚಾನ್ಸ್ ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ಫೀಲ್ಡ್ ವರ್ಕ್‌ನಲ್ಲಿ ತರಬೇತಿ ಪಡೆದವರು ಬಹಳ ಮಂದಿ ಮೂಲತಃ ಅವರೆಲ್ಲರೂ ಮುಖ್ಯ ಸೇವೆಕಿಯರು ಮುಂದೆ ಅವರನ್ನು ಸಹಾಯಕ ಇನ್‌ಸ್ಪೆಕ್ಟರ್‌ಗಳಾಗಿ ಸೇರಿಸಿಕೊಳ್ಳಲಾಗುವುದು.

**ಶ್ರೀ ಜಿ.ವಿ.ಗೌಡ:** ಇಬ್ಬರೂ ಟ್ರೈನಿಗಳನ್ನು ಮಾತ್ರ ನಿಯೋಜಿಸಲಾಗಿದೆ (ಡೆಪ್ಯೂಟೆಡ್) ಎಂದು ಹೇಳಿದೀರಿ. ಈ ರೀತಿಯಲ್ಲಿ ಎಷ್ಟು ಜನರಿಗೆ ತರಬೇತಿ ನೀಡಲಾಗುವುದು.

**ಶ್ರೀ ಕೊಂಡಜ್ಜಿ ಬಸಪ್ಪ:** ಯಾರು ಒಂದು ಸಲ ಕೆಲವು ಮಾಡಿರುತ್ತಾರೋ ಅವರನ್ನು ನಾವು ನಿಯೋಜಿಸುವುದಿಲ್ಲ. ನಾವು ಬ್ಯಾಚ್‌ನ್ನು ನಿಯೋಜಿಸುತ್ತೇವೆ. ಮೊದಲು ನಾವು ಆಯ್ಕೆ ಮಾಡಿದ್ದು ಇಬ್ಬರನ್ನೆ.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ:** ತರಪೇತು ಕೊಡುವಾಗ ಗ್ರಾಮಾಂತರ ಪ್ರದೇಶದಲ್ಲಿ ವಾಸಮಾಡುವುದಕ್ಕೆ ಇಷ್ಟಪಡುವುದಿಲ್ಲ ಎಂದು ಅನ್ನುವವರಿಗೆ ತರಬೇತಿ ಕೊಡಬೇಕೆ? ಇದು ಸರ್ಕಾರದ ಉದ್ದೇಶವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇಲ್ಲ. ನಾನು ಆಗಲೇ ಹೇಳಿದೆ ಸೆಲೆಕ್ಷನ್ ಮಾಡುವಾಗ ಟೌನ್‌ನಲ್ಲಿರತಕ್ಕವರೇ ಮುಂದೆ ಬರುತ್ತಾರೆ. ಅವರಿಗೆ ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕ ಸನ್ನಿವೇಶ ಹೊಂದಾಣಿಕೆ ಆಗದೆ ಸ್ವಲ್ಪ ದಿವಸ ಇದ್ದು ಬಿಟ್ಟು ಬಂದಿದ್ದಾರೆ. ಇದು ನಮಗೆ ಬಂದಿರತಕ್ಕ ಸಮಾಚಾರ.

# ಗ್ರಾಮ ಪಂಚಾಯ್ತಿಗಳಿಗೆ ಕಾರ್ಯದರ್ಶಿಗಳ ನೇಮಕ ಕುರಿತು

22ನೇ ಸೆಪ್ಟೆಂಬರ್ 1962

ಶ್ರೀ ದಯಾನಂದ ಆರ್. ಕಳ್ಳೆ(ಕಾರ್ಕಳ):–

ಅ. ಮೈಸೂರು ಗ್ರಾಮ ಪಂಚಾಯ್ತಿ ಕಾಯ್ದೆ 1959ರ ಅಡಿಯಲ್ಲಿ ರಚನೆಯಾಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಪಂಚಾಯ್ತಿಗಳಿಗೆ ಕಾರ್ಯದರ್ಶಿಗಳನ್ನು ನೇಮಕ ಮಾಡಲಾಗುತ್ತದೆಯೇ ಹಾಗೂ ಇಲ್ಲ ಎಂದಲ್ಲಿ, ಕಾರ್ಯದರ್ಶಿಗಳಿಲ್ಲದೇ ಇರುವ ದಕ್ಷಿಣ ಕನ್ನಡ ಜಿಲ್ಲೆಯ ಪಂಚಾಯ್ತಿಗಳ ಸಂಖ್ಯೆ:

ಆ. ಈ ಪಂಚಾಯ್ತಿಗಳಲ್ಲಿ ಅವರಿಲ್ಲದೇ ಪಂಚಾಯ್ತಿ ಹಣವನ್ನು ಅಪರೇಟ್ ಮಾಡಲಿಕ್ಕೆ ಆಗುವುದಿಲ್ಲ ಎಂಬುದು ಅವರಿಗೆ ತಿಳಿದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ)**

(ಸಹಕಾರ ಮತ್ತು ಅಭಿವೃದ್ಧಿ ಶಾಖೆಯ ಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರ ಪರವಾಗಿ)

ಅ. ಹೌದು, ದಕ್ಷಿಣ ಕನ್ನಡ ಜಿಲ್ಲೆಯ 12 ಗ್ರಾಮ ಪಂಚಾಯ್ತಿಗಳಲ್ಲಿ ಕಾರ್ಯದರ್ಶಿಗಳಾಗಿ ನೇಮಕ ಮಾಡಿದ ವ್ಯಕ್ತಿಗಳು ರಾಜಿನಾಮೆಯನ್ನು ನೀಡಿಲ್ಲ ಮತ್ತು ಸರಿಯಾಗಿ ಅವರ ಕೆಲಸವನ್ನು ಮಾಡುತ್ತಿಲ್ಲ.

ಆ. ಹೌದು.

**ಶ್ರೀ ದಯಾನಂದ ಆರ್. ಕಳ್ಳೆ:** ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೨ ಗ್ರಾಮ ಪಂಚಾಯಿತಿಗಳಿಗೆ ನೇಮಕ ಮಾಡಲಾದ ಕಾರ್ಯದರ್ಶಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲ. ಅವರು ತಮ್ಮ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟಿದ್ದಾರೆಂದು ಹೇಳಿದ್ದೀರಿ. ಈ ರೀತಿ ಆಗುವುದಕ್ಕೆ ಅವರಿಗೆ ಕೊಟ್ಟಿರುವ ಕಡಿಮೆ ಸಂಬಳವೇ ಕಾರಣ ಎಂಬುದು ಸರ್ಕಾರಕ್ಕೆ ಗೊತ್ತಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಪಂಚಾಯ್ತಿಗಳಿಗೆ ನೇಮಕ ಮಾಡಲಾಗಿತ್ತು. ಪಂಚಾಯ್ತಿಗಳಿಗೂ ಸಹ ನೇಮಕಾತಿಯನ್ನು ಮಾಡಿದೆ. ಆದರೆ 12 ದುರಾದೃಷ್ಟವಶಾತ್ ಆದ ನೇಮಕಾತಿ ಅವರೆಲ್ಲರೂ ಶಾನುಭೋಗರು ಹಾಗೂ ಅವರಿಗೆ ಕೆಲಸ

ಮಾಡುವುದು ಕಷ್ಟವಾಯಿತು. ಅದಕ್ಕೆ ಕೆಲಸ ಖಾಲಿಯಾದಾಗ ಹಾಗೂ ನಾವು ತಾಲ್ಲೂಕಿನ ತಹಶೀಲ್ದಾರರಿಗೆ ಮತ್ತು ಡೆವಲಪ್‌ಮೆಂಟ್ ತಾಲ್ಲೂಕು ಬ್ಲಾಕ್‌ನ ಚೀಫ್ ಎಕ್ಸಿಕ್ಯೂಟಿವ್ ಆಫೀಸರ್‌ಗಳಿಗೆ ಹೆಸರುಗಳನ್ನು ಶಿಫಾರಸ್ಸು ಮಾಡಲು ಸೂಚಿಸಲಾಗಿತ್ತು. ತಕ್ಷಣವೇ ಅವರು ಹೆಸರುಗಳನ್ನು ಕಳುಹಿಸಿಕೊಟ್ಟರು ಜಿಲ್ಲಾಧಿಕಾರಿಗಳು ಸರಿಯಾದ ಶಿಫಾರಸ್ಸುಗಳೊಂದಿಗೆ ಕಳುಹಿಸಿ ಕೊಟ್ಟರೆ, ವಿಭಾಗೀಯ ಕಮೀಶನ್‌ರ್‌ರವರು ಅವರನ್ನು ನೇಮಕ ಮಾಡುತ್ತಾರೆ.

**ಶ್ರೀ ದಯಾನಂದ್ ಆರ್. ಕಳೆ:** ಎರಡು ಮೂರು ಪಂಚಾಯಿತಿಗಳಿಗೆ ಒಬ್ಬ ಸೆಕ್ರೆಟರಿಯನ್ನು ನೇಮಕ ಮಾಡಿದ ಪಂಚಾಯಿತಿಗಳೆಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ಒಂದು ಪಂಚಾಯಿತಿಗೆ ಒಬ್ಬ ಸೆಕ್ರೆಟರಿ ಇದ್ದಾರೆ. ೧೨ ಪಂಚಾಯಿತಿಗಳಿಗೆ ಮಾತ್ರ ಸೆಕ್ರೆಟರಿಗಳ ಪೋಸ್ಟ್ ವೇಕೆಂಟ್ ಇದೆ.

**ಶ್ರೀ ದಯಾನಂದ್ ಆರ್.ಕಳೆ:** ಪಂಚಾಯಿತಿ ಸೆಕ್ರೆಟರಿಗಳಿಗೆ ಸಂಬಂಳ ಎಷ್ಟು? ಅವರು ಪೂರ್ಣ ಕಾಲ ಕಾರ್ಯಕರ್ತರೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯನ್ನು ನಾನು ಪಡೆದು ಕೊಂಡಿಲ್ಲ.

**ಶ್ರೀ ಬಿ.ಭಾಸ್ಕರ್ ಶೆಟ್ಟಿ:** ಒಂದೊಂದು ಪಂಚಾಯಿತಿಗೆ ಒಬ್ಬೊಬ್ಬ ಸೆಕ್ರೆಟರಿ ಇದ್ದಾರೆ ಎಂದು ಹೇಳಿದ್ದಿರಿ. ಪಂಚಾಯಿತಿಗಳಿಗೆ ಒಬ್ಬ ಸೆಕ್ರೆಟರಿ ಇದ್ದ ವಿಷಯವನ್ನು ತಂದರೆ ಏನು ಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಬಂದಿರುವ ಇನ್‌ಫರ್‌ಮೇಷನ್ ಪ್ರಕಾರ ೧೨ ಪಂಚಾಯಿತಿಗಳಿಗೆ ಮಾತ್ರ ವೇಕನ್ಸಿಗಳಿವೆ. ಈಗ ಪುನಃ ಎರಡಕ್ಕೆ ಅಪಾಯಿಂಟ್ ಮಾಡಿದೆ ಎಂದು ರಿಪೋರ್ಟ್ ಬಂದಿದೆ.

**ಶ್ರೀ ಎ.ಕೃಷ್ಣ ಶೆಟ್ಟಿ:** ಎಷ್ಟು ಪಂಚಾಯಿತಿಗಳಿಗೆ ಗ್ರಾಮ ಸೇವಕರು ಸೆಕ್ರೆಟರಿಗಳಾಗಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು. ಆ ಮಾಹಿತಿಯು ನನ್ನ ಹತ್ತಿರವಿಲ್ಲ.

**ಶ್ರೀ ವಿ.ಎಂ.ದೇವ್** – ಈ ಪಂಚಾಯಿತಿ ಸೆಕ್ರೆಟರಿಗಳಿಗೆ ಎಷ್ಟು ಸಂಬಳ ಕೊಡುತ್ತಾ ಇದ್ದೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ವೇತನಕ್ಕೆ ಸಂಬಂಧಿಸಿದಂತೆ ಆ ಮಾಹಿತಿಯು ಸದ್ಯಕ್ಕೆ ನನ್ನ ಹತ್ತಿರವಿಲ್ಲ. ಮಾನ್ಯ ಸದಸ್ಯರು ಆ ಮಾಹಿತಿಯನ್ನು ಬೇಕು ಎಂದು ಕೇಳಿದರೆ ನಾನು ಅದನ್ನು ಪಡೆದುಕೊಳ್ಳುತ್ತೇನೆ.

**ಶ್ರೀ ಬಿ.ಚನ್ನ ಬೈರೇಗೌಡ** – ಈಗ ೧೨ ಪಂಚಾಯಿತಿಗಳಲ್ಲಿ ಸೆಕ್ರೆಟರಿಗಳನ್ನು ನೇಮಿಸಿದ ಮೇಲೆ ಮೊದಲು ಕೆಲಸ ಮಾಡುತ್ತಾ ಇದ್ದ ಪಟೇಲ್ ಶ್ಯಾನುಭೋಗರನ್ನು ಕೆಲಸದಿಂದ ತೆಗೆದು ಹಾಕಿದ್ದಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಜಾಹೀರಾತಿಗೆ ಪ್ರತಿಕ್ರಿಯೆಯಾಗಿ ಅವರು ಅರ್ಜಿ ಹಾಕಿದ್ದಾರೆ ಮತ್ತು ಅವರೆಲ್ಲರೂ ನೇಮಕಗೊಂಡಿದ್ದಾರೆ ಅವರು ಶಾನುಭೋಗರು ಸಹ ಆಗಿದ್ದಾರೆ ಅವರು ಸರಿಯಾಗಿ ಕೆಲಸವನ್ನು ನಿರ್ವಹಿಸುವುದಿಲ್ಲ ಎಂದು ಸರ್ಕಾರಕ್ಕೆ ಅನಿಸುತ್ತಿದೆ. ಆದ್ದರಿಂದ ನಾವು ಹೊಸ ವ್ಯಕ್ತಿಗಳನ್ನು ನೇಮಕ ಮಾಡಿಕೊಳ್ಳಲು ಯೋಚಿಸುತ್ತಿದ್ದೇವೆ.

**ಶ್ರೀ ಎಸ್. ಸುಬ್ಬಯ್ಯನಾಯಕ್** – ಈ ೧೨ ಪಂಚಾಯಿತಿಗಳಲ್ಲಿ ಸೆಕ್ರೆಟರಿಗಳು ಇಲ್ಲ ಎಂದು ಹೇಳಿದ್ದೀರಿ. ಹಾಗಾದರೆ ಅಲ್ಲಿ ಪಂಚಾಯ್ತಿ ಕೆಲಸ ಯಾರ ಮೂಲಕ ನಡೆಯುತ್ತಾ ಇದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಸದ್ಯಕ್ಕೆ ಅಲ್ಲಿ ಚೇರಮನ್‌ಗಳು ಇದ್ದಾರೆ ಅವರೇ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದಾರೆ.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ** – ದೇಶದಲ್ಲಿ ಗ್ರಾಮಾಧಿಕಾರಿಗಳ ಬಿಲ್ ಜಾರಿಗೆ ಬಂದು ಇದುವರೆಗೂ ಸೆಕ್ರೆಟರಿಗಳನ್ನು ನೇಮಕ ಮಾಡದೇ ಇರುವುದೇ ಇಂಥಾ ಪ್ರಶ್ನೆಗಳಿಗೆ ಅವಕಾಶ ಕೊಡುತ್ತಾ ಇರುವುದರಿಂದ ಜನಗಳಿಗೆ ಬಹಳ ತೊಂದರೆಯಾಗಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇನ್ನು ಕೆಲವು ಪಂಚಾಯ್ತಿಗಳಲ್ಲಿ ಜಾಹೀರಾತಿಗೆ ಪ್ರತಿಕ್ರಿಯೆಯಾಗಿ ನಮಗೆ ವ್ಯಕ್ತಿಗಳ ಸೇವೆಗಳು ದೊರಕಲಿಲ್ಲ. ವಿದ್ಯಾರ್ಹತೆ ಮತ್ತು ವಯೋಮಿತಿಯನ್ನು ಸಡಿಲಗೊಳಿಸಲು ಸರ್ಕಾರದ ಮುಂದೆ ಪ್ರಸ್ತಾವನೆಯಿದೆ. ಅದನ್ನು ಮಾಡಿದಲ್ಲಿ, ಅಲ್ಲಿ ಒಳ್ಳೆಯ ಪ್ರತಿಕ್ರಿಯೆಯು ಬರುತ್ತದೆ.

**ಶ್ರೀ ಕೆ.ವಿ.ಬೈರೇಗೌಡ** – ಸೆಕ್ರೆಟರಿ ಇಲ್ಲದೇ ಹೋದರೆ ದಿನವಹಿ ಕೆಲಸ ಕಾರ್ಯ ನಡೆಯುವುದಕ್ಕೆ ತೊಂದರೆಯಾಗುತ್ತದೆಯಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಲ್ಲಿ ತೊಂದರೆಯಿದೆ, ಸರಿ' ಕಾರ್ಯದರ್ಶಿ ಮತ್ತು ಚೇರಮನ್‌ರವರ ಸಹಿಯಾದ ಮೇಲೆ ಚೆಕ್‌ಗಳನ್ನು ಕೊಡುತ್ತಾರೆ. ಅಲ್ಲಿ ಸ್ವಲ್ಪ ತೊಂದರೆಯಿದೆ.

# ತುಂಗಾ ನದಿಗೆ ಸೇತುವೆ ನಿರ್ಮಾಣ

ಶ್ರೀಮತಿ ರತ್ನಮ್ಮ ಮಾಧವರಾವ್ (ಶಿವಮೊಗ್ಗ)

ಅ. ಶಿವಮೊಗ್ಗ ತುಂಗಾನದಿಗೆ ಅಡ್ಡವಾಗಿ ಇರುವ ಹಳೆಯ ಸೇತುವೆಯು ಶಿಥಿಲಗೊಂಡಿದ್ದು, ಸಂಚಾರಕ್ಕೆ ಸುರಕ್ಷಿತವಾಗಿಲ್ಲ ಎಂಬುದು ಅವರ ಗಮನಕ್ಕೆ ಬಂದಿದೆಯೇ.

ಆ. ಹೊಸ ಬ್ರಿಡ್ಜ್‌ನ್ನು ಕಟ್ಟುವುದರಿಂದ ತಕ್ಷಣದಲ್ಲಿ ಅಲ್ಲಿ ಸಂಚಾರದಲ್ಲಿ ವ್ಯತ್ಯಯ/ತೊಂದರೆಯಾಗುವುದೆಂದು ಸಾರ್ವಜನಿಕರಿಂದ ಮತ್ತು ಸ್ಥಳೀಯ ಸಂಸ್ಥೆಗಳಿಂದ ಮನವಿಗಳನ್ನು ಸ್ವೀಕರಿಸಿದ್ದೀರಾ?

ಇ. ಶಿವಮೊಗ್ಗದ ಹತ್ತಿರ ಹೊಸ ಸೇತುವೆಯನ್ನು ಕಟ್ಟಿದ್ದು ಅವರು ತೆಗೆದು ಕೊಂಡಿರುವ ಕ್ರಮ?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪ–ಮಂತ್ರಿ) (ಪಬ್ಲಿಕ್ ವರ್ಕ್ಸ್ ಮಂತ್ರಿ ಶ್ರೀ ವಿರೇಂದ್ರ ಪಾಟೀಲ ಅವರ ಪರವಾಗಿ):**

ಅ. ಇಲ್ಲ.

ಆ. ಹೌದು

ಇ. ಹೊಸ ಸೇತುವೆಯನ್ನು ಕಟ್ಟಲು ಪ್ರಾಥಮಿಕ ಇನ್‌ವೆಸ್ಟಿಗೇಷನ್ ಮಾಡಿದ್ದೇವೆ ಹಾಗೂ ಫಂಡ್ಸ್ ದೊರಕುವ ಅನುಸಾರ ಮತ್ತೆ ಪ್ರಾಶಸ್ತ್ಯತೆಯ ಮೇಲೆ ಕೆಲಸವನ್ನು ಪರಿಗಣಿಸಲಾಗುವುದು.

**ಶ್ರೀಮತಿ ರತ್ನಮ್ಮ ಮಾಧವರಾವ್** – ಈ ಸೇತುವೆ ಯಾವಾಗ ಕಟ್ಟಿದ್ದು?

**ಶ್ರೀ ಕೊಂಡಜ್ಜಿ ಬಸಪ್ಪ** – ಸುಮಾರು ೧೦೦ ವರ್ಷ ಆಗಿದೆ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಮನವಿ ಬಂದಿದೆ ಎಂದ ಮೇಲೆ ಏನು ಕ್ರಮ ತೆಗೆದುಕೊಂಡಿದ್ದೀರಿ? ಇನ್‌ವೆಸ್ಟಿಗೇಷನ್ ಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಈಗ ಸದ್ಯದಲ್ಲಿ ಅದು ಅಂತಹ ಅಪಾಯಕರವಾದ ಬ್ರಿಡ್ಜ್ ಅಲ್ಲ ಎಂದು ರಿಪೋರ್ಟ್ ಮಾಡಿದ್ದಾರೆ. ಆದಾಗ್ಯೂ ಕೂಡ ಪ್ರಿಲಿಮಿನರಿ ಇನ್‌ವೆಸ್ಟಿಗೇಷನ್ ಮಾಡಿದ್ದಾರೆ. ಮೂರು ಸೈಟ್ಸ್ ನ್ನು ಪ್ರಪೋಸ್ ಮಾಡಿದ್ದಾರೆ, ಅದರ ಮೇಲ್ಗಡೆ ಭಾಗದಲ್ಲಿ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಎಸ್ಟಿಮೇಟ್ ತಯಾರಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಒಂದು ಪಕ್ಕಾ ಬ್ರಿಡ್ಜ್ ಆಗಬೇಕಾದರೆ ೧೫ ರಿಂದ ೨೦ ಲಕ್ಷ ರೂಪಾಯಿಗಳಾಗಬಹುದು ಎಂದು ಅಂದಾಜಾಗಿದೆ.

ಶ್ರೀ ಡಿ. ಪರಮೇಶ್ವರಪ್ಪ: ಶಿವಮೊಗ್ಗದ ಬಳಿ ಸೇತುವೆಯನ್ನು ಕಟ್ಟಿಸಲು 1957ನೇ ವರ್ಷದಲ್ಲಿ ಅಂದಾಜನ್ನು ತಯಾರಿಸಿದ್ದು ವಾಸ್ತವವಲ್ಲವೇ?

ಶ್ರೀ ಕೊಂಡಜ್ಜಿ ಬಸಪ್ಪ: ಇದು ಸರಿಯಿಲ್ಲ ಸರ್, ಪ್ರಾಥಮಿಕ ಇನ್‌ವೆಸ್ಟಿಗೇಷನ್ ಮಾತ್ರವೇ ಮಾಡಿರುವುದು.

**ಶ್ರೀಮತಿ ರತ್ನಮ್ಮ ಮಾಧವರಾವ್** – ಭದ್ರಾವತಿ, ಶಿವಮೊಗ್ಗ ರಸ್ತೆ ಈ ಸೇತುವೆ ಮೇಲೆ ಇದೆ. ಅದು ನ್ಯಾಷನಲ್ ಹೈವೇ ರಸ್ತೆ ಆಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಇಲ್ಲ, ಇನ್ನೂ ಅದು ಸ್ಟೇಟ್ ಫಂಡ್ ರಸ್ತೆಯೇ ಆಗಿದೆ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಅದು ಬಹಳ ಮುಖ್ಯವಾದ ರಸ್ತೆ ನ್ಯಾಷನಲ್ ಹೈವೇ ಮಾಡುವುದರಿಂದ ಆರ್ಥಿಕ ಅನುಕೂಲ ಸೆಂಟರ್‌ನಿಂದ ದೊರಕುತ್ತದೆಯಲ್ಲವೇ?

ಶ್ರೀ ಕೊಂಡಜ್ಜಿ ಬಸಪ್ಪ: ಮಾನ್ಯ ಸದಸ್ಯರು ಬಹಳ ಪ್ರಯೋಜನದ ಸಲಹೆಯನ್ನು ಮಾಡಿದ್ದಾರೆ. ಸರ್ಕಾರದಿಂದ ಕ್ರಮಕ್ಕೆ ಇದು ಸಲಹೆಯಾಗಿದೆ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಎಸ್ಟಿಮೇಟು, ಪ್ಲಾನ್ ಆಗಿ ಹಣ ದೊರಕುವ ವೇಳೆಗೆ ಅನುಕೂಲವಾಗಲು ಅಡ್ಮಿನಿಸ್ಟ್ರೇಶನ್ ಸ್ಯಾಂಕ್ಷನ್ ಅದರೂ ಕೊಡುತ್ತೀರಾ?

**ಶ್ರೀ ಟಿ.ಡಿ.ದೇವೆಂದ್ರಪ್ಪ** – ಈಗಿನ ಇಂಜಿನಿಯರು ಇನ್ನೂ ಭದ್ರವಾಗಿದೆ ಪರವಾಗಿಲ್ಲ ಎಂದು ರಿಪೋರ್ಟ್ ಮಾಡಿದ್ದಾರೆಂದು ಉತ್ತರ ಕೊಟ್ಟಿರಿ. ೧೦೦ ವರ್ಷದ ಹಿಂದೆ ಕಟ್ಟಿದ ಆ ಇಂಜಿನಿಯರು ಎಷ್ಟು ವರ್ಷದಲ್ಲಿ ಪುನಃ ಈ ಬ್ರಿಡ್ಜ್ ಕಟ್ಟಬೇಕು ಅಥವಾ ಇದಕ್ಕೆ ಎಷ್ಟು ವಯಸ್ಸಿದೆ ಎಂದು ರಿಪೋರ್ಟ್ ಇಟ್ಟು ಹೋಗಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಯಾವಾಗಲೂ ನಾವು ಸಾಮಾನ್ಯವಾಗಿ ಟೆಕ್ನಿಕಲ್ ಒಪಿನಿಯನ್ ಮೇಲೆ ಹೋಗುತ್ತೇವೆ. ಚೀಫ್ ಇಂಜಿನಿಯರು ರಿಪೋರ್ಟ್ ಮಾಡಿದ್ದಾರೆ. ೧೦೦ ವರ್ಷ ಆದರೂ ಕೂಡ ಭದ್ರವಾಗಿದೆ ಟ್ರಾಫಿಕ್ ನಡೆಸಬಹುದು ಎಂದು ಹೇಳಿದ್ದಾರೆ.

**ಶ್ರೀ ಟಿ.ಡಿ.ದೇವೆಂದ್ರಪ್ಪ** – ನನ್ನ ಪ್ರಶ್ನೆ ಇದನ್ನು ಕಟ್ಟಿದ ಇಂಜಿನಿಯರು ಎಷ್ಟು ವರ್ಷ ವಯಸ್ಸು ಎಂದು ನಿರ್ಧರಿಸಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ** – ವಯಸ್ಸು ಮುಖ್ಯವಲ್ಲ. ಅದರಲ್ಲಿ ಟೆಕ್ನಿಕಲ್ ಒಪಿನಿಯನ್ ಬರೆದಿರುತ್ತಾರೆ; ಅದು ಮುಖ್ಯ.

# ಕೆ.ಆರ್.ಎಸ್. ನಲ್ಲಿ ಸಂಶೋಧನಾ ಕೇಂದ್ರ

**25ನೇ ಸೆಪ್ಟೆಂಬರ್ 1962**

**ಶ್ರೀ ಜಿ.ವಿ.ಗೌಡ (ಪಾಳ್ಯ):**

ಅ. ರಿಸರ್ಚ್ ಸ್ಟೇಷನ್‌ನನ್ನು ಕೃಷ್ಣರಾಜ ಸಾಗರದಲ್ಲಿ ವಿಸ್ತರಿಸುವ, ಇದನ್ನು ಅಪ್‌ಗ್ರೇಡ್ ಮಾಡುವ, ಮತ್ತು ಸಾಕಷ್ಟು ಸಂಖ್ಯೆಯಲ್ಲಿ ಸಿಬ್ಬಂದಿಯನ್ನು ನೀಡಲು ಯಾವುದಾದರೂ ಪ್ರಸ್ತಾವನೆಗಳು ಅವರ ಮುಂದೆ ಇದ್ದವೆ?

ಆ. ಹೌದು ಎಂದಲ್ಲಿ, ಇದರ ಪರವಾಗಿ ಅವರು ತೆಗೆದುಕೊಂಡಿರುವ ಕ್ರಮ?

**ಶ್ರೀ ಕೊಂಡಜ್ಜಿ ಬಸಪ್ಪ:** (ಸಹಕಾರ ಶಾಖೆಯ ಉಪಮಂತ್ರಿ) (ಪಬ್ಲಿಕ್ ವರ್ಕ್ಸ್ ಮಂತ್ರಿ ಶ್ರೀ ವಿ.ಎಸ್. ವಿರೇಂದ್ರ ಪಾಟೀಲ ಅವರ ಪರವಾಗಿ)

ಅ. ಹೌದು

ಆ. ಸರ್ಕಾರದ ಕ್ರಿಯಾಶೀಲ ಪರಿಗಣನೆಯಲ್ಲಿ ಪ್ರಸ್ತಾವನೆಗಳು ಇವೆ.

**ಶ್ರೀ ಜಿ.ವಿ. ಗೌಡ :** ಸ್ಟೇಷನ್ ಆಪ್ ಗ್ರೇಡ್ ಮಾಡುವ ಪ್ರಸ್ತಾಪವು ಯಾವ ಅವಧಿಯಿಂದ ಸರ್ಕಾರದ ಜೊತೆಯಲ್ಲಿ ಇತ್ಯರ್ಥವಾಗದೇ ಇರುವುದು?

**ಶ್ರೀ ಕೊಂಡಜ್ಜಿ ಬಸಪ್ಪ:** 1961 ರಿಂದ

**ಶ್ರೀ ಜಿ.ವಿ.ಗೌಡ:** ಸಂಪನ್ಮೂಲ ಮತ್ತು ಆರ್ಥಿಕ ಸಮಿತಿಯು ಈ ಸ್ಟೇಷನ್‌ನ್ನು ಆಪ್ ಗ್ರೇಡ್ ಮಾಡಲೇಬೇಕು ಎನ್ನುವ ಶಿಫಾರಸ್ಸನ್ನು ಜೋರಾಗಿ ಎತ್ತಿಹಾಕಿದ್ದು ವಾಸ್ತವವಲ್ಲವೇ.

**ಶ್ರೀ ಕೊಂಡಜ್ಜಿ ಬಸಪ್ಪ:** ನಾವು ಸ್ಟ್ಯಾಡಿಂಗ್ ಕಮಿಟಿಯವರು ಮಾಡಿದ ಪ್ರಸ್ತಾವನೆಯನ್ನು ಸಹ ಒಪ್ಪಿಕೊಂಡಿದ್ದೇವೆ?

**ಶ್ರೀ ಕೆ.ಎಸ್.ಸೂರ್ಯನಾರಾಯಣ ರಾವ್:** ವಿಸ್ತರಣೆಗೆ ಇರುವ ಪ್ರಸ್ತಾವನೆಗಳು ಯಾವವು?

**ಶ್ರೀ ಕೊಂಡಜ್ಜಿ ಬಸಪ್ಪ:** ಮೆಮೊರಂಡಮ್‌ನಲ್ಲಿ ಅವರು ಪ್ರಸ್ತಾಪಿಸಿರುವುದು ಏನೆಂದರೆ, ಅಲ್ಲಿ ಡೈರಕ್ಟರ್ (ನಿರ್ದೇಶಕರು) ಸಂಶೋಧನಾ ಅಧಿಕಾರಿಗಳು (ಇಬ್ಬರೂ) 8 ಸಹಾಯಕ ಸಂಶೋಧನಾಧಿಕಾರಿಗಳು, 32 ಕಿರಿಯ ಇಂಜಿನಿಯರ್ ಅಧಿಕಾರಿಗಳು

ಕೆಮಿಕಲ್ ಎಕ್ಸಾಮಿನರ್ ಒಬ್ಬರು ಮ್ಯಾಥ್‌ಮ್ಯಾಟಿಕಲ್ ಸಂಖ್ಯಾಶಾಸ್ತ್ರಜ್ಞರು ಒಬ್ಬರು 4 ಸಂಶೋಧನಾ ಸಹಾಯಕರು ಹಾಗೂ ಕ್ಲಾಸ್ 3 ಮತ್ತು 4 ಆಫೀಸರ್ಸ್ ಇರಬೇಕು. ಸಂಶೋಧನೆ ನಡೆಯಬೇಕಾಗಿರುವ ಹಲವಾರು ಶಾಖೆಗಳನ್ನು ಸಹ ಅವರು ಪ್ರಸ್ತಾಪಿಸಿದ್ದಾರೆ ಅವುಗಳೆಂದರೆ, ಹೈಡ್ರಾಲಿಕ್ ಬ್ರ್ಯಾಂಚ್/ಶಾಖೆ ಮಾಡೆಲ್ ಪ್ರೋಟೋಟೈಪ್ ಸ್ಟಡೀಸ್, ತಾಂತ್ರಿಕ ಸರ್ವೆ, ನೀರಾವರಿ ಸಂಶೋಧನಾ ಶಾಖೆ, ಮೆಕಾನಿಕಲ್ ಬ್ರ್ಯಾಂಚ್ ಮೆಟೀರಿಯಲ್ಸ್ ಟೆಸ್ಟಿಂಗ್ ಬ್ರ್ಯಾಂಚ್, ರಿಸರ್ಚ್ ಫೀಲ್ಡ್ ಸಿಬ್ಬಂದಿ ಇತ್ಯಾದಿ.

**ಶ್ರೀ ಜಿ. ದುಗ್ಗಪ್ಪ:** ಅಂದಾಜು ವೆಚ್ಚ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ಸಿಬ್ಬಂದಿಗಷ್ಟೆ, ತಿಂಗಳಿಗೆ 40,000ರೂಪಾಯಿಗಳನ್ನು ಅಂದಾಜು ಮಾಡಲಾಗಿದೆ.

**ಶ್ರೀ ಎಸ್. ಶಿವಪ್ಪ:** ಯಾವುದೇ ಸಂಶೋಧನೆ ಇಲ್ಲದೆ ಪಿ.ಡಬ್ಲ್ಯೂಡಿ ಯ ಕೆಲಸಗಳನ್ನು ನಡೆಸುತ್ತಿರುವುದು ವಾಸ್ತವವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಕೃಷ್ಣರಾಜಸಾಗರದಲ್ಲಿ ಸಂಶೋಧನಾ ಸಹಾಯಕರೇ ಸಂಶೋಧನೆಯನ್ನು ನಡೆಸುತ್ತಾರೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ** – ಈ ಯೋಜನೆಗೆ ಎಷ್ಟು ಖರ್ಚಾಗುವುದು? ಇದನ್ನು ಸರ್ಕಾರ ಎಷ್ಟು ದಿವಸಗಳಲ್ಲಿ ಕಾರ್ಯರೂಪಕ್ಕೆ ತರಬೇಕೆಂದು ತೀರ್ಮಾನಕ್ಕೆ ಬಂದಿದೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಈಗ ಸದ್ಯಕ್ಕೆ ಒಬ್ಬ ಡೈರೆಕ್ಟರನ್ನು ನೇಮಿಸಿದ್ದಾರೆ ಈಗ ಎಗ್ಸಿಕ್ಯುಟಿವ್ ಇಂಜಿನಿಯರು ಆ ಛಾರ್ಜಿನಲ್ಲಿದ್ದಾರೆ. ಸೂಪರಿಂಟೆಂಡಿಂಗ್ ಇಂಜಿನಿಯರ್ ಗ್ರೇಡಿನ ಡೈರೆಕ್ಟರ್ ಬೇಕೆಂದು ಈಗ ಗೊತ್ತು ಮಾಡಿದ್ದಾರೆ. ರಾಮಚಂದ್ರರಾಯರ ಸಮಿತಿ ವರದಿಯ ಬಗ್ಗೆ ಸರ್ಕಾರ ತೀರ್ಮಾನ ಕೈಕೊಂಡ ನಂತರ ಮುಂದಿನ ವಿಚಾರ ಆಲೋಚಿಸ ಬೇಕೆಂದಿದ್ದೇವೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ** – ಆ ತೀರ್ಮಾನ ತೆಗೆದುಕೊಂಡು ಎಷ್ಟು ದಿವಸಗಳಲ್ಲಿ ಇಂಪ್ಲಿಮೆಂಟ್ ಮಾಡುತ್ತೀರಿ?

**ಶ್ರೀ ಎಸ್. ಶಿವಪ್ಪ:** ಈ ಸಂಶೋಧನೆಯು ಸರ್ಕಾರದ ನೇರ ಹತೋಟಿಯಲ್ಲಿ ಅಥವಾ ಮೈಸೂರು ವಿಶ್ವವಿದ್ಯಾಲಯದ ಅಡಿಯಲ್ಲಿರುವುದೋ.

**ಶ್ರೀ ಕೊಂಡಜ್ಜಿ ಬಸಪ್ಪ:** ಸದ್ಯಕ್ಕೆ ಇದು ಚೀಫ್ ಇಂಜಿನಿಯರ್ ಅವರ ಕಂಟ್ರೋಲ್‌ನಲ್ಲಿದೆ. ಆದರೆ ಪ್ರಸ್ತಾವನೆಯಲ್ಲಿ ಇದನ್ನು ಸ್ವತಂತ್ರ ಸಂಸ್ಥೆಯಾಗಿ ಸರ್ಕಾರದ ನೇರಹತೋಟಿಯಲ್ಲಿ ಇರುವುದು.

**ಶ್ರೀ ಹೆಚ್.ಆರ್.ಕೇಶವಮೂರ್ತಿ:** ಈ ಸ್ಟೇಷನ್ ನಡೆಸಿದ ಒಂದು/ಎರಡು ಪ್ರಮುಖ ಸಂಶೋಧನೆಗಳನ್ನು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಡಿಸ್ಯೈನ್ಸ್, ಡಿಸ್ಯೈನ್ಸ್ ಬಿಲ್ಡಿಂಗ್ಸ್, ಇರಿಗೇಷನ್ ವರ್ಕ್ಸ್ ಇತ್ಯಾದಿ.

**ಶ್ರೀ ಜಿ.ವಿ.ಗೌಡ:** ಸ್ಟೇಷನ್ ಆಪ್ ಗ್ರೇಡ್ ಅವಶ್ಯಕತೆಯ ಬಗ್ಗೆ ಸರ್ಕಾರಕ್ಕೆ ಮನವರಿಕೆಯಾಗಿದೆಯೇ ಹಾಗೂ ಮದ್ರಾಸಿನಲ್ಲಿರುವಂತೆ ಇದನ್ನು ಸ್ವತಂತ್ರ ಸ್ಟೇಷನ್ ಮಾಡುತ್ತೀರ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರು ಸ್ವತಂತ್ರ ಸಂಸ್ಥೆ ಮಾಡುವುದಕ್ಕೆ ಅವರಿಗೆ ಆಸಕ್ತಿ ಇದೆ, ಆದರೆ ಅವರು ಅದರ ಬಗ್ಗೆ ಇನ್ನು ತೀರ್ಮಾನ ತೆಗೆದುಕೊಂಡಿಲ್ಲ. ಅದರ ಭಾಗವಾಗಿ ಸ್ಟೇಷನ್ ಆಪ್ ಗ್ರೇಡ್ ಮಾಡುವ ಒಂದು ಹೆಜ್ಜೆ ಇಟ್ಟಿದ್ದಾರೆ. ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರನ್ನು ಸೂಪರಿಂಟೆಂಡಿಂಗ್ ಇಂಜಿನಿಯರಿಗೆ ಅಫ್ ಗ್ರೇಡ್ ಮಾಡಲಾಗಿದೆ ಹಾಗೂ ಡೈರಕ್ಟರ್‌ನ್ನು ಮಾಡಲಾಗಿದೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಈಗ ಒಂದು ಡೈರೆಕ್ಟೆರೇಟ್ ಕ್ರಿಯೇಟ್ ಮಾಡುವುದಾಗಿ ಹೇಳಿದರು. ಅದನ್ನು ಮದ್ರಾಸಿನಲ್ಲಿ ಯಾವ ರೀತಿ ನೀತಿ ಅನುಸರಿಸಿದ್ದಾರೆ ಅದರ ಆಧಾರದ ಮೇಲೆ ಕೊಟ್ಟಾರೋ ಅಥವಾ ಮೈಸೂರು ಸರ್ಕಾರದವರೇ ಸ್ವತಃ ತಮ್ಮದ್ದೇ ಒಂದು ರೀತಿಯಲ್ಲಿ ಮಾಡುತ್ತಾರೋ?

**ಶ್ರೀ ಕೊಂಡಜ್ಜಿ ಬಸಪ್ಪ –** ಮೈಸೂರು ಸರ್ಕಾರದ ಕೆಲವು ನಿವೃತ್ತರಾದ ಚೀಫ್ ಇಂಜಿನಿಯರುಗಳು ಮತ್ತು ಅಧಿಕಾರದಲ್ಲಿರುವ ಕೆಲವು ಚೀಫ್ ಇಂಜಿನಿಯರುಗಳು ಇವರಲ್ಲಿ ೫ ಜನರ ಒಂದು ಸಮಿತಿಯನ್ನು ರಚಿಸಿದೆ. ಆ ಸಮಿತಿಯು ಮದ್ರಾಸ್ ಪ್ಯಾಟ್ರನ್ ಮತ್ತು ಇತರ ಕಡೆಗಳಲ್ಲಿರುವ ಸಂಶೋಧನಾ ಕೇಂದ್ರಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಒಂದು ಮೆಮೊರ್‍ಯಾಂಡಂ ಸಲ್ಲಿಸಿದೆ. ಅದನ್ನು ಸರ್ಕಾರ ವಿಚಾರ ಮಾಡುತ್ತಿದೆ.

# ಆಟೋಮ್ಯಾಟಿಕ್ ಟೆಲಿಫೋನ್ ಕೇಂದ್ರ

**26ನೇ ಸೆಪ್ಟೆಂಬರ್ 1962**

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ (ಗುಂಡ್ಲುಪೇಟೆ)**

ಅ. ಮೈಸೂರು ನಗರದಲ್ಲಿ ಅಟೋಮ್ಯಾಟಿಕ್ ಟೆಲಿಫೋನ್ ಎಕ್ಸ್‌ಚೆಂಜ್ ಇಲ್ಲದಿರುವುದು ವಾಸ್ತವವೇ?

ಆ. ಸಾರ್ವಜನಿಕರಿಗೆ ತೊಂದರೆ ಮತ್ತು ಕಿರುಕುಳ ಆಗುತ್ತಿರುವುದರಿಂದ ಎಕ್ಸ್‌ಚೆಂಜ್ ಬೇಕಾಗಿದೆ ಎಂಬುದು ಅವರಿಗೆ ಗೊತ್ತಿದೆಯೇ/ತಿಳಿದಿದೆಯೇ.

**ಶ್ರೀ ಕೊಂಡಜ್ಜಿ ಬಸಪ್ಪ:** (ಸಹಕಾರ ಶಾಖೆಯ ಉಪಮಂತ್ರಿ) (ಪಬ್ಲಿಕ್ ವರ್ಕ್ಸ್ ಮಂತ್ರಿ ಶ್ರೀ ವಿರೇಂದ್ರ ಪಾಟೀಲರವರ ಪರವಾಗಿ)

ಅ. ಹೌದು ಆ. ಇಲ್ಲ

**ಶ್ರೀಮತಿ ಕೆ.ಎಸ್.ನಾಗರತ್ನಮ್ಮ:** ನನ್ನ (ಎ) ಪ್ರಶ್ನೆಗೆ ನಿಜ ಎಂದೂ, (ಬಿ) ಪ್ರಶ್ನೆಗೆ ಗೊತ್ತಿಲ್ಲವೆಂದೂ ಉತ್ತರ ಕೊಟ್ಟಿದ್ದೀರಿ. ಹಾಗಾದರೆ ಸಾರ್ವಜನಿಕರಿಗೆ ತೊಂದರೆಯಾಗಲಿ ಎಂಬುದು ಅಭಿಪ್ರಾಯವೇ ಅಥವಾ ತೊಂದರೆಯಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ –** ಬಂದಿಲ್ಲವೆಂದೇ ಆ ರೀತಿ ಉತ್ತರ ಕೊಟ್ಟಿದೆ.

**ಶ್ರೀಮತಿ ಕೆ.ಎಸ್.ನಾಗರತ್ನಮ್ಮ –** ಈಗ ಮೈಸೂರಿನಲ್ಲಿ ಆಟೊಮ್ಯಾಟಿಕ್ ಟೆಲಿಫೋನಿನ ವ್ಯವಸ್ಥೆ ಇಲ್ಲದೆ ಇರುವುದರಿಂದ ಕೆಲವು ಸಂದರ್ಭಗಳಲ್ಲಿ ಕಾಗದ ಪತ್ರಗಳ ವ್ಯವಹಾರ ನಿಧಾನವಾಗುವುದರಿಂದ ಪಾರ್ಟಿಗಳಿಗೆ ತುಂಬಾ ತೊಂದರೆಯುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೋ ಇಲ್ಲವೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ಕಾದವರ ಗಮನಕ್ಕೇನೂ ಬಂದಿಲ್ಲ. ಈ ಬಗ್ಗೆ ಸರ್ಕಾರವು ಪೋಸ್ಟ್ ಮಾಸ್ಟರ್, ಜನರಲ್, ಬೆಂಗಳೂರು ಅವರಿಗೆ ಪತ್ರ ಬರೆದಿದೆ. ಅವರು ಇದಕ್ಕೆ ಪ್ರತಿಯಾಗಿ ಡೈರೆಕ್ಟರ್ ಜನರಲ್, ಟೆಲಿಫೋನ್ಸ್ ಡಿಪಾರ್ಟ್‌ಮೆಂಟ್, ನ್ಯೂಡೆಲ್ಲಿ ಅವರಿಗೆ ರೆಫರೆನ್ಸ್ ಮಾಡಲಾಗಿದೆ.

**ಸಭಾಧ್ಯಕ್ಷರು:** ಪ್ರಶ್ನೆಗಳು ಏಕವ್ಯಕ್ತಿಪರ ಅಂಶವನ್ನು ಸರ್ಕಾರದ ಗಮನಕ್ಕೆ ತರುತ್ತಿದೆಯೇ?

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:** ಇದು ನನಗಷ್ಟೆ ಅಲ್ಲ. ಇದು ಹಲವಾರು ವ್ಯಕ್ತಿಗಳಿಗೂ ಸಹ ಅನ್ವಯಿಸುತ್ತದೆ. ಆದಕೋಸ್ಕರ ನಾನು ಸರ್ಕಾರದ ಗಮನಕ್ಕೆ ತಂದಿದ್ದು.

**ಶ್ರೀ ಕೊಂಡಜ್ಜಿ ಬಸಪ್ಪ:** ಪೋಸ್ಟ್ ಆಂಡ್ ಟೆಲಿಗ್ರಾಫ್ ಡಿಪಾರ್ಟ್‌ಮೆಂಟ್ ಕೇಂದ್ರ ಸರ್ಕಾರದ ಆಫೀಸ್ ಆಗಿದೆ. ಇದುವರೆಗೂ ಇದು ಮ್ಯಾನ್ಯುಯಲ್ ಆಗಿದೆ ಹಾಗೂ ಆಟೋಮ್ಯಾಟಿಕ್ ಆಗುತ್ತದೆಯೇ ಎಂದು ನಾವು ರೆಫರೆನ್ಸ್ ಮಾಡಲಾಗಿದೆ. ಅವರು ಉತ್ತರಿಸಿರುವುದು ಏನೆಂದರೆ ಅವರು ಪ್ರಸ್ತಾವನೆಗಳನ್ನು ಡೈರೆಕ್ಟರ್ ಜನರಲ್ ಪೋಸ್ಟ್ ಮತ್ತು ಟೆಲಿಗ್ರಾಫ್, ನ್ಯೂಡೆಲ್ಲಿಯವರಿಗೆ ಕಳುಹಿಸಿಕೊಡಲಾಗಿದೆ ಪ್ರಾಯಶಃ ಅವರ ಒಪ್ಪಿಗೆ ಕಾಯುತ್ತಿದ್ದೇವೆ.

**ಶ್ರೀಮತಿ ಕೆ.ಎಸ್.ನಾಗರತ್ನಮ್ಮ :** ಆಟೊಮ್ಯಾಟಿಕ್ ಟೆಲಿಫೋನ್ ಎಕ್ಸ್ ಚೇಂಜ್ ಅನ್ನು ಮೈಸೂರಿನಲ್ಲಿ ಕಟ್ಟಿಸುವುದಕ್ಕೆ ತೊಂದರೆ ಏನು? ಬೆಂಗಳೂರಿನಲ್ಲಿ ಈಗಾಗಲೇ ಕಟ್ಟಲಾಗಿದೆಯೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ :** ಈಗ ಮೈಸೂರಿನಲ್ಲಿ ಒಂದು ಕಡೆ ಲ್ಯಾಂಡನ್ನು ಇದಕ್ಕೋಸ್ಕರ ತೆಗೆದು ಕೊಂಡಿದ್ದೇವೆ; ಬಿಲ್ಡಿಂಗ್ ಮೆಷನರೀಸಿಗೆ ಈಗಾಗಲೇ ಆರ್ಡರನ್ನು ಪ್ಲೇಸ್ ಮಾಡಿದ್ದೇವೆಂಬುದಾಗಿ ನಮಗೆ ವರ್ತಮಾನ ಬಂತು. ಆದಷ್ಟು ಜಾಗ್ರತೆಯಾಗಿ ಕೊಡುತ್ತೇವೆ.

**ಶ್ರೀ ಜಿ.ವಿ.ಗೌಡ** – ಪ್ರತಿಯೊಂದು ಜಿಲ್ಲೆಯಲ್ಲೂ ಇದು ಅವಶ್ಯವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಜಿ.ವಿ.ಗೌಡ** – ಪ್ರತಿಯೊಂದು ಜಿಲ್ಲೆಯಲ್ಲೂ ಇದು ಅವಶ್ಯವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಬಂದಿದೆ.

**ಶ್ರೀ ಜಿ.ವಿ.ಗೌಡ** – ಆ ರೀತಿ ಗೊತ್ತಿದ್ದರೆ ಮೈಸೂರು ನಗರಕ್ಕೆ ಈ ಆಟೊಮ್ಯಾಟಿಕ್ ಎಕ್ಸ್‌ಚೇಂಜ್ ಅವಶ್ಯಕವಿಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಆ ರೀತಿ ಅವಶ್ಯಕತೆ ಇದೆಯೆಂದು ಸರ್ಕಾರದ ಗಮನಕ್ಕೆ ಬಂದರೆ ಅದಕ್ಕೆ ಗಮನ ಕೊಡುತ್ತೇವೆ.

# ವ್ಯವಸಾಯ ಉತ್ಪನ್ನ ಮಾರುಕಟ್ಟೆ ಸಮಿತಿ

**2ನೇ ಆಗಸ್ಟ್ 1962**

**ಶ್ರೀ ಕೆ.ಪಿ. ಗದಗ:**

ಅ. ಎಕರೆಗೆ ಎರಡು ಸಾವಿರ ರೂಪಾಯಿಗಳಂತೆ ಗದಗ ವ್ಯವಸಾಯ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಗದಗ-ಬೆಟಗೇರಿ ಗ್ರಾಮದಲ್ಲಿ ಪರಿಷ್ಕರಿಸಿದ ಸರ್ವೆನಂಬರುಗಳು 460, 461 & 462 ರ ಭೂಮಿಯನ್ನು ಸುಮಾರು 1942-1943ರಲ್ಲಿ ಸರ್ಕಾರ ಸ್ವಾಧೀನಪಡಿಸಿಕೊಂಡಿದೆಯೇ?

ಆ. ಗದಗ ವ್ಯವಸಾಯ ಉತ್ಪನ್ನ ಮಾರುಕಟ್ಟೆ ಸಮಿತಿಯು ಸ್ವಾಧೀನ ಪಡಿಸಿಕೊಂಡಿರುವ ಕೆಲ ಎಕರೆಗಳನ್ನು ಹುಲಕೋಟಿ ಪ್ರೈಮರಿ ಎಜುಕೇಷನ್ ಸೊಸೈಟಿಗೆ ಎಕರೆಗೆ ಒಂದು ರೂಪಾಯಿಗಳಂತೆ ಮಾರಾಟ ಮಾಡಿರುವುದು ವಾಸ್ತವವೇ?

ಇ. ಹೌದು ಎಂದಲ್ಲಿ, ಗದಗ ವ್ಯವಸಾಯ ಉತ್ಪನ್ನ ಮಾರುಕಟ್ಟೆ ಸಮಿತಿಯು ಮಾರಾಟವನ್ನು ಜಾರಿಗೆ ತರುವುದಕ್ಕಿಂದ ಮುಂಚೆ ಸರ್ಕಾರದ ಅವಶ್ಯ ಮಂಜೂರಾತಿಯನ್ನು ತೆಗೆದುಕೊಂಡಿದೆಯೇ?

**ಶ್ರೀ ರಾಮಕೃಷ್ಣ ಹೆಗಡೆ (ಸಹಕಾರ ಮತ್ತು ಅಭಿವೃದ್ಧಿ ಶಾಖೆಯ ಮಂತ್ರಿ):**

ಅ. ಇಲ್ಲ

ಆ. ಹೌದು

ಇ. ಅವಶ್ಯಕತೆಯಿಲ್ಲ.

**ಶ್ರೀ ಕೆ.ಪಿ.ಗದಗ:** ಗದಗ ಎ.ಪಿ.ಎಮ್.ಸಿ. ಗೆ ಸರ್ಕಾರವು ಯಾವ ವರ್ಷದಲ್ಲಿ ಹಾಗೂ ಯಾವ ಬೆಲೆಗೆ ಸರ್ಕಾರವು ಭೂಮಿಯನ್ನು ಸ್ವಾಧೀನ ಪಡಿಸಿಕೊಂಡಿದೆ ಎಂದು ನಾನು ತಿಳಿದುಕೊಳ್ಳಬಹುದಾ.

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆ-ಉಪಮಂತ್ರಿ)**

ಅ. 1947 ರಲ್ಲಿ, 5 ಎಕರೆ ಒಂದು ಗುಂಟೆಯನ್ನು ಒಟ್ಟು 12,2002.12 ರೂಪಾಯಿಗಳಿಗೆ ಸ್ವಾಧೀನಪಡಿಸಿಕೊಂಡಿದೆ.

ಆ. 1952 ವರ್ಷದಲ್ಲಿ4 ಎಕರೆ 28 ಗಂಟೆಗಳು ಒಟ್ಟು 12,967=57 ರೂಪಾಯಿಗಳಿಗೆ ನಂತರದಲ್ಲಿ ಮತ್ತೆ 5 ಎಕರೆಗಳನ್ನು 11,698, 75 ರೂಪಾಯಿಗಳಿಗೆ ಸ್ವಾಧೀನ ಪಡಿಸಿಕೊಂಡಿದೆ. ಒಟ್ಟು 14 ಎಕರೆ 29 ಗುಂಟೆಗಳನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆ.

ಶ್ರೀ **ಕೆ.ಪಿ.ಗದಗ** : ಪ್ರತಿ ಎಕರೆಗೆ ಬೆಲೆ ಎಷ್ಟು?

ಶ್ರೀ **ಕೊಂಡಜ್ಜಿ ಬಸಪ್ಪ:** ಸರಾಸರಿಯಲ್ಲಿ, ಪ್ರತಿ ಎಕರೆಗೆ ರೂ. 2400/– ರೂಪಾಯಿಗಳು.

ಶ್ರೀ **ಕೆ.ಪಿ. ಗದಗ:** ಯಾವ ವರ್ಷದಲ್ಲಿ ಗದಗ ಎ.ಪಿ.ಎಮ್.ಸಿ. ಯು ಭೂಮಿಯನ್ನು ಹುಲಕೋಟಿ ಪ್ರೈಮರಿ ಎಜುಕೇಷನ್ ಸೊಸೈಟಿಗೆ ಮಾರಾಟಮಾಡಲಾಯಿತು ಹಾಗೂ ಯಾವ ಬೆಲೆಗೆ?

ಶ್ರೀ **ಕೊಂಡಜ್ಜಿ ಬಸಪ್ಪ:** 1960 ನೇ ವರ್ಷದಲ್ಲಿ, ಒಂದು ಎಕರೆ 20 ಗುಂಟೆಗಳನ್ನು ಎಕರೆಗೆ ಒಂದು ಸಾವಿರ ರೂಪಾಯಿಗಳಂತೆ 1961 ನೇ ವರ್ಷದಲ್ಲಿ 4 ಎಕರೆ ಗುಂಟೆಗಳನ್ನು ಎಕರೆಗೆ ಒಂದು ಸಾವಿರ ರೂಪಾಯಿಗಳಂತೆ ಮಾರಾಟಮಾಡಲಾಗಿದೆ.

ಶ್ರೀ **ಸಿ.ಎಸ್. ಹುಲಕೋಟಿ:** ಯಾವ ಉದ್ದೇಶದ ಸಲುವಾಗಿ ಈ ಜಮೀನುಗಳನ್ನು ಅಕ್ವೈರು ಮಾಡಲಾಗಿತ್ತು.

ಶ್ರೀ **ಕೊಂಡಜ್ಜಿ ಬಸಪ್ಪ:** ಮಾರ್ಕೆಟಿಂಗ್ ಸೊಸೈಟಿಯು ಉದ್ದೇಶಕ್ಕಾಗಿ, ಸ್ವಾಧೀನ ಮಾಡಲಾಗಿತ್ತು.

ಶ್ರೀ **ಸಿ.ಎಸ್. ಹುಲಕೋಟಿ:** ಆ ಉದ್ದೇಶ ಬಿಟ್ಟು ಬೇರೆ ಎರಡನೆಯ ಉದ್ದೇಶಕ್ಕಾಗಿ ಉಪಯೋಗ ಮಾಡಿರುವವರ ಮೇಲೆ ಏನು ಕ್ರಮವನ್ನು ತೆಗೆದುಕೊಳ್ಳಲಾಯಿತು?

ಶ್ರೀ **ಕೊಂಡಜ್ಜಿ ಬಸಪ್ಪ:** ಇತ್ತೀಚೆಗೆ, ಈ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರವು ಕೆಲವು ಅರ್ಜಿಗಳನ್ನು ಸ್ವೀಕರಿಸಿದೆ. ಸರ್ಕಾರವು ಕಮಿಟಿಯ ಪ್ರೊಸಿಡಿಂಗ್ಸ್‌ನ ದಾಖಲೆಗಳನ್ನು ತರಿಸಿಕೊಂಡು ನೋಡುವ ಅಧಿಕಾರವಿದೆ ಹಾಗೂ ಸರ್ಕಾರಕ್ಕೆ ಸರಿ ಎನಿಸಿದ ಆದೇಶಗಳನ್ನು ಹೊರಡಿಸುತ್ತದೆ. ಅವರು ತನಿಖೆಯನ್ನು ಪ್ರಾರಂಭಿಸುತ್ತಿದ್ದಾರೆ.

**ಶ್ರೀ ಸಿ.ಎಸ್.ಹುಲ್ಕೋಟಿ:** ಬೇರೆ ಉದ್ದೇಶದಿಂದ ತೆಗೆದುಕೊಂಡಿರುವುವವರ ಮೇಲೆ ಮಾರ್ಕೆಟ್ ಕಮಿಟಿಯವರು ಏನಾದರೂ ಕ್ರಮ ಕೈಗೊಂಡಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಂತರದಲ್ಲಿ, ಸಾಕಷ್ಟು ಭೂಮಿಯ ಸ್ವಾಧೀನದ ಅವಶ್ಯಕತೆ ಇದೆ ಎಂಬುದನ್ನು ಮನಗಂಡು 29 ಎಕರೆಗಳನ್ನು 44,000ರೂಪಾಯಿಗಳಿಗೆ ಸ್ವಾಧೀನ ಮಾಡಿಕೊಳ್ಳಲು ಪ್ರಾಸ್ತಾಪಿಸಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಎ.ಪಿ.ಎಮ್. ಸಿ. ಚೇರ್‌ಮನ್ ಹಾಗೂ ಹುಲಕೋಟಿ ಪ್ರೈಮರಿ ಎಜುಕೇಷನ್ ಸೊಸೈಟಿಯ ಚೇರಮನ್‌ರವರಿಬ್ಬರೂ ಒಬ್ಬರೇ ಎಂಬುದು ಸರ್ಕಾರಕ್ಕೆ ತಿಳಿದಿದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ವ್ಯಕ್ತಿಯಾಗಿ ಒಬ್ಬರೆ ಮತ್ತು ಅವರೇ ಆದರೆ ಕಾರ್ಪೋರೇಟ್ ಸಂಸ್ಥೆಗಳು ಭಿನ್ನವಾಗಿದೆ.

**ಶ್ರೀ ಜಿ.ವಿ.ಗೌಡ –** ಸೊಸೈಟಿಯವರು ಎಕರೆಗೆ ಸಾವಿರ ರೂಪಾಯಿಗಳಂತೆ ಜಮೀನು ಕೊಟ್ಟು ಪಡೆಯಲು ಚೇರ್ಮನ್‌ರವರು ಜನರಲ್ ಬಾಡಿ ಅನುಮತಿಯನ್ನು ತೆಗೆದುಕೊಂಡಿದ್ದಾರೆಯೇ?

**ಶ್ರೀ ಜಿ.ವಿ.ಗೌಡ:** ಮಾರ್ಕೆಟ್ ಸೊಸೈಟಿಯ ಜನರಲ್ ಮಿಟಿಂಗ್‌ನಲ್ಲಿ ರೆಸಲ್ಯೂಷನ್ ಮಾಡಲಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್ ಬೇಕು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಇಷ್ಟು ಬೆಲೆ ಬಾಳತಕ್ಕ ಭೂಮಿಯನ್ನು ಎಕರೆಗೆ 1,400 ರೂಪಾಯಿಗಳಿಗಿಂತ ಕಡಿಮೆ ಮಾರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಕಮಿಟಿಯ ಅಭಿಪ್ರಾಯದ ಮೇರೆಗೆ, ಹಾಸ್ಟೆಲ್‌ಗಾಗಿ ಕಟ್ಟಡವನ್ನು ಬಳಸಿದ್ದು ಗಟ್ಟಿಯಾದ ವಿರೋಧವಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ವಿದ್ಯಾ ಸಂಸ್ಥೆಗೋಸ್ಕರವಾಗಿ ವಿಧ್ಯಾರ್ಥಿಗಳಿಗೆ ಕಟ್ಟಿದ್ದು ಸಹಜ. ಇನ್ನೊಂದು ಸಂಸ್ಥೆಗೆ ಧಕ್ಕೆಯಾದರೆ ಅದಕ್ಕೆ ಧಕ್ಕೆ ಮಾಡಿದಂತಾಗುವುದಿಲ್ಲವೇ? ಇದರಲ್ಲಿ ಯಾರಾದಾದರೂ ಕೈವಾಡವಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಹೇಳಿದಂತೆ, ನಾನು ಪ್ರಶ್ನೆಯನ್ನು ಪರೀಕ್ಷಿಸುತ್ತಿದ್ದೇನೆ.

**ಶ್ರೀ ಎಸ್.ಎಮ್. ಕೃಷ್ಣ:** ಹಾಸ್ಟೆಲ್ ಕಟ್ಟುವುದು ಪೂರ್ತಿಯಾಗಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹೌದು ಇದನ್ನು ಕಟ್ಟಲಾಗಿದೆ.

**ಶ್ರೀ ಸಿ.ಎಸ್. ಹುಲಕೋಟಿ:** ಈಗ ಆ ಜಮೀನನ್ನು ಅಕ್ವೈರು ಮಾಡುವುದು ಒಂದು ಉದ್ದೇಶದ ಸಲುವಾಗಿಯಾದರೆ ಬೇರೆ ಉದ್ದೇಶಕ್ಕೆ ಮತ್ತೆ ಅಕ್ವೈರು ಮಾಡುವುದು ಹೀಗೆ ಅನೇಕ ಸಾರಿ ಅಕ್ವೈರು ಮಾಡುವುದರಿಂದ ಏನಾದರೂ ಪ್ರಯೋಜನವಾಗುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಎಲ್ಲಾ ವಿಷಯಗಳನ್ನು ಸರ್ಕಾರವು ಪರಿಶೀಲಿಸುತ್ತಿದ್ದು, ಈ ವಿಷಯದಲ್ಲಿ ತನಿಖೆಯನ್ನು ನಡೆಸುತ್ತಿದೆ.

**ಶ್ರೀ ಕೆ.ಪಿ.ಗದಗ:** ವಿಷಯವನ್ನು ನೋಡಿದಾಗ ಅದು ಸರ್ಕಾರದ ಅನುಮತಿ ಇಲ್ಲದೆ ಅತಿ ಕಡಿಮೆ ಬೆಲೆಗೆ ಭೂಮಿಯನ್ನು ಮಾಡಲಾಗಿದೆ. ಈ ವಿಷಯವನ್ನು ಸರ್ಕಾರವು ತನಿಖೆ ನಡೆಸುತ್ತದೆಯೇ ಎಂದು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ವಿಷಯಕ್ಕೆ ಸಂಬಂಧಿಸಿದಂತೆ, ಬಾಂಬೆ ಕಾಯ್ದೆಯ ಕಲಂ 7 ತುಂಬಾ ಸ್ಪಷ್ಟವಾಗಿದೆ. ಇದರ ಅನುಸಾರವಾಗಿ, ಕಮಿಟಿಯು ಕಾರ್ಪೋರೇಟ್ ಸಂಸ್ಥೆಯಾಗಿದ್ದು, ಇದಕ್ಕೆ ಭೂಮಿಯನ್ನು ಮಾರಾಟ ಮಾಡಲು. ಕೊಂಡುಕೊಳ್ಳಲು, ಅಥವಾ ಭೋಗ್ಯಕ್ಕೆ ಕೊಡಲು ಅಧಿಕಾರವಿದೆ. ಆದ್ದರಿಂದ ಸರ್ಕಾರದ ಮಂಜೂರಾತಿಗಾಗಿ ಬರುವ ಅವಶ್ಯಕತೆಯಿಲ್ಲ.

**ಶ್ರೀ ಜಿ.ವಿ.ಗೌಡ:** ಸರ್ಕಾರಕ್ಕೆ ಆ ನಿರ್ದಿಷ್ಟ ಭೂಮಿಯನ್ನು (ರೆಸ್ಯೂಮ್) ಮಾಡಿಕೊಳ್ಳಲು ಅಧಿಕಾರವಿದೆ. ಭೂಸ್ವಾಧೀನ ಅಧಿನಿಯಮದಲ್ಲಿ ಇದಕ್ಕೆ ಸಂಬಂಧಪಟ್ಟ (ಪ್ರೊವಿಜನ್) ಇದೆ. ಯಾವ ಉದ್ದೇಶಕ್ಕಾಗಿ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೋ ಆ ಉದ್ದೇಶವು ಈಡೇರದಿದ್ದಲ್ಲಿ ಸರ್ಕಾರವು ಭೂಮಿಯನ್ನು (ರಿಕನ್ವೆ) ಮಾಡಬಹುದು. ಆದ್ದರಿಂದ ಭೂಮಿಯನ್ನು ಸ್ವಾಧೀನಪಡಿಸಿಕೊಂಡ ಉದ್ದೇಶಕ್ಕೆ ಬಳಸದಿದಲ್ಲಿ, ಸರ್ಕಾರವು ಭೂಮಿಯನ್ನು (ರಿಕನ್ವೆ) ಮಾಡುವ ಅಧಿಕಾರವಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಕಾಯ್ದೆಯ ಕಲಂ 28ರಲ್ಲಿ ಸರ್ಕಾರವು ದಾಖಲೆಗಳನ್ನು ತರಿಸಿಕೊಂಡು ಪರಿಶೀಲಿಸಿದಾಗ, ಅದು ತೃಪ್ತಿಯಾದಲ್ಲಿ, ಅವರು ಸ್ವಾಧೀನವನ್ನು ವಾಪಸ್ಸು ತೆಗೆದುಕೊಳ್ಳುವುದಿಲ್ಲ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ :** ಈ ಅಗ್ರಿಕಲ್ಚರಲ್ ಪ್ರೊಡ್ಯೂಸ್ ಮಾರ್ಕೆಟ್ ಸೊಸೈಟಿ ಕಮಿಟಿಯೊಳಗೆ ಸರ್ಕಾರದವರು ಏನಾದರೂ ಹಣವನ್ನು ಹಾಕಿದ್ದಾರೋ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಸರ್ಕಾರದವರು ಈ ಕಮಿಟಿಯೊಳಗೆ ನಾಮಿನೇಷನ್ ಇರಬೇಕಾದರೆ ಯಾವ ತತ್ವವನ್ನು ಇಟ್ಟಿದಾರೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿಯೊಂದು ಮಾರ್ಕೆಟಿಂಗ್ ಸೊಸೈಟಿಯಲ್ಲಿ ನಾಮ ನಿರ್ದೇಶಿತರಾಗಿ (ನಾಮಿನಲ್) ಮೂರುಜನ ಇರುತ್ತಾರೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಸರ್ಕಾರದ ಪರವಾಗಿ ಈ ಕಮಿಟಿಯೊಳಗೆ ನಾಮಿನೇಷನ್ ಇರಬೇಕಾದರೆ ಯಾವ ತತ್ವವನ್ನು ಅನುಸರಿಸುತ್ತೀರಿ?

**ಸಭಾಧ್ಯಕ್ಷರು:** ಭೂ ಸ್ವಾಧೀನದಿಂದ, ನಾಮಿನೇಷನ್ ತತ್ವಗಳಿಗೆ ಬರುತ್ತವೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ನಿರ್ದೇಶಕರು, ಏನು ಮಾಡುತ್ತಾರೆ ಎಂದು ನಾನು ತಿಳಿದುಕೊಳ್ಳಬೇಕು?

**ಸಭಾಧ್ಯಕ್ಷರು:** ಕಲಂ 28ರ ಅಡಿಯಲ್ಲಿ ಸರ್ಕಾರದ ಮಂಜೂರಾತಿ ಅವಶ್ಯಕತೆ ಇಲ್ಲ.

**ಶ್ರೀ ಜಿ.ವಿ.ಗೌಡ:** ರೆಸಲ್ಯೂಷನ್‌ಗೆ ನಾಮ ನಿರ್ದೇಶಿತರಾದವರು (ನಾಮಿನಿಸ್) ತನ್ನ ಒಪ್ಪಿಗೆಯನ್ನು ನೀಡಿದ್ದಾರೆಯೇ ಎಂದು ನಾನು ತಿಳಿದು ಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಆ ಪ್ರಶ್ನೆಯನ್ನು ಪರೀಕ್ಷಿಸುತ್ತಿದ್ದೇನೆ/ ಪರಿಶೀಲಿಸುತ್ತಿದ್ದೇನೆ.

# ವ್ಯವಸಾಯ ಸೇವಾ ಸಹಕಾರ ಸಂಘಗಳು

7ನೇ ಸೆಪ್ಟೆಂಬರ್ 1962

ಶ್ರೀ ಸಿದ್ದಯ್ಯ (ಬನ್ನೂರು)

ಅ. ಟಿ. ನರಸೀಪುರ ತಾಲ್ಲೂಕಿನಲ್ಲಿ ಕಾರ್ಯಾಚರಣೆಯಲ್ಲಿರುವ ಸೇವಾ ಸಹಕಾರ ಸಂಘಗಳು ಸಂಖ್ಯೆ.

ಆ. ಈ ಸಂಘಗಳ ಮುಖಾಂತರ ಜನರಿಗೆ ಲೋನ್ ಕೊಟ್ಟಿರುವ ಒಟ್ಟು ಹಣ.

ಇ. ಜನರಿಂದ ಬರಬೇಕಾಗಿರುವ ಹಣ ಹಾಗೂ ಸಂಘಗಳಿಗೆ ಬಂದಿರುವ ಹಣ

**ಶ್ರೀ ಎಸ್.ಸಿದ್ದಯ್ಯ:** ೧೯೬೦–೬೧ ನೆಯ ಸಾಲಿನಲ್ಲಿ ಸಾಲದ ರೂಪದಲ್ಲಿ ಕೊಟ್ಟಿರುವುದನ್ನು ತಿಳಿಸಿದ್ದೀರಿ. ೧೯೬೦–೬೧ ಮತ್ತು ೧೯೬೧–೬೨ ರಲ್ಲಿ ಇರತಕ್ಕ ಬಾಕಿ ಏನೆಂಬುದನ್ನು ತಿಳಿಸುತ್ತೀರಾ?

**ಶ್ರೀ ಜಿ.ವಿ.ಗೌಡ:** ಬಾಕಿಯಿರುವುದು ಯಾವ ಅವಧಿಗೆ ಸಂಬಂಧಿಸಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** 1960–61 ಮತ್ತು 1961–62 ಸಾಲಿಗೆ/ಅವಧಿಗೆ ಸಂಬಂಧಿಸಿದೆ.

**ಶ್ರೀ ಎಸ್.ಸಿದ್ದಯ್ಯ:** ೧೯೬೦–೬೧ ನೇಯ ಸಾಲಿನಲ್ಲಿ ಇಷ್ಟೊಂದು ಬಾಕಿಯಿರಲು ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಬೋರ್ಡ್ ಆಫ್ ಡೈರಕ್ಟರ್ ಬಾಕಿಯನ್ನು ವಸೂಲು ಮಾಡಲು ಸರಿಯಾದ ಪ್ರಯತ್ನಗಳನ್ನು ಮಾಡಲಿಲ್ಲ.

**ಶ್ರೀ ಎಸ್.ಸಿದ್ದಯ್ಯ:** ನನ್ನ ಮೊದಲನೆಯ ಪ್ರಶ್ನೆಗೆ ಉತ್ತರ ಹೇಳಲಿಲ್ಲ. ೧೯೬೦–೬೧ ರಲ್ಲಿ ಇರ ತಕ್ಕ ಬಾಕಿ ಏನು?

**ಶ್ರೀ ಕೊಂಡಜ್ಜಿ ಬಸಪ್ಪ:** 1960–61 ರಲ್ಲಿ 2,18,000ರೂಪಾಯಿಗಳನ್ನು ಬರಬೇಕಾಗಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಈ 32 ಸೇವಾ ಸಹಕಾರಿಗಳಲ್ಲಿ ಎಷ್ಟು ಸಹಕಾರಿಗಳು ಸೆಂಟ್ರಲ್ ಬ್ಯಾಂಕಿಗೆ ಡಿಫಾಲ್ಟರ್‌ಗಳಾಗಿದ್ದಾರೆ (ಸಂದಾಯ ಮಾಡದಿರುವವರು)

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಈ 32 ರಲ್ಲಿ ಸದಸ್ಯರಿಂದ ಲೋನ್ ಬರಬೇಕಾಗಿರುವ ಸೊಸೈಟಿಗಳೆಷ್ಟು?

**ಸಭಾಧ್ಯಕ್ಷರು:** ಸದನದ ಮೇಜಿನ ಮೇಲೆ ಉಪಮಂತ್ರಿಯವರು ಲಿಸ್ಟ್‌ನ್ನು ಇಡಬಹುದು

**ಶ್ರೀ ಜಿ.ವಿ.ಗೌಡ:** ನೀವಿರುವುದನ್ನು, ಬರಬೇಕಾಗಿರುವುದನ್ನು ಹೇಳಿರುವ ಸೊಸೈಟಿಗಳ ಸಂಖ್ಯೆ.

**ಶ್ರೀ ಕೊಂಡಜ್ಜಿ ಬಸಪ್ಪ:**11 ಸೊಸೈಟಿಗಳು ಹಾಗೂ ಸೇರಿರುವ ಹಣ ರೂ 2,18;000/ – ರೂಪಾಯಿಗಳು.

**ಶ್ರೀ ಬಿ.ಎಲ್.ಗೌಡ** – ಇವರಲ್ಲಿ ಅಲ್ಪಾವಧಿ ಸಾಲವೆಷ್ಟಿದೆ ಮತ್ತು ಮಧ್ಯಮಾವದಿ ಸಾಲವೆಷ್ಟಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೊಟೀಸ್‌ಬೇಕು.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ** – ಇಷ್ಟೊಂದು ಹಣ ಕೊಟ್ಟಿರುವುದು ನಿಂತಿರುವಾಗ, ಸರ್ಕಾರದವರು ಈ ಹಣವನ್ನು ಜನರಿಗೆ ಕೊಟ್ಟಿದ್ದಾರೆಯೇ ಅಥವಾ ಸರ್ಕಾರದವರು ಯಾರಿಗೆ ಕೊಟ್ಟರೋ ಅವರೇ ದುರುಪಯೋಗ ಪಡಿಸಿಕೊಂಡರೋ ಎಂಬುದನ್ನು ನೋಡಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾರಿಗೆ ಲೋನ್‌ನ್ನು ಕೊಡಬೇಕು ಎಂದು ತಿಳಿದುಕೊಂಡು, ಆ ಲೋನ್‌ಗಳನ್ನು, ಲೋನ್ ಗ್ರಾಂಟ್ಸ್ (ಮಂಜೂರು) ಮಾಡುವ ಬೋರ್ಡ್ ಆಫ್ ಡೈರಕ್ಟರ್ ಅವರ ಕರ್ತವ್ಯವಾಗಿದೆ. ಲೋನ್‌ಗಳನ್ನು ಸರಿಯಾದ ಅವಧಿಯಲ್ಲಿ ಅವರು ವಸೂಲಾತಿ ಮಾಡದಿದ್ದಲ್ಲಿ ಕೋ–ಆಪರೇಟಿವ್ ಸೊಸೈಟಿ ಕಾಯ್ದೆ ಕಲಂ 30ರ ಅಡಿಯಲ್ಲಿ ಆ ಸೊಸೈಟಿಗಳನ್ನು ಸೂಪರ್ ಸೀಡ್ ಮಾಡುವ ಕ್ರಮವನ್ನು ಮಾತ್ರವೇ ನಾವು ತೆಗೆದು ಕೊಳ್ಳಬಹುದು.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ** – ಬೋರ್ಡ್ ಆಫ್ ಡೈರಕ್ಟರುಗಳೇನಾದರೂ ಈ ಹಣವನ್ನು ದುರುಪಯೋಗ ಮಾಡಿಕೊಂಡಿದ್ದಾರೆಯೇ ಎಂಬುದನ್ನು ಸರ್ಕಾರದವರು ನೋಡಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಹಣವನ್ನು ವಸೂಲಾತಿ ಮಾಡಲು ಎಲ್ಲಾ ಪ್ರಯತ್ನಗಳನ್ನು ಮಾಡಿದ್ದೇವೆ.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ** – ಈಗ ನಾವು ಸಹಕಾರ ತತ್ವದ ಮೇಲೆಯೇ ಬಾಳಬೇಕು ಎಂದು ಹೇಳುತ್ತಿರುವಾಗ ಇಷ್ಟೊಂದು ಹಣ ಒಂದು ತಾಲ್ಲೂಕಿನಲ್ಲಿಯೇ ನಿಂತರೆ, ಮುಂದೆ ದೇಶದಲ್ಲಿ ಯಾವರೀತಿ ಸಹಕಾರ ತತ್ವವನ್ನು ತರುವುದೆಂಬುದನ್ನ ಯೋಚಿಸಿದ್ದಿರಾ?

**ಶ್ರೀ ಕೊಂಡಜ್ಜಿ ಬಸಪ್ಪ:** 217 ಪ್ರಕರಣಗಳಲ್ಲಿ ವ್ಯಾಜ್ಯವನ್ನು ಹೂಡಲಾಗಿತ್ತು. ಆವಾರ್ಡ್ (ತೀರ್ಮಾನ)ಗಳನ್ನು ಕೊಡಲಾಗಿದೆ ಹಾಗೂ ಅವುಗಳನ್ನು ಕಾರ್ಯಗತಗೊಳಿಸುತ್ತಿದ್ದೇವೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಇದರಿಂದ ಆ ಪ್ರಶ್ನೆಯು ಉದ್ಭವವಾಗುವುದಿಲ್ಲ.

**ಶ್ರೀ ಕೆ.ಪಿ.ರೇವಣ್ಣ ಸಿದ್ದಪ್ಪ** – ತೆಗೆದು ಕೊಂಡಿರುವವರ ಪೈಕಿ ಎಷ್ಟು ಜನರು ನಿಜವಾಗಿಯೂ ಜೀವಂತರಾಗಿದ್ದರೆಂಬದನ್ನೂ ನೋಡಬೇಕಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿಯೂ, ಬೋರ್ಡ್ ಆಫ್ ಡೈರೆಕ್ಟರ್ಸ್ ಅದೆಲ್ಲವನ್ನು ನೋಡಿಕೊಳ್ಳುತ್ತಾರೆ. ಅವರು ಸೆಕ್ಯೂರಿಟಿಯನ್ನು ತೆಗೆದುಕೊಳ್ಳಲೇಬೇಕು.

**ಶ್ರೀ ಕೆ.ಪಿ.ರೇವಣ್ಣ ಸಿದ್ದಪ್ಪ :** ಬೋರ್ಡ್ ಆಫ್ ಡೈರೆಕ್ಟರುಗಳು ಸರಿಯಾಗಿ ಕೆಲಸ ಮಾಡಿಲ್ಲ ವೆಂದು ತಾನೆ ಈ ಪ್ರಶ್ನೆ ಇಲ್ಲಿ ಬಂದಿರುವುದು

**ಶ್ರೀ ಜಿ.ವಿ.ಗೌಡ** – ೨೭೫ ಕೇಸುಗಳನ್ನು ರೆಫೆರ್ ಮಾಡಿದ್ದೀರೆಂದು ಹೇಳಿದಿರಿ. ಇದರ ಪೈಕಿ ಎಷ್ಟು ಜನ ಬೋರ್ಡ್ ಆಫ್ ಡೈರೆಕ್ಟರುಗಳು ಸೇರಿದ್ದಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೊಟೀಸುಬೇಕು.

**ಸಭಾಧ್ಯಕ್ಷರು:** 'ನಿಂತಿರುವುದು' ಎಂದರೆ ಬರಬೇಕಾಗಿರುವುದು ಎಂದರ್ಥವೇ.

**ಶ್ರೀಸಿ,ಜೆ.ಮುಕ್ಕಣ್ಣಪ್ಪ :** ೧೧ ಸೊಸೈಟಿಗಳಿಂದ ೨ ಲಕ್ಷ ಚಿಲ್ಲರೆ ರೂಪಾಯಿಗಳ ಬಾಕಿ ಬರಬೇಕಾಗಿದೆ. ಯಂದು ಹೇಳಿದ್ದಿರಿ. ಮಿಕ್ಕ ಸೊಸೈಟಿಗಳಿಂದ ಎಷ್ಟು ಹಣ ಬರಬೇಕಾಗಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು 1960–61 ಮತ್ತು 1961–62 ವರ್ಷಕ್ಕೆ ಸೇರಿದ್ದು. 1961–62 ನೇ ವರ್ಷದಲ್ಲಿ 13 ಸೊಸೈಟಿಗಳಿಂದ ರೂ 2,43,000/– ಬರಬೇಕಾಗಿದೆ.

**ಶ್ರೀ ಎಸ್.ಸಿದ್ದಪ್ಪ:** ಒಟ್ಟು ಸಾಲವಾಗಿ ಕೊಟ್ಟಿರುವ ಹಣವೆಷ್ಟು, ಎಷ್ಟು ಜನ ಸಾಲ ತೆಗೆದುಕೊಂಡಿರುವವರು, ಎಷ್ಟು ಜನ ಡಿಫಾಲ್ಟರುಗಳು ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟಿಸ್‌ಬೇಕು.

**ಶ್ರೀ ಕೆ.ಪಿ.ರೇವಣ್ಣ ಸಿದ್ದಪ್ಪ:** ಈ ಸಾಲಗಳನ್ನು ಜನರಲ್ ಎಲೆಕ್ಷನ್ನಿಗೆ ಎಷ್ಟು ದಿವಸಗಳ ಮುಂಚೆ ಕೊಟ್ಟಿದೆ?

**ಶ್ರೀ ಕೆ.ಲಕ್ಕಪ್ಪ** – ೨೧೭ ಕೇಸುಗಳ ಪೈಕಿ ಯಾವ್ಯಾವು ಮೂರು ವರ್ಷಗಳಿಂದ ಕೇಸಾಗಿ ಪೆಂಡಿಂಗ್ ಇವೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವುಗಳೆಲ್ಲವೂ ಎಕ್ಸಿಕ್ಯೂಷನ್ ನಲ್ಲಿವೆ.

**ಶ್ರೀ ಕೆ.ಲಕ್ಕಪ್ಪ:** ಈ ಸೊಸೈಟಿಗಳ ಪೈಕಿ ಎಷ್ಟು ಡಿಫಾಲ್ಟ್ ಆಗಿರುವುದರ ದೆಸೆಯಿಂದ ಸೂಪರ್ ಸೀಡ್ ಮಾಡಬೇಕೆಂದು ರಿಜಿಸ್ಟ್ರಾರ್‌ರವರಿಂದ ಶಿಫಾರಸ್ಸು ಮಾಡಲ್ಪಟ್ಟಿವೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರು 2 ಸೂಪರ್ ಸೆಷನ್ ಪ್ರಕರಣಗಳನ್ನು ಶಿಫಾರಸ್ಸು ಮಾಡಿದ್ದಾರೆ. ಅವುಗಳು ಯಾವುವೆಂದರೆ ತಂಬಲ್ ಮತ್ತು ಕೆರಕಂದಡು.

**ಶ್ರೀ ಕೆ.ಲಕ್ಕಪ್ಪ –** ಬಾಕಿ ಇಟ್ಟುಕೊಂಡಿರತಕ್ಕ ಈ ೧೧ ಸೊಸೈಟಿಗಳಿಗೆ ೧೯೬೦–೬೧ ನೆಯ ಸಾಲಿನಲ್ಲಿ ಜಿಲ್ಲಾ ಬ್ಯಾಂಕಿನಿಂದ ಮತ್ತೆ ಹಣ ಕೊಡಲಾಗಿದೆಯೇ? ಕೊಟ್ಟಿದ್ದರೆ ಎಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಕೆ.ಲಕ್ಕಪ್ಪ –** ೪ ಲಕ್ಷದ ೪ ಸಾವಿರ ೮೧೭ ರೂಪಾಯಿ ಬಾಕಿಯಿಟ್ಟುಕೊಂಡು ಡಿಫಾಲ್ಟು ಆಗಿರುವ ಈ ಸೊಸೈಟಿಗಳಿಗೆ ಪುನಃ ಹೇಗೆ ಸಾಲಕೊಟ್ಟರು?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರು ಡಿಫಾಲ್ಟರ್ಸ್ ಎಂದು ನಾನು ಹೇಳುವುದಿಲ್ಲ. ಅವರು ಹಣವನ್ನು ಕೊಟ್ಟಿಲ್ಲವೆಂದಷ್ಟೇ ನಾನು ಹೇಳಿದ್ದು

**ಶ್ರೀ ಸಿ.ಎಸ್.ಹುಲ್ಕೋಟಿ –** ಈಗ ಕೆಲವು ಸೊಸೈಟಿಗಳು ಹಣ ಸರಿಯಾಗಿ ಕೊಟ್ಟಿವೆ, ಕೆಲವು ಕೊಟಿಲ್ಲ: ಈಗ ನೀವು ಎಲ್ಲರಿಗೂ ಸಾಲ ಕೊಡುವುದಿಲ್ಲವೆಂದರೆ ಯಾರು ಹಣ ಸಲೀಸಾಗಿ ಕೊಡುತ್ತಿದ್ದಾರೋ ಅವರಿಗೂ ಹಣ ಸಿಕ್ಕದೆ ತೊಂದರೆಯಾಗುತ್ತದೆ. ಇದರಿಂದ ಹಣ ಕೊಡುವುದಕ್ಕೆ ಇಚ್ಛೆಯಿರುವವರೂ ಕೊಡುವುದಿಲ್ಲ. ಆದ್ದರಿಂದ ಯಾರು ಹಣ ಸಲೀಸಾಗಿ ಕೊಟ್ಟರೋ ಅವರಿಗಾದರೂ ಮತ್ತೆ ಹಣ ಕೊಡುವುದಕ್ಕೆ ಏರ್ಪಾಡು ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದಕ್ಕಾಗಿ ಅಲ್ಲಿ ಮನವಿಗಳು ಇವೆ ಹಾಗೂ ಈ ವಿಷಯದಲ್ಲಿ ಏನು ಮಾಡಬಹುದು ಎಂದು ಪರಿಶೀಲಿಸುತ್ತಿದ್ದೇವೆ.

**ಶ್ರೀ ಜಿ.ಎ.ತಿಮ್ಮಪ್ಪಗೌಡ –** ಈ ಬಾಕಿ ಒಂದೆರಡು ವರ್ಷದ ಬಾಕಿಯೇ ಅಥವಾ ಇನ್ನೂ ಹಿಂದಿನ ಬಾಕಿಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಎರಡು ವರ್ಷದ ಬಾಕಿ.

**ಶ್ರೀ ಜಿ.ಎ.ತಿಮ್ಮಪ್ಪ ಗೌಡ –** ಈ ಬಾಕಿ, ಬೋರ್ಡ್ ಆಫ್ ಡೈರೆಕ್ಟರುಗಳ ತಪ್ಪಿಗಿಂತಲೂ ಸಹಕಾರ ಇಲಾಖೆಯವರು ಯಾರ ಮೇಲೆಯೂ ಕ್ರಮ ತೆಗೆದು ಕೊಳ್ಳದಿರುವುದೇ ಕಾರಣವೆಂಬುದು ಗೊತ್ತಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರಿಯಿಲ್ಲ. ಬೋರ್ಡ್ ಆಫ್ ಡೈರೆಕ್ಟರ್‌ಗಳಿಗೆ ಸಹಕಾರ ಡಿಪಾರ್ಟ್‌ಮೆಂಟ್‌ನವರು (ಡಿಸ್ಪೂಟ್) ವ್ಯಾಜ್ಯಗಳನ್ನು ಫೈಲ್ ಮಾಡಿ ನಿರ್ದೇಶನಗಳನ್ನು ನೀಡಿದ್ದಾರೆ ಹಾಗೂ ಅವರು ಅದನ್ನು ಮಾಡದಿದ್ದಲ್ಲಿ, ಈ ಕಮಿಟಿಗಳನ್ನು ಸೂಪರ್‌ಸೀಡ್ ಮಾಡುವ ಕ್ರಮವನ್ನು ಕೈಗೊಳ್ಳುತ್ತೇವೆ.

**ಶ್ರೀ ಜಿ.ಎ.ತಿಮ್ಮಪ್ಪ ಗೌಡ –** ಡಿಸ್ಪ್ಯೂಟ್‌ಗಳನ್ನು ಸೊಸೈಟಿಗಳವರು ಫೈಲ್ ಮಾಡಿದರೂ ಇಲಾಖೆಯವರು ಸಕಾಲದಲ್ಲಿ ಅದರಂತೆ ತೆಗೆದುಕೊಳ್ಳುವುದು?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರಿಯಿಲ್ಲ. ಅಂಥ ಪ್ರಕರಣಗಳನ್ನು ಸರ್ಕಾರದ ಗಮನಕ್ಕೆ ತಂದಿಲ್ಲ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ :** ಎರಡು ಕೇಸುಗಳಲ್ಲಿ ಸೂಪರ್ ಸೀಡ್ ಮಾಡುವುದಕ್ಕೆ ಶಿಫಾರಸ್ಸು ಮಾಡಿದೆ ಎಂದು ಹೇಳಿದ್ದಿರಿ. ಆ ಸೊಸೈಟಿಗಳಿಂದ ಬರಬೇಕಾದ ಹಣವೆಷ್ಟು? ರಿಜಿಸ್ಟ್ರಾರ್ ಅವರು ಸೂಪರ್ ಸೀಡ್ ಮಾಡುವುದಕ್ಕೆ ಏನೇನು ಕಾರಣಗಳನ್ನು ಕೊಟ್ಟಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಬರಬೇಕಾಗಿರುವುದು ತುಂಬಾ ಜಾಸ್ತಿ ಎನ್ನುವ ಒಂದೇ ಆಧಾರವನ್ನು ಅವರು ಹೇಳಿರುವುದು. ಹಲವಾರು ರಿಮೈಂಡರ್‌ಗಳನ್ನು ಮಾಡಿದ್ದರೂ, ಬೋರ್ಡ್ ಆಫ್ ಡೈರಕ್ಟರ್‌ಗಳು ಯಾವುದೇ ಕ್ರಮಗಳನ್ನು ತೆಗೆದುಕೊಂಡಿಲ್ಲ. ಆದ್ದರಿಂದ ಆ ಬೋರ್ಡ್‌ನ ಸೂಪರ್‌ಸೆಷನ್‌ಗೆ ಶಿಫಾರಸ್ಸು ಮಾಡಿದ್ದಾರೆ.

**ಶ್ರೀ ಜೆ.ದೇವಯ್ಯ :** ಈ ಸೊಸೈಟಿಗಳ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿಸಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿ ವರ್ಷವೂ ಆಡಿಟ್ ನಡೆಸಲಾಗುತ್ತದೆ.

**ಶ್ರೀ ಜೆ.ದೇವಯ್ಯ –** ಆಡಿಟ್ ರಿಪೋರ್ಟಿನಲ್ಲಿ ರೈತರ ಮೇಲೆ ಸಾಲ ಇದೆಯೇ ಅಥವಾ ಬೇರೆಯವರ ಮೇಲೆ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರಶ್ನೆಯು ಸ್ಪಷ್ಟವಾಗಿಲ್ಲ. ನಿರ್ದಿಷ್ಟ ಪ್ರಶ್ನೆಯನ್ನು ಇಟ್ಟಲ್ಲಿ, ನಾನು ಉತ್ತರಿಸುತ್ತೇನೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಈ ಸೂಪರ್ ಸೀಡ್ ಆದ ಎರಡು ಸೊಸೈಟಿಗಳಿಗೆ ಬರಬೇಕಾದಂಥ ಹಣ ಎಷ್ಟೆಂದು ಅಪ್ಪಣೆ ಕೊಡಿಸಲಿಲ್ಲ. ಎಷ್ಟು ಹಣ ಜನರಿಂದ ಬರಬೇಕು?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಬಿ.ಜೆ. ಲಿಂಗೇಗೌಡ:** ಮ್ಯಾನೇಜಿಂಗ್ ಕಮಿಟಿಯು ಸದಸ್ಯರ ಪ್ರತ್ಯುತ್ತರಗಳನ್ನು ಪರೀಕ್ಷಿಸಿದ ನಂತರ, ಕಮಿಟಿಯನ್ನು ತೆಗೆದುಹಾಕುವಂತಹ ಯಾವುದೇ ತೃಪ್ತಿಕರವಾದ ಆಧಾರವಿಲ್ಲವೆಂದು ರಿಜಿಸ್ಟ್ರಾರ್‌ರವರಿಗೆ ತಿಳಿದುಬಂದಿವೆ.

**ಶ್ರೀ ಕೊಂಡಜ್ಜಿ ಬಸಪ್ಪ** (ಸಹಕಾರ ಶಾಖೆಯ ಉಪ ಮಂತ್ರಿಗಳು): ಅವರು ಆ ನೋಟೀಸ್‌ಗೆ ಕೆಲವು ಸಮಜಾಯಿಶಿಗಳನ್ನು ಕೊಟ್ಟಿದ್ದಾರೆ. ನಾವು ಹೊಸದಾಗಿ ಉದ್ಯಮ ಕೈಕೊಂಡೆವು. ತಪ್ಪು ತಿಳಿವಳಿಕೆಯಿಂದ ಈ ರೀತಿ ಮಾಡಿದ್ದೇವೆ ಎಂದು ಉತ್ತರ ಕೊಟ್ಟಿದ್ದಾರೆ.

**ಶ್ರೀ ಬಿ.ಜೆ.ಲಿಂಗೇಗೌಡ:** ನಿಜವಾದ ಉತ್ಪಾದಕರಿಗೆ ಉತ್ಪಾದನಾ ಲೋನ್‌ಗಳನ್ನು ಮಂಜೂರಾತಿ ಮಾಡಿಲ್ಲವೆಂದು ಹೇಳಿದ್ದೀರಿ.

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ನಮ್ಮ ಗಮನಕ್ಕೂ ಬಂದಿದೆ. ಕೆಲವರಿಗೆ 8 ರಿಂದ 9 ಸಾವಿರ ರೂಪಾಯಿಗಳನ್ನು ಮಂಜೂರಾತಿ ಮಾಡಲಾಗಿದೆ.

**ಶ್ರೀ ಬಿ.ಜೆ.ಲಿಂಗೇಗೌಡ** – ಅವರಿಗೆ ಜಮಿನು ಎಷ್ಟಿತ್ತು ಎನ್ನುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರ ಆಸ್ತಿಯ ಬಗ್ಗೆ ಡಿಕ್ಲೆರೇಷನ್ ಕೊಡದ ಹೊರತು, ಲೋನ್ ಮಂಜೂರಾತಿ ಮಾಡುವುದಿಲ್ಲ.

**ಶ್ರೀ ಬಿ.ಜೆ.ಲಿಂಗೇಗೌಡ** – ಒಂದು ಎಕರೆ ಇಪತ್ತೆರಡು ಗುಂಟೆ ಇದೆ. ಮೂರು ಜನ ಅಣ್ಣ ತಮ್ಮಂದಿರು ಇದ್ದಾರೆ. ಇಂತಹವರು ಒಬ್ಬರಿಗೇ ೯.೭೮೪ ರೂಪಾಯಿ ಕೊಟ್ಟಿದ್ದಾರಲ್ಲಾ ಅದು ಸರಿಯೇ ಎಂದು ನಾನು ಪ್ರಶ್ನೆ ಕೇಳುತ್ತಾ ಇರುವುದು.

**ಶ್ರೀ ಕೊಂಡಜ್ಜಿ ಬಸಪ್ಪ:** ವಾಸ್ತವವಾಗಿ ಅವರಲ್ಲಿ ಸಾಕಷ್ಟು ಭೂಮಿ ಇಲ್ಲದಿದ್ದರು ಲೋನ್ ಪಡೆದಿದ್ದಾರೆ. ಇದು ನಿಜ.

**ಶ್ರೀ ಬಿ.ಜೆ. ಲಿಂಗೇಗೌಡ:** ನನ್ನ ನಿರ್ದಿಷ್ಟ ಪ್ರಶ್ನೆಯೇನೆಂದರೆ, ಒಂದು ಎಕರೆ 28 ಗುಂಟೆ ಭೂಮಿಯನ್ನು ಹೊಂದಿರುವ ಒಬ್ಬ ವ್ಯಕ್ತಿ ರೂ 9,784 ರೂಪಾಯಿಗಳ ಲೋನ್ ಪಡೆದಿರುವುದು ನಿಜವೇ.

**ಶ್ರೀ ಕೊಂಡಜ್ಜಿ ಬಸಪ್ಪ:** ವ್ಯಕ್ತಿಯು ಹೆಸರನ್ನು ನೀವು ಹೇಳಿದ್ದೇ ಆದರೆ

**ಸಭಾಧ್ಯಕ್ಷರು:** ಹೆಸರುಗಳನ್ನು ಸೂಚಿಸಿಲ್ಲ. ರೂ 9,784 ರೂಪಾಯಿಗಳ ಲೋನ್ ಪಡೆದಿರುವ ಏಕ ವ್ಯಕ್ತಿಯು ಇದ್ದಾರೆಯೇ ಹಾಗೂ ಯಾರು 1 ಎಕರೆ 28 ಗುಂಟೆ ಭೂಮಿಯನ್ನು ಹೊಂದಿದ್ದಾರೆ. ಮಾಹಿತಿ ಸಿಗುವುದಾದರೆ ನೀಡಬಹುದು.

**ಶ್ರೀ ಕೊಂಡಜ್ಜಿ ಬಸಪ್ಪ:** ಆ ಮಾಹಿತಿಯು ಸಿಗುವುದಿಲ್ಲ.

**ಶ್ರೀ ಬಿ.ಜಿ. ಲಿಂಗೇಗೌಡ:** ನಿಜವಾದ ಉತ್ಪಾದಕರಿಗೆ ಉತ್ಪಾದನಾ ಲೋನ್‌ಗಳನ್ನು ಮಂಜೂರಾತಿ ಮಾಡಿಲ್ಲವೆಂದು ಉತ್ತರದಲ್ಲಿ ಹೇಳಿದ್ದೀರ, ನನಗೆ ಉತ್ತರ ಪಡೆಯಲು ಆಗುತ್ತಿಲ್ಲ.

**ಸಭಾಧ್ಯಕ್ಷರು:** ಈ ಸಮಯದಲ್ಲಿ ಆ ಮಾಹಿತಿಯು ಸಿಗುತ್ತಿಲ್ಲ. ಮಾನ್ಯ ಮಂತ್ರಿಯವರು ಮಾಹಿತಿ ದೊರಕಿದ ಕೂಡಲೇ ನೀಡಬೇಕು.

**ಶ್ರೀ ಕೆ.ವಿ.ಬೈರೇಗೌಡ** – ಈ ಸೊಸೈಟಿಯಲ್ಲಿ ಅಫಿಷಿಯಲ್ ಸೆಕ್ರೆಟರಿ ಇದ್ದು ಅವರು ಸಕಾಲಕ್ಕೆ ಅಲ್ಲಿನ ಲೋಪದೋಷಗಳನ್ನು ಇಲಾಖೆಗೆ ತಿಳಿಸದಿದ್ದುದೇ ಇದಕ್ಕೆಲ್ಲಾ ಕಾರಣವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಸೆಕ್ರೆಟರಿಯವರು ಇತ್ತೀಚೆಗೆ ನೇಮಕಗೊಂಡಿದ್ದು, ಹೊಸವ್ಯಕ್ತಿಯಾಗಿದ್ದಾರೆ. ಅವರು ಒಂದು ವರ್ಷದ ಸೇವೆಯನ್ನು ನೀಡಿಲ್ಲ. ಇದು ಅವರೇ ನೀಡಿರುವಂಥ ವಿವರಣೆ.

**ಶ್ರೀ ಕೆ.ವಿ.ಬೈರೇಗೌಡ** – ಒಂದು ವರ್ಷ ಆಗಲೀ, ಒಂದು ತಿಂಗಳಾಗಲೀ ಅಫೀಷಿಯಲ್ ಸೆಕ್ರೆಟರಿ ಇದ್ದೂ ಇಷ್ಟೆಲ್ಲಾ ಆಗುವುದಕ್ಕೆ ಅವರೇ ಕಾರಣರು ತಾನೇ?

**ಸಭಾಧ್ಯಕ್ಷರು:** ತಪ್ಪು ಮಾಡಿರುವೆನೆಂದು ಅವರು ಒಪ್ಪಿಕೊಂಡಿದ್ದಾರೆ.

**ಶ್ರೀ ಜಿ.ವಿ.ಗೌಡ:** ನಿರ್ದಿಷ್ಟ ಸೊಸೈಟಿಯು ವಿರುದ್ಧ ಆರು (ಚಾರ್ಜ್‌ಸ್) ಆಪಾದನೆಗಳನ್ನು ಕೋ–ಆಪರೇಟಿವ್ ಸೊಸೈಟಿಯು ರಿಜಿಸ್ಟ್ರಾರ್‌ರವರು ತಾವು ಕಂಡು ಹಿಡಿದಿದ್ದರಲ್ಲಿ ನೀಡಿದ್ದಾರೆ. ಅದರಲ್ಲಿ ಶೇಕಡ 50 ಕ್ಕಿಂತ ಹೆಚ್ಚು ಆಪಾದನೆಗಳಿಗೆ ಯಾವುದೇ ಕ್ಷಮೆಯಿಲ್ಲ. ಆದರೆ ಕೋ–ಆಪರೇಟಿವ್ ಸೊಸೈಟಿಯ ರಿಜಿಸ್ಟ್ರಾರ್‌ರವರು ಕಾನೂನಿನಲ್ಲಿ ಇರುವ ಕ್ರಮಗಳನ್ನು ತೆಗೆದುಕೊಳ್ಳದೇ, ಸುಮ್ಮನೆ ಅವರನ್ನು ಎಚ್ಚರಿಸುವುದಕ್ಕೆ ನಾನು ಕಾರಣಗಳನ್ನು ತಿಳಿದು ಕೊಳ್ಳಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಕೆಲವು ತಪ್ಪುಗಳನ್ನು ಮಾಡಿರುವುದಾಗಿ ಅವರೇ ತಮ್ಮ ತಪ್ಪನ್ನು ಒಪ್ಪಿ ಕೊಂಡಿದ್ದಾರೆ. ಅದನ್ನು ಸರಿಪಡಿಸುವುದಾಗಿ ಒಪ್ಪಿ ಕೊಂಡಿದ್ದಾರೆ. ಆದ್ದರಿಂದ ರಿಜಿಸ್ಟ್ರಾರ್‌ರವರು ಎಚ್ಚರಿಕೆ ನೀಡಿದ್ದಾರೆ.

**ಶ್ರೀ ಜಿ.ವಿ.ಗೌಡ:** ಕಾಯ್ದೆಯ ವಿಧಿಗಳಿಗೆ ವಿರುದ್ಧವಾಗಿ ಸದಸ್ಯರಲ್ಲದವರಿಗೆ ಲೋನ್ ನೀಡುವುದು ಮತ್ತು ಕಾಯ್ದೆಯಲ್ಲಿ ತಿಳಿಸದಿರುವ ವ್ಯಾಪಾರಕ್ಕೆ ಈ ಹಣವನ್ನು ಉಪಯೋಗಿಸಿಕೊಳ್ಳುವುದು – ಇಂಥ ಕೆಲಸಗಳಿಗೆ ಶಿಕ್ಷೆ ಮತ್ತು ಎಚ್ಚರಿಕೆ ನೀಡುವುದು ಮಾತ್ರ ಎಂದು ನೀವು ಹೇಳುತ್ತೀರ.

**ಶ್ರೀ ಕೊಂಡಜ್ಜಿ ಬಸಪ್ಪ:** ಅವರಿಂದಲೂ ಅರ್ಜಿಗಳನ್ನು ಅವರು ಪಡೆದಿದ್ದಾರೆ. ಆದರೆ ಬೋರ್ಡ್ ಆಫ್ ಡೈರಕ್ಟರ್ಸ್ ಲೋನ್ ನೀಡುವುದಕ್ಕಿಂದ ಮೊದಲೇ ಬೋರ್ಡ್ ಮಂಜೂರಾತಿ ನೀಡುವುದು ಎಂದು ಹಣವನ್ನು ನೀಡಲಾಗಿದೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಕೋ–ಆಪರೇಟಿವ್ ಸೊಸೈಟಿಯ ರಿಜಿಸ್ಟ್ರಾರ್‌ರವರ ಆದೇಶಗಳ ವಿರುದ್ಧ ಸರ್ಕಾರದ ಮುಂದೆ ಸಲ್ಲಿಸಲಾಗಿದ್ದ ರಿವ್ಹಿಜನ್ ಅರ್ಜಿ ಏನಾಗಿದೆ?

**ಸಭಾಧ್ಯಕ್ಷರು:** (ಈ) ಖಂಡದಲ್ಲಿ ಹೇಳಲಾಗಿದೆ. ಸರ್ಕಾರವು ರಿವ್ಹಿಜನ್ ಅರ್ಜಿಯನ್ನು ವಜಾ ಮಾಡಲಾಗಿದೆ.

**ಶ್ರೀ ಹೆಚ್. ಆರ್. ಕೇಶವಮೂರ್ತಿ:** ರಿಜಿಸ್ಟ್ರಾರ್‌ರವರು ಕಂಡು ಕೊಂಡಿರುವುದರಲ್ಲಿ "ಬೆಳೆಗಾರರ ವ್ಯವಸಾಯ ಉತ್ಪನ್ನಗಳ ವ್ಯಾಪಾರಕ್ಕೆ ಪರೋಕ್ಷವಾಗಿ ಉತ್ಪಾದನಾ ಲೋನ್‌ಗಳನ್ನು ಬಳಸಲಾಗುತ್ತದೆ" ಎಂಬುದು ತಿಳಿದು ಬಂದಿದೆ. ಇದೇ ರೀತಿಯಲ್ಲಿ ಇನ್ನು ಹಲವಾರು ಸೊಸೈಟಿಗಳಲ್ಲಿ ಕ್ಲಾರ್ಕ್‌ಗಳು ಬಂಡವಾಳವಿಲ್ಲದೆ ಬಂಡವಾಳ ಶಾಖೆಗಳಾಗಿದ್ದಾರೆ ಹಾಗೂ ಸಮುದಾಯದ ವೆಚ್ಚದಲ್ಲಿ ಇದನ್ನು ಅವರು ಮಾಡುತ್ತಾರೆ. ಈ ವಿಷಯವು ಸರ್ಕಾರಕ್ಕೆ ತಿಳಿದಿದೆಯೇ ಹಾಗೂ ಹೌದು ಎಂದಲ್ಲಿ, ಇಂಥಹವುಗಳನ್ನು ತಡೆಯಲು ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಂಡಿದೆ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಂಥ ಪ್ರಕರಣಗಳಲ್ಲಿ, ಇನ್ನು ಮುಂದೆ ಅವುಗಳನ್ನು ಪುನಃ ಮಾಡದಿರಲು ನಾವು ನಿರ್ದೇಶನಗಳನ್ನು ನೀಡಿದ್ದೇವೆ.

**ಶ್ರೀ ಜಿ.ವಿ.ಗೌಡ:** ಕೋ–ಆಪರೇಟಿವ್ ಸೊಸೈಟಿ ರಿಜಿಸ್ಟ್ರಾರ್‌ವರು ಕಮಿಟಿಯ ವಿರುದ್ಧ ಮಾಡಿರುವ ಅಪಾದನೆಗಳು (ಚಾರ್ಜ್) ನಿಜವೆಂದು ಕಂಡು ಬಂದರೂ, ಎಚ್ಚರಿಕೆ ಕೊಡುವುದರಿಂದ ನ್ಯಾಯ ಕೊಟ್ಟಂತೆ ಅನಿಸಿರುವುದು ಏತಕ್ಕೆ ಎಂದು ನಾನು ತಿಳಿಯಬಹುದಾ:

**ಶ್ರೀ ಕೊಂಡಜ್ಜಿ ಬಸಪ್ಪ:** ಏಕೆಂದರೆ ಅವರು ಹೊಸಬರು. ಯಾರು ಹೊಸದಾಗಿ ಬಿಸಿನೆಸ್ ಮಾಡುತ್ತಾರೋ ಅವರಿಗೆ ಅಕೌಂಟ್ಸ್ ನಿರ್ವಹಿಸುವುದು ಸರಿಯಾಗಿ ತಿಳಿದಿರುವುದಿಲ್ಲ. ಅವರು ಈ ವಿಷಯದಲ್ಲಿ ಅವರ ಮುಗ್ದತೆಯನ್ನು ವಾದಿಸಿದ್ದಾರೆ. ಮುಂದೆ ಸರಿಯಾಗಿ ಅಕೌಂಟ್ಸ್‌ನ್ನು ನಿರ್ವಹಿಸುವುದಾಗಿ ವಾಗ್ದಾನ ಮಾಡಿದ್ದಾರೆ.

**ಶ್ರೀ ಜಿ.ವಿ.ಗೌಡ:** ಕೋ–ಆಪರೇಟಿವ್ ಸೊಸೈಟಿಯ ರಿಜಿಸ್ಟ್ರಾರ್‌ರವರು ಅಪಾದನೆಗಳನ್ನು ಮಾಡಿರುವುದಕ್ಕೆ ಅವರು ಕೊಟ್ಟಿರುವ ಉತ್ತರವೇನು?

**ಶ್ರೀ ಕೊಂಡಜ್ಜಿ ಬಸಪ್ಪ:** ಉತ್ತರವು ದೊಡ್ಡದಾಗಿದ್ದು 8 ರಿಂದ 10 ಪುಟಗಳನ್ನು ಒಳಗೊಂಡಿದೆ.

**ಶ್ರೀ ಜಿ.ವಿ.ಗೌಡ:** ಅಪಾದನೆಗಳನ್ನು ರಿಜಿಸ್ಟ್ರಾರ್‌ರವರು ವಜಾಮಾಡಿರುವುದಕ್ಕೆ ಕಾರಣಗಳನ್ನು ನಾನು ತಿಳಿದುಕೊಳ್ಳಬೇಕು.

**ಸಭಾಧ್ಯಕ್ಷರು:** ಚಾರ್ಜ್‌ನ್ನು ವಾಪಸ್ಸು ತೆಗೆದುಕೊಂಡಿಲ್ಲ. ಅವರನ್ನು ಸೂಪರ್‌ಸೆಷನ್/ ತೆಗೆದುಹಾಕದೆ ಎಚ್ಚರಿಸಿರುವುದರ ಮೂಲಕ ಶಿಕ್ಷೆಯನ್ನು ನೀಡಲಾಗಿದೆ.

**ಶ್ರೀ ಜಿ.ವಿ.ಗೌಡ:** ಚಾರ್ಜ್‌ಗೆ ಎಚ್ಚರಿಕೆಯು ಸಾಕಷ್ಟು ಶಿಕ್ಷೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ರಿಜಿಸ್ಟ್ರಾರ್‌ರವರ ಆದೇಶವನ್ನು ನೋಡುತ್ತೇನೆ/ ಓದುತ್ತೇನೆ.

**ಸಭಾಧ್ಯಕ್ಷರು:** ಇದು ದೊಡ್ಡದಾಗಿದ್ದಲ್ಲಿ ನಾನು ಸದನದ ಸಮಯವನ್ನು ತೆಗೆದುಕೊಳ್ಳಲು ಇಚ್ಛಿಸುವುದಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ದೊಡ್ಡ ಆದೇಶ ಸರ್

**ಸಭಾಧ್ಯಕ್ಷರು:** ಹಾಗಾದರೆ, ಅದನ್ನು ಸದನದ ಮೇಜಿನ ಮೇಲೆ ತನ್ನಿ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಜಿಲ್ಲಾ ಕೋ-ಆಪರೇಟಿವ್ ಸೆಂಟ್ರಲ್ ಬ್ಯಾಂಕ್ ಸಲ್ಲಿಸಿದ್ದ ರಿವ್ಹಿಜನ್ ಅರ್ಜಿಯನ್ನು ಸರ್ಕಾರವು ವಜಾ ಮಾಡಿದೆ ಎಂದು ಹೇಳಲಾಗಿದೆ ಸರ್ಕಾರದ ಮುಂದೆ ಇರುವ ವಿಷಯಗಳು ಮತ್ತು ಫೈಂಡಿಂಗ್ಸ್‌ಗಳು ಯಾವವು ಎಂದು ನಾನು ತಿಳಿದು ಕೊಳ್ಳಬಹುದೇ ಹಾಗೂ ಹೇಗೆ ರಿವ್ಹಿಜನ್ ಅರ್ಜಿ ನಿಲ್ಲುವುದಿಲ್ಲ ಎಂದು ಹೇಗೆ ತೀರ್ಮಾನಕ್ಕೆ ಬಂದಿದ್ದಾರೆ.

**ಸಭಾಧ್ಯಕ್ಷರು:** ಎಲ್ಲಾ ಫೈಂಡಿಂಗ್ಸ್‌ಗಳು ಯಾವುವು ಎಂಬುದು ಪ್ರಶ್ನೆಗೆ ಸಂಬಂಧಿಸಿದೆ. ಉತ್ತರದಲ್ಲಿ ಫೈಲ್‌ನ್ನು ಪೂರ್ಣವಾಗಿ ಒದಗಬೇಕಾಗಿದೆ ಹಾಗೂ ಇದು ಸದನದ ಸಮಯವನ್ನು ತೆಗೆದುಕೊಳ್ಳುತ್ತದೆ.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ:** ಅವರು ಸಾರಾಂಶ ನೀಡಲಿ. ಇದರಲ್ಲಿ ಈ ವ್ಯಕ್ತಿಗಳ ಕೈಯಿದೆ.

**ಸಭಾಧ್ಯಕ್ಷರು:** ಮಾನ್ಯ ಸದಸ್ಯರು ಇನ್ನು ನಿರ್ದಿಷ್ಟ ಪ್ರಶ್ನೆಯನ್ನು ಇಡಲಿ ಎಂದು ನಾನು ಸಲಹೆ ನೀಡುತ್ತೇನೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಈ ರಿವ್ಹಿಜನ್ ಅರ್ಜಿಯು ನಿಲ್ಲುವುದಿಲ್ಲ ಎಂದು ಹೇಳಲು ಯಾವ ವಿಷಯಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ ಎಂದು ನಾನು ತಿಳಿದು ಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವಾಗ ಬೆಂಗಳೂರು ಜಿಲ್ಲಾ ಬ್ಯಾಂಕಿನ ಅಧ್ಯಕ್ಷರು ಅರ್ಜಿಯನ್ನು ಸಲ್ಲಿಸಿದ್ದರೋ ಆಗ ಸಂಬಂಧಪಟ್ಟ ಸೊಸೈಟಿಯು ಅರ್ಜಿಯನ್ನು ಸಲ್ಲಿಸಿದ್ದರು. ಚನ್ನಪಟ್ಟಣ ಸೊಸೈಟಿ ಹಾಗೂ ಜಿಲ್ಲಾ ಬ್ಯಾಂಕಿನ ಅಧ್ಯಕ್ಷರು ಕೇಸ್‌ನ್ನು ವಾಪಸ್ಸು ತೆಗೆದುಕೊಳ್ಳಲು ಒಪ್ಪಿದರು. ಹಾಗಾಗಿ ಪಕ್ಷಗಾರರ ಸಮ್ಮತಿಯಿಂದ ಪ್ರಕರಣವನ್ನು ಮುಚ್ಚಲಾಯಿತು.

**ಶ್ರೀ ಬಿ.ಜೆ. ಲಿಂಗೇಗೌಡ:** ಕೇಸ್‌ನ್ನು ವಾಪಸ್ಸು ತೆಗೆದುಕೊಳ್ಳಲು ಅಧ್ಯಕ್ಷರು ಒಪ್ಪಿದ್ದಾರೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅಧ್ಯಕ್ಷರು ಸಹ ಅದಕ್ಕೆ ಒಪ್ಪಿದ್ದಾರೆ ಎಂದು ಪ್ರೊಸಿಡಿಂಗ್ಸ್ ತುಂಬಾ ಸ್ಪಷ್ಟವಾಗಿ ತೋರಿಸುತ್ತಿವೆ.

**ಶ್ರೀ ಬಿ.ಜೆ. ಲಿಂಗೇಗೌಡ:** ಆ ಹೇಳಿಕೆಯನ್ನು ಕೊಟ್ಟಿದ್ದು ಯಾರು? ಇದು ಮೌಖಿಕವಾಗಿಯೇ/ ಬರವಣಿಗೆಯಲ್ಲಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಪ್ರೊಸಿಡಿಂಗ್ಸ್ ಒಂದು ಭಾಗವಾಗಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ಇದು ಜಿಲ್ಲಾ ಬ್ಯಾಂಕು ಮತ್ತು ಸೊಸೈಟಿಯ ನಡುವಿನ ರಾಜಿಯೇ ಹಾಗೂ ಸರ್ಕಾರದ ತೀರ್ಮಾನವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಪಕ್ಷಗಾರರ ಪರಸ್ಪರ ಒಪ್ಪಿಗೆಯಿಂದ ಮಾಡಲಾಗಿದೆ.

**ಶ್ರೀ ಜಿ.ವಿ. ಲಿಂಗೇಗೌಡ:** ಸೆಂಟ್ರಲ್ ಬ್ಯಾಂಕಿನ ಅಧ್ಯಕ್ಷರು ಪ್ರೆಸ್ ಮಾಡದಿರುವುದರಿಂದ ಅರ್ಜಿಯನ್ನು ವಜಾ ಮಾಡಲಾಗಿದೆ ಎಂದು ನಾನು ತಿಳಿದುಕೊಳ್ಳಬಹುದಾ.

**ಶ್ರೀ ಕೊಂಡಜ್ಜಿ ಬಸಪ್ಪ:** ನಿಶ್ಚಿತವಾಗಿ.

**ಶ್ರೀ ಬಿ.ಜೆ. ಲಿಂಗೇಗೌಡ:** ವೈಯಕ್ತಿಕವಾಗಿ ಅಧ್ಯಕ್ಷರು ಡ್ರಾ ಮಾಡಿರುವ ಹಣವನ್ನು ನಾನು ತಿಳಿದುಕೊಳ್ಳಬಹುದಾ:

**ಶ್ರೀ ಕೊಂಡಜ್ಜಿ ಬಸಪ್ಪ:** ಇಪ್ಪತ್ತು ಸಾವಿರ ರೂಪಾಯಿಗಳು.

## ಎನ್.ಇ.ಎಸ್. ಬ್ಲಾಕ್ ಹಂಚಿಕೆ

13ನೇ ಸೆಪ್ಟೆಂಬರ್ 1962

**ಶ್ರೀ ಮಹಾಂತ ಸ್ವಾಮಿ (ಶಹಾಪೂರ):**

ಅ. ಇದುವರೆಗೂ ಸುರಪುರಕ್ಕೆ ಎನ್. ಇ.ಎಸ್. ಬ್ಲಾಕ್ ಹಂಚಿಕೆ ಮಾಡದಿರುವುದಕ್ಕೆ ಕಾರಣಗಳು.

ಆ. ಸುರಪುರಕ್ಕೆ ಎನ್.ಇ.ಎಸ್. ಬ್ಲಾಕ್ ಹಂಚಿಕೆ ಮಾಡುವ ಉದ್ದೇಶ ಅವರಿಗೆ ಇದೆಯೇ:

ಇ. ಹೌದು ಎಂದಲ್ಲಿ, ಯಾವಾಗ?

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ)**

ಅ. ಬ್ಲಾಕ್‌ಗಳನ್ನು ಹಂಚಿಕೆಮಾಡಲು ಭಾರತ ಸರ್ಕಾರವು ಕೆಲವು ನಿರ್ದಿಷ್ಟ ನಿಯಮಗಳನ್ನು ನಿಗದಿಪಡಿಸಿದೆ. ಒಳಗೊಂಡಿರುವ ಜನಸಂಖ್ಯೆಯ ಆಧಾರದ ಮೇಲೆ ಜಿಲ್ಲೆಗೆ ಹಂಚಿಕೆ ಮಾಡಲಾಗುವ ಒಟ್ಟು ಬ್ಲಾಕ್‌ಗಳ ಸಂಖ್ಯೆ, ಈಗಾಗಲೇ ಹಂಚಿಕೆ ಮಾಡಲಾಗಿರುವ ಬ್ಲಾಕ್‌ಗಳು, ಪ್ರದೇಶ ಹಿಂದುಳಿದಿರುವುದು, ಆಹಾರ ಉತ್ಪಾದನೆಯ ಸಾಮರ್ಥ್ಯ ಹಂಚಿಕೆ ಮಾಡಿರುವ ಬ್ಲಾಕ್‌ಗಳೊಂದಿನ ನಿಕಟತೆ ಇತ್ಯಾದಿಗಳ ಮಾನದಂಡಗಳನ್ನು ಗಮನದಲ್ಲಿಟ್ಟುಕೊಂಡು ಬ್ಲಾಕ್‌ಗಳನ್ನು ಹಂಚಿಕೆ ಮಾಡಲಾಗುವುದು ಎಲ್ಲಿ ಹಿಂದುಳಿದ ವರ್ಗಗಳು ಗಣನೀಯವಾಗಿರುವರೋ ಹಾಗೂ ಅಗ್ರಿಕಲ್ಚರಲ್/ವೆಟರ್ನರಿ ಕಾಲೇಜು ವಿಸ್ತರಣಾ ತರಬೇತಿ ಕೇಂದ್ರ ಮತ್ತು ಇದೇ ರೀತಿಯೂ ಸಂಸ್ಥೆಗಳಿರುವ ಪ್ರದೇಶಗಳಿಗೆ ಪ್ರಾಶಸ್ತ್ಯ ನೀಡಲಾಗುವುದು.

ಆ. ಹೌದು

ಇ. 1962 ನೇಯ ವರ್ಷದ ಅಕ್ಟೋಬರ್‌ನಲ್ಲಿ

**ಶ್ರೀ ಮಹಾಂತ ಸ್ವಾಮಿ** – ಈ ವರ್ಷ ಅಕ್ಟೋಬರಿನಲ್ಲಿ ಕೊಡುತ್ತೇವೆಂದು ಹೇಳಿದ್ದಿರಿ. ಒಂದು ಬ್ಲಾಕು ಕೊಡುತ್ತೀರೋ ಅಥವಾ ಎರಡು ಬ್ಲಾಕು ಕೊಡುತ್ತೀರೋ?

**ಶ್ರೀ ಕೊಂಡಜ್ಜಿ ಬಸಪ್ಪ** – ಅಲ್ಲಿಗೆ ಎರಡು ಬ್ಲಾಕು ಕೊಡಬೇಕಾಗುತ್ತದೆ. ಅಕ್ಟೋಬರಿನಲ್ಲಿ ಎರಡನ್ನು ಕಂಪ್ಲೀಟ್ ಮಾಡುತ್ತೇವೆ. ಗುಲ್ಬರ್ಗಾ ಜಿಲ್ಲೆಯಲ್ಲಿ ಅದೊಂದೇ ತಾಲ್ಲೂಕು ಉಳಿದಿರುವುದು.

**ಶ್ರೀ ಮಹಾಂತ ಸ್ವಾಮಿ** – ಈ ಪ್ರಶ್ನೆ ಕ್ಯಾಬಿನೆಟ್‌ನಲ್ಲಿ ತೀರ್ಮಾನ ತೆಗೆದುಕೊಳ್ಳುವ ಹಂತದವರೆಗೂ ಬಂದು ಅಲ್ಲಿ ಸ್ಥಗಿತವಾಗಿದೆಯೆಂದು ವದಂತಿಯಿದೆ ಇದು ತಮಗೆ ಗೊತ್ತಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ಗೌಪ್ಯ ಮಾಹಿತಿಯಾಗಿದೆ ಇದನ್ನು ನಾನು ಹೇಳುವುದಿಲ್ಲ.

**ಶ್ರೀ ಸಂಜೀವನಾಥ ಐತಾಳ:** ನಿಮ್ಮ ಉತ್ತರದಲ್ಲಿ ರೆಫರ್ ಮಾಡಿರುವ (ನಾರ್ಮ್)ನಿಯಮಗಳು ಯಾವುವು?

**ಶ್ರೀ ಕೊಂಡಜ್ಜಿ ಬಸಪ್ಪ:** ನಿಯಮಗಳ ವಿವರಗಳನ್ನು ಪ್ರಿಂಟ್ ಮಾಡಲಾಗಿದೆ. ನಿಮಗೆ ಬೇಕಾಗಿದ್ದಲ್ಲಿ ನಾನು ಮೇಜಿನ ಮೇಲೆ ಇಡುತ್ತೇನೆ.

**ಶ್ರೀ ಸಂಜೀವನಾಥ'ಐತಾಳ:** ಹೌದು, ದಯಮಾಡಿ ಅದನ್ನು ಇಡಬೇಕು.

**ಶ್ರೀ ಕೆ.ಪಿ.ರೇವಣ್ಣಸಿದ್ದಪ್ಪ** – ಈ ರೀತಿ ಬ್ಲಾಕುಗಳನ್ನು ಕೊಡುವುದು. ಪ್ರಶ್ನೆಗಳನ್ನು ಕಳುಹಿಸಿದರೆ ಮಾತ್ರವೇ? ಅಥವಾ ಪ್ರಶ್ನೆ ಕಳುಹಿಸದೆ ಇರುವವರಿಗೂ ಕೊಡುವ ಪದ್ಧತಿ ಉಂಟೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಸಾರ್ವಜನಿಕರಿಂದ ಬಂದಿರುವ ಕೋರಿಕೆಗಳಿವೆ ಅಲ್ಲಿ, ನಾವು ಆದಿಲ್ಲದಿದ್ದರೂ ಸಹ ಪರಿಗಣಿಸುತ್ತೇವೆ.

**ಶ್ರೀಮತಿ ಸುಶೀಲಾ ಬಾಯಿ ಹೀರಾಚಂದ್ ಷಾ** – ರಾಷ್ಟ್ರೀಯ ವಿಸ್ತರಣ ಯೋಜನೆಯ ಪ್ರಕಾರ ಈಗ ಬ್ಲಾಕುಗಳನ್ನು ಕೊಡುವುದು ಎಲ್ಲೆಲ್ಲಿ ನಿಂತಿದೆಯೋ ಅಲ್ಲಿಗೆಲ್ಲಾ ೧೯೬೨ ನೇಯ ಇಸವಿ ಸರ್ವೆ ನಂಬರ್ ಒಳಗೆ ಮಾಡುತ್ತೇವೆಂದು ಹೇಳಿದ್ದಿರಿ. ಬಿಜಾಪುರ ತಾಲ್ಲೂಕಿನಲ್ಲಿ ಕೂಡ ಈ ರೀತಿ ಬ್ಲಾಕನ್ನು ಕೊಡುವುದು ನಿಂತಿದೆ. ಅಲ್ಲಿಗೂ ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಈಗ ೨೪ ಬ್ಲಾಕುಗಳು ಬರಲಿವೆ. ಆಗ ಇದಕ್ಕು ಕೊಡುವುದನ್ನು ಯೋಜನೆ ಮಾಡುತ್ತೇವೆ.

**ಶ್ರೀ ಮಹಾಂತ ಸ್ವಾಮಿ** – ಒಂದೊಂದು ಬ್ಲಾಕಿಗೆ ಎಷ್ಟು ಹಣ ಕೊಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ** – ೧೨ ಲಕ್ಷ ರೂಪಾಯಿಗಳನ್ನು ಅದರಲ್ಲಿ ಪ್ರಿ ಎಕ್ಸಟೆನ್‌ಷನ್ ಪಿರಿಯಡ್‌ನಲ್ಲಿ ಅಂದರೆ ಮೊದಲನೆಯ ವರ್ಷ೧೪.೦೦೦ ರೂಪಾಯಿಗಳನ್ನು ಮಾತ್ರ ಸಿಬ್ಬಂದಿ ಮತ್ತಿತರ ಖರ್ಚುಗಳಿಗೆಂದು ಕೊಡಲಾಗುತ್ತಿದೆ. ಬರುವ ವರ್ಷ ಮಿಕ್ಕದ್ದನ್ನು ಕೊಡಲಾಗುತ್ತದೆ.

**ಶ್ರೀ ತಾವರೆ ಪಕೀರಪ್ಪ ಸಿದ್ದಪ್ಪ** – ತಾವು ಬ್ಲಾಕಿಗೇನೋ ಕೊಡುತ್ತೀರಿ. ಆದರೆ ಅಲ್ಲಿ ಸಿಬ್ಬಂದಿಯೇ ಇಲ್ಲವಲ್ಲಾ ಏನುಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಲೋಕಸೇವಾ ಆಯೋಗವು ಬಿ.ಡಿ.ಓ. ಮತ್ತು ಉಪ ಬಿ.ಡಿ.ಓ. ಗಳನ್ನು ನೇಮಕಮಾಡಲು ಕ್ರಮಗಳನ್ನು ಕೈಗೊಂಡಿದೆ ಹಾಗೂ ಅವು ಪರಿಗಣನೆಯಲ್ಲಿವೆ.

**ಶ್ರೀ ತಾವರೆ ಪಕೀರಪ್ಪ ಸಿದ್ದಪ್ಪ** – ಕೆಲವು ಬ್ಲಾಕುಗಳಲ್ಲಿ ಬಿ.ಡಿ.ಓ ಎಂಬ ಆಫೀಸರ್ ಮಾತು ಇದ್ದೂ ಉಳಿದ ಸಿಬ್ಬಂದಿ ಯಾವುದೂ ಇರುವುದಿಲ್ಲ. ಈ ರೀತಿಯಲ್ಲೇ ಬ್ಲಾಕುಗಳ ಅವಧಿಯೇ ಮುಗಿಯುತ್ತಾ ಬಂದಿದೆ. ಅಂಥವಕ್ಕೇನೂ ಮಾಡುತ್ತೀರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವುಗಳಿಗೆ ಸಿಬ್ಬಂದಿ ನೀಡಲು ಕ್ರಮ ಕೈಗೊಳ್ಳಲಾಗಿದೆ.

**ಶ್ರೀ ಸಿ.ಆರ್.ರಂಗೇಗೌಡ** – ಒಂದು ತಾಲ್ಲೂಕಿನಲ್ಲಿ ರಾಷ್ಟ್ರೀಯ ವಿಸ್ತರಣಾ ಯೋಜನೆಯನ್ನು ಪ್ರಾರಂಭ ಮಾಡುವುದಕ್ಕೆ ಮೊದಲೇ ಅಲ್ಲಿ ಪ್ರತಿಯೊಂದು ವಿಷಯವನ್ನೂ ಇನ್‌ವೆಸ್ಟಿಗೆಂಟ್ ಮಾಡಿ ನೋಡಿ ಯಾವ ಕೆಲಸವನ್ನು ಅತ್ಯವಶ್ಯಕವಾಗಿ ತೆಗೆದುಕೊಳ್ಳಬೇಕು, ಯಾವ ಕೆಲಸವನ್ನು ಆಮೇಲೆ ಮಾಡಬಹುದು ಎಂಬುದನ್ನೆಲ್ಲಾ ಮಾಡುತ್ತಿರುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಸದಸ್ಯರ ಸಲಹೆಯನ್ನು ಪರಿಗಣಿಸುತ್ತೇವೆ.

**ಶ್ರೀ ಟಿ.ಆರ್. ಪರಮೇಶ್ವರಯ್ಯ:** ಪ್ರತಿ ವರ್ಷವೂ ಸಾಕಷ್ಟು (ತೃಪ್ತಿಕರವಾಗಿ) ಹಣವನ್ನು ಖರ್ಚುಮಾಡಿಲ್ಲ. ಸರ್ಕಾರವು ಯಾವ ಕ್ರಮವನ್ನು ತೆಗೆದುಕೊಳ್ಳಲು ಉದ್ದೇಶಿಸದೆ ಎಂದು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿಯೊಂದು ಐಟಮ್‌ನಲ್ಲಿ ನೀಡಲಾಗಿರುವ ಹಣವನ್ನು ಖರ್ಚು ಮಾಡಲು ಅಧಿಕಾರಿಗಳಿಗೆ ಸೂಚಿಸಲಾಗಿದೆ.

**ಶ್ರೀ ಕೆ.ಎ.ಚನ್ನಬೈರೇಗೌಡ** – ಬ್ಲಾಕ್ ಬಿ.ಡಿ.ಓ ಆಫೀಸರ್ ಗಳು ಕಾಂಗ್ರೆಸ್ ಆಫೀಸಿನಲ್ಲಿ ಕೆಲಸ ಮಾಡುತ್ತಿರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಅಂಥಾದ್ದು ನನ್ನ ಗಮನಕ್ಕೆ ಬಂದಿಲ್ಲ.

**ಶ್ರೀ ಸಂಜೀವನಾಥ ಐತಾಳ:** ಈ ಬ್ಲಾಕ್ ಆಫೀಸರ್ಸ್‌ಗಳಿಗೆ ಏಕೆ ಅಲ್ಲಿ ಅಷ್ಟು ತಿಂಗಳ ಅವಧಿಯ ತರಬೇತಿ ಇದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ತರಬೇತಿ ಇರದ ಹೊರತು ಕೆಲಸಕ್ಕೆ ಅವರಿಗೆ ಅರ್ಹತೆ ಇರುವುದಿಲ್ಲ. ಯೋಜನೆಯಲ್ಲಿ ಬ್ಲಾಕ್ ತೆಗೆದು ಕೊಂಡಿರುವ ಎಲ್ಲಾ ಶಾಖೆಯ ಕೆಲಸಗಳಲ್ಲಿ ಅವಶ್ಯಕವಾಗಿ ಓರಿಯಂಟೇಷನ್ ಬೇಕಾಗುವುದು. ಆದ್ದರಿಂದ ಅವರಿಗೆ ತರಬೇತಿ ಕೊಡುವುದು.

**ಶ್ರೀ ಕೆ.ಲಕ್ಕಪ್ಪ:** ಹಂಚಿಕೆ ಮಾಡಲಾದ ಹಣವನ್ನು ಖರ್ಚುಮಾಡಿಲ್ಲ ಮತ್ತು ಅದು ಲ್ಯಾಪ್ಸ್ ಆಗಿದೆ. ಸರ್ಕಾರವು ಯಾವ ಕ್ರಮವನ್ನು ಕೈಗೊಂಡಿದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಯಾವುದೇ ನಿರ್ದಿಷ್ಟ ಪ್ರಕರಣದಲ್ಲಿ ಯಾವುದೇ ನಿರ್ದಿಷ್ಟ ಬ್ಲಾಕಿನ ಹಣವು ಲ್ಯಾಪ್ಸ್ ಆಗಿದ್ದಲ್ಲಿ, ನಾವು ಇನ್ನು ಮುಂದೆ ಈ ರೀತಿ ಆಗಬಾರದೆಂದು ಸೂಚನೆಗಳನ್ನು ನೀಡುತ್ತೇವೆ.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ:** ಗೆಜೆಟ್ ನೋಟಿಫಿಕೇಶನ್ ಬೇರೆ ಪ್ರತಿಗಳಿಗಾಗಿ 1958ನೇಯ ಇಸವಿಯಿಂದ ಪೆಂಡಿಂಗ್ ಇದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಅಲ್ಲಿ ತುಂಬಾ ವಿಳಂಬವಾಗಿರುವುದನ್ನು ಒಪ್ಪಿಕೊಳ್ಳುತ್ತೇವೆ. ಇನ್ನು ಕೆಲವೇ ತಿಂಗಳಲ್ಲಿ ಪ್ರಾಮಾಣಿಕವಾಗಿ ಈ ಪ್ರಕರಣಗಳನ್ನು ಮುಗಿಸಲು ಭೂ ಸ್ವಾಧೀನ ಅಧಿಕಾರ ಎಂದರೆ ನಂಜನಗೂಡಿನ ಉಪ-ವಿಭಾಗೀಯ ಅಧಿಕಾರಿಯಾಗಿರುವವರಿಗೆ ಸೂಚನೆಗಳನ್ನು ನೀಡಲಾಗಿದೆ.

**ಶ್ರೀ ಜಿ.ವಿ. ಗೌಡ:** ಕೆಲವು ಪ್ರಕರಣಗಳಲ್ಲಿ ಪ್ರೊಸಿಡಿಂಗ್ಸ್‌ನ್ನು ವಾಪಸ್ಸು ಪಡೆದುಕೊಂಡಿರುವುದಕ್ಕೆ ಕಾರಣಗಳನ್ನು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ನೋಟೀಸ್‌ಬೇಕು.

**ಶ್ರೀ ಜಿ.ವಿ.ಗೌಡ:** ಕೆಲವು ಸದಸ್ಯರ ಶಿಫಾರಸ್ಸಿನಿಂದ ಈ ಸ್ವಾಧೀನ ಪ್ರಕ್ರಿಯೆಯನ್ನು ವಾಪಸ್ಸು ಪಡೆದಿಲ್ಲ?

**ಶ್ರೀ ಕೊಂಡಜ್ಜಿ ಬಸಪ್ಪ:** ನನಗೆ ಅದು ಗೊತ್ತಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ಕಾರವು ಯಾವುದೇ ಸರ್ವೆಯನ್ನು ಮಾಡಿಲ್ಲ. ಎಲ್ಲಿಯಾದರೂ ಸ್ವಾಧೀನವಿದ್ದರೆ, ಕಾನೂನು ಕೆಲವು ನಿರ್ದಿಷ್ಟ ಪ್ರಕ್ರಿಯೆ ಪಾಲಿಸುವುದನ್ನು ಕೇಳುತ್ತದೆ. ಭೂಸ್ವಾಧೀನ ಕಾಯ್ದೆಯಡಿಯಲ್ಲಿ ನಾವು ನಿರ್ದಿಷ್ಟವಾದ ಪ್ರಕ್ರಿಯೆಯನ್ನು ಪಾಲಿಸಬೇಕು. ಈ ಸದನದ ಸದಸ್ಯರು ಪ್ರಕ್ರಿಯೆಯನ್ನು ಸರಳಗೊಳಿಸಬೇಕೆಂದು ಸರ್ಕಾರದ ಗಮನಕ್ಕೆ ತಂದಿರುತ್ತಾರೆ ಇದು ಸರ್ಕಾರದ ಗಮನವನ್ನು ನಿಶ್ಚಯಿಸಿದೆ.

**ಶ್ರೀ ಅಂಗಡಿ ಚನ್ನಬಸಪ್ಪ:** ಗ್ರಾಮವನ್ನು ನಿಖರವಾಗಿ ಸರ್ವೆ ಮಾಡುವುದರಿಂದ ಗ್ರಾಮ ನಿವೇಶನಗಳ ಲಭ್ಯತೆಯನ್ನು ಸರ್ಕಾರ ತಿಳಿದುಕೊಂಡಿದೆಯೇ ಎಂದು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಸರ್ ಇದರಲ್ಲಿ ಹೆಚ್ಚಿನ ಭೂಮಿಯ ಹಿಡುವಳಿ ಭೂಮಿಯಾಗಿದೆ. ನಾವು ನಿರ್ದಿಷ್ಟ ಪ್ರಕ್ರಿಯೆಯನ್ನು ಪಾಲಿಸಬೇಕೆಂದು ಕಾನೂನು ಕೇಳುತ್ತದೆ.

# ಗ್ರಾಮಗಳಿಗೆ ನೀರಿನ ಪೂರೈಕೆ

**18ನೇ ಸೆಪ್ಟೆಂಬರ್ 1962**

**ಶ್ರೀ ಎಮ್.ಆರ್. ಪಾಟೀಲ (ಹುಬ್ಬಳ್ಳಿ):**

ಅ. ಹುಬ್ಬಳ್ಳಿ ಸಿಟಿ ಪೂರ್ವದಲ್ಲಿರುವ ಹುಬ್ಬಳ್ಳಿ ತಾಲ್ಲೂಕಿನ ಕಪ್ಪು ಎರೆಭೂಮಿ ಪ್ರದೇಶದ ಈ ಕೆಳಗಿನ ಅಂದರೆ 1. ಕುಸುಗಲ್ 2. ಇಂಗಳಹಳ್ಳಿ 3. ಹೆಬಸೂರು 4. ಶಿರಗುಪ್ಪಿ 5. ಮಂಟೂರು 6. ಕಿರಿಸೂರು ಮತ್ತು ಹಳ್ಳಿಹಾಳ್. ಗ್ರಾಮಗಳಲ್ಲಿ ಪದೇಪದೇ ಕುಡಿಯುವ ನೀರಿನ ಕೊರತೆಯಿಂದ ಬಳಲುತ್ತಿರುವುದು ವಾಸ್ತವವೇ?

ಆ. ರಾಷ್ಟ್ರೀಯ ಗ್ರಾಮಾಂತರ ನೀರು ಸರಬರಾಜು, ಯೋಜನೆಯಡಿಯಲ್ಲಿ ಸ್ಕೀಮ್‌ನ್ನು ತಯಾರು ಮಾಡಿ ಹುಬ್ಬಳ್ಳಿ ಸಿಟಿಯಿಂದ ಅವಶ್ಯಕ ಪೈಪಲೈನ್‌ಗಳನ್ನು ಹಾಕಿಸಿ ಗ್ರಾಮಗಳ ಜನರು ಮತ್ತು ಲೋಕಲ್ ಎಮ್.ಎಲ್.ಎ. ಅವರು 1961 ಇಸವಿಯ ಫೆಬ್ರವರಿಯಲ್ಲಿ ಸರ್ಕಾರಕ್ಕೆ ಮನವಿಯೊಂದನ್ನು ಸಲ್ಲಿಸಿರುವುದು ವಾಸ್ತವವೇ?

ಇ. ಹೌದು ಎಂದಲ್ಲಿ, ಈ ನಿಟ್ಟಿನಲ್ಲಿ ಅವರು ತೆಗೆದುಕೊಂಡಿರುವಂತಹ ಕ್ರಮಗಳು

ಈ. ಈ ಗ್ರಾಮಗಳಿಗೆ ಸಾಕಾಗುವಷ್ಟು ಕುಡಿಯುವ ನೀರನ್ನು ನೀಡುವ ಉದ್ದೇಶದಿಂದ ತೆಗೆದು ಕೊಂಡಿರುವ ಕ್ರಮಗಳು.

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

ಅ. ಹೌದು, ವಿಶೇಷವಾಗಿ ಯಾವ ವರ್ಷಗಳಲ್ಲಿ ಮಳೆಯು ಸಾಕಷ್ಟು ಇಲ್ಲದಿರುವಾಗ

ಆ. ಹೌದು, ಮಾನ್ಯ ಸದಸ್ಯರೇ, ಖುದ್ದಾಗಿ, ಗ್ರಾಮದ ಜನರು ಮನವಿಯನ್ನು ಮಾಡಲ್ಲ.

ಇ. ವಿಷಯವನ್ನು ಪರಿಶೀಲಿಸಲಾಗುತ್ತಿದೆ. ಪ್ರಸ್ತಾವನೆಯ ಅಧಿಕ ವೆಚ್ಚದಾಗಿದ್ದು ಹಾಗೂ ಪಂಚಾಯತ್ ಸಾಮರ್ಥ್ಯದ ಹೊರಗೆ ಇದೆ.

ಈ. ಲೋಕಲ್ ಡೆವಲಪ್‌ಮೆಂಟ್ ವರ್ಕ್ಸ್ ಪ್ರೋಗ್ರಾಂನಲ್ಲಿ ಪ್ರತಿಯೊಂದು ಗ್ರಾಮಕ್ಕೆ ಒಂದು ಕುಡಿಯುವ ನೀರಿನ ಬಾವಿಯನ್ನು ಒದಗಿಸಲು ಪ್ರಸ್ತಾಪಿಸಲಾಗಿದೆ. ಬಾವಿಗಳ ಸಾಧ್ಯತೆ ಇಲ್ಲದಿದ್ದಲ್ಲಿ, ಹಾಲಿ ಇರುವ ಟ್ಯಾಂಕ್‌ಗಳನ್ನು ಅಳವಡಿಸಲಾಗುತ್ತದೆ.

**ಶ್ರೀ ಎಮ್.ಆರ್.ಪಾಟೀಲ:** ಈ ಗ್ರಾಮಗಳಿಗೆ ಪೈಪ್‌ಲೈನ್‌ಗಳನ್ನು ಹಾಕಿಸುವುದಕ್ಕೆ ಆಗುವ ಖರ್ಚಿನ/ವೆಚ್ಚದ ಅಂದಾಜನ್ನು ಮಾಡಲಾಗಿದೆಯೇ. ಹೌದು ಎಂದಲ್ಲಿ, ವೆಚ್ಚವೆಷ್ಟು?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿಯೊಬ್ಬ ವ್ಯಕ್ತಿಗೆ ಒಂದು ದಿನಕ್ಕೆ 5 ಗ್ಯಾಲನ್‌ಗಳಂತೆ ಲೆಕ್ಕ ಹಾಕಿದರೆ ವರ್ಷಕ್ಕೆ ರೂ 6000/– ಹಾಗೂ ಪ್ರಾರಂಭಿಕ ವೆಚ್ಚವೇ ರೂ 40000/ – ಈ ರೇಟಿನಲ್ಲಿ ಪ್ರತಿಯೊಂದು ಗ್ರಾಮಕ್ಕೆ 36000ರೂಪಾಯಿಗಳಾಗುತ್ತದೆ ಹಾಗೂ ಅವರು ಈ ವೆಚ್ಚವನ್ನು ವಹಿಸಿಕೊಳ್ಳಬೇಕು. ಆದ್ದರಿಂದ ಈ ಗ್ರಾಮಗಳಿಗೆ ಜವಬ್ದಾರಿ ಹೊರಿಸುವ ಅವಶ್ಯಕತೆಯಿಲ್ಲ ಎಂದು ಸರ್ಕಾರವು ಯೋಚಿಸುತ್ತಿದೆ.

**ಶ್ರೀ ಎಮ್. ಆರ್. ಪಾಟೀಲ:** ಈ ಸ್ಕೀಮ್‌ಗೆ ವೆಚ್ಚದ ಶೇಕಡ 50ರಷ್ಟು ಕೇಂದ್ರದಿಂದ ಬರುತ್ತದೆ ಶೇಕಡ 25 ರಷ್ಟು ರಾಜ್ಯ ಸರ್ಕಾರದಿಂದ ಹಾಗೂ ಪಂಚಾಯತ್‌ನವರು ಶೇಕಡ 25 ಪಂಚಾಯತ್‌ನ ಪಾಲು ಬರುತ್ತದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಶೇಕಡ 25 ಪಂಚಾಯತ್‌ನ ಪಾಲು ಆಗಿದೆ.

**ಶ್ರೀ ಎಮ್.ಆರ್. ಪಾಟೀಲ:** ವೆಚ್ಚ ಶೇಕಡ 25 ರಷ್ಟನ್ನು ವಹಿಸಿಕೊಳ್ಳಲು ಆಗುವುದಿಲ್ಲ ಎಂಬದುನ್ನು ಪಂಚಾಯತ್‌ಗಳಿಂದ ಸರ್ಕಾರವು ತಿಳಿದುಕೊಂಡಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದನ್ನು ಮಾಡಿಲ್ಲ. ಬಹಳಷ್ಟು ಗ್ರಾಮಗಳಿಗೆ ವೆಚ್ಚದ ಶೇಕಡ 25 ರಷ್ಟನ್ನು ಕೊಡುವ ಸಾಮರ್ಥ್ಯವಿಲ್ಲ.

**ಶ್ರೀ ಎಮ್.ಆರ್. ಪಾಟೀಲ:** ಈ ಗ್ರಾಮ ಪಂಚಾಯತ್‌ಗಳಿಗೆ ವೆಚ್ಚವನ್ನು ವಹಿಸಿಕೊಳ್ಳುವ ಸಾಮರ್ಥವಿಲ್ಲವೆಂದು ಸರ್ಕಾರಕ್ಕೆ ಮಾಹಿತಿ ನೀಡಿದರು ಯಾರು ಎಂದು ನಾನು ತಿಳಿದು ಕೊಳ್ಳಬಹುದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಅದು ನನಗೆ ಗೊತ್ತಿಲ್ಲ.

**ಶ್ರೀ ಎಮ್.ಆರ್. ಪಾಟೀಲ:** ಇದು ವೆಚ್ಚವಾಗಿದ್ದು ಗ್ರಾಮ ಪಂಚಾಯತ್‌ಗಳಿಗೆ ಆ ವೆಚ್ಚವನ್ನು ಭರಿಸುವುದು ಆಗುವುದಿಲ್ಲವೆಂದು ಸದಸ್ಯರಿಗೆ ಯಾವುದಾದರೂ ಉತ್ತರವನ್ನು ನೀಡಿದ್ದೀರ.

**ಶ್ರೀ ಕೊಂಡಜ್ಜಿ ಬಸಪ್ಪ:** ಗ್ರಾಮಸ್ಥರು ತಮ್ಮ ಪಾಲಿನ/ಭಾಗದ ಶೇಕಡ 25 ರಷ್ಟು ಕೊಡಲು ತಯಾರಿದ್ದಾರೆ, ಆಗ ಸರ್ಕಾರವು ಸ್ಕೀಮ್ ತೆಗೆದುಕೊಳ್ಳಲು ತಯಾರಿ ನಡೆಸುತ್ತದೆ.

**ಶ್ರೀ ಎಮ್.ಆರ್. ಪಾಟೀಲ:** ಅವರನ್ನು ಭೇಟಿಯಾಗದ ಹೊರತು, ಅವರು ವೆಚ್ಚವನ್ನು ಭರಿಸಲು ತಯಾರಿದ್ದಾರೆ ಇಲ್ಲವೆಂದು ತಿಳಿದುಕೊಳ್ಳಲು ಹೇಗೆ ಸಾಧ್ಯವಾಗುತ್ತದೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಮಾನ್ಯ ಸದಸ್ಯರ ಸಲಹೆಯನ್ನು ಪರಿಗಣಿಸುತ್ತೇವೆ.

**ಶ್ರೀ ಟಿ.ಕೆ.ಕಂಬಳಿ** – ಈ ವಿಷಯವನ್ನು ಪರಿಶೀಲಿಸಲಾಯಿತು ಎಂಬ ಉತ್ತರ ಕೊಡಲಾಗಿದೆ. ಏನು ಪರಿಶೀಲನೆ ಮಾಡಲಾಯಿತು?

**ಶ್ರೀ ಕೊಂಡಜ್ಜಿ ಬಸಪ್ಪ** – ಪ್ರತಿಯೊಬ್ಬರಿಗೂ ಒಂದು ದಿವಸಕ್ಕೆ ೫ ಗ್ಯಾಲರಿ ನಿರನ್ನೂದಗಿಸಿದರೆ ಒಂದು ವರ್ಷಕ್ಕೆ ೬ ಸಾವಿರ ರೂಪಾಯಿಗಳು ಖರ್ಚಾಗುತ್ತದೆ. ಇನಿಷಿಯಲ್ ಆಗಸ್ಟ್ ೩೦ ಸಾವಿರ ರೂಪಾಯಿಗಳಾಗುತ್ತದೆ. ಹೀಗೆ ಒಟ್ಟು ಒಂದು ಗ್ರಾಮಕ್ಕೆ ೩೬ ಸಾವಿರ ರೂಪಾಯಿಗಳು ಬೇಕು. ಈ ರೀತಿ ೭–೮ ಗ್ರಾಮ ಗಳಿಂದ ಹೆಚ್ಚು ಖರ್ಚು ಬರುತ್ತದೆ. ಆದುದರಿಂದ ಸಾಧ್ಯವಾಗುವುದಿಲ್ಲ ಎಂದು ತೀರ್ಮಾನಕ್ಕೆ ಬರಲಾಗಿದೆ.

**ಶ್ರೀ ಟಿ.ಕೆ ಕಂಬಳಿ** – ಪಂಚಾಯಿತಿಯವರು ತಮ್ಮ ಭಾಗದ ಹಣ ಕೊಡಲು ಒಪ್ಪಿದರೆ ಸೂಕ್ತ ಕ್ರಮ ಕೈಕೊಳ್ಳುತ್ತಿರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಪಂಚಾಯಿತಿಯವರು ಕಾಂಟ್ರಿಬ್ಯೂಷನ್ ಕೊಡಲು ಒಪ್ಪಿದರೆ ಯೋಚನೆ ಮಾಡುತ್ತೇವೆ.

**ಶ್ರೀ ಸಿ.ಎಸ್.ಹುಲ್ಕೋಟಿ** – ಈ ಕ್ಷೇತ್ರದಲ್ಲಿ ಚೌಳು ನೀರು ಬರುತ್ತದೆ. ಅದು ಕುಡಿಯುವುದಕ್ಕೆ ಬರುವುದಿಲ್ಲವೆಂಬುದು ತಮ್ಮ ಗಮನಕ್ಕೆ ಬಂದಿದೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಇದು ಸರ್ಕಾರದ ಗಮನಕ್ಕೆ ಬಂದಿದೆ. ಬೋರ್‌ವೆಲ್‌ಗಳನ್ನು ಕೊರೆಸಲು ಧಾರವಾಡದ ಎಕ್ಸಿಕ್ಯೂಟಿವ್ ಇಂಜಿನಿಯರ್‌ರವರು ಸಹ ಸಲಹೆಯನ್ನು ನೀಡಿದ್ದಾರೆ ಒಂದು ಪ್ರಕರಣದಲ್ಲಿ, ಬೋರ್‌ವೆಲ್ ಕೊರೆಯಲಾಗಿತ್ತು. ಆದರೆ ಹೆಚ್ಚಿನ ಮಳೆಯಿಂದಾಗಿ ಹಾಗೂ ತುಂಬಾ ನೀರು ಇದಕ್ಕೆ ಬಂದು, ಮಂದಿ ಕೆಲಸವನ್ನು ತೆಗೆದುಕೊಳ್ಳಲು ಆಗಲಿಲ್ಲ.

**ಶ್ರೀ ಎಮ್.ಆರ್. ಪಾಟೀಲ:** ಪಂಚಾಯತ್‌ಗಳನ್ನು ಸೇರಿಸಿಕೊಂಡು, ಈಗಲೂ ಗ್ರಾಮಗಳಿಗೆ ಪೈಪ್‌ಲೈನ್ ಹಾಕಲು ಆಗುವ ವೆಚ್ಚದ ಸರಿಯಾದ ಅಂದಾಜನ್ನು ಸರ್ಕಾರ ಮಾಡುವುದೇ? ಹಾಗೂ ಪಂಚಾಯತ್‌ಗಳಿಗೆ ಪ್ರಮಾಣ ವೆಚ್ಚವನ್ನು ಭರಿಸಲು ಅವರಿಗೆ ಸಾಮರ್ಥ್ಯವಿದೆಯೇ ಎಂದು ಕೇಳಬಹುದೇ.

**ಶ್ರೀ ಕೊಂಡಜ್ಜಿ ಬಸಪ್ಪ:** ಆ ನಿಟ್ಟಿನಲ್ಲಿ ಅವಶ್ಯಕ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆ ಎಂದು ಈ ಸದನದಲ್ಲಿ ಮಾನ್ಯ ಸದಸ್ಯರಿಗೆ ನಾನು ಭರವಸೆ ನೀಡುತ್ತೇನೆ.

**ಶ್ರೀ ಟಿ.ಕೆ.ಕಂಬಳಿ –** ಸಿಹಿ ನೀರಿನ ಬಾವಿಗಳು ಬರುವುದಿಲ್ಲವೆಂಬುದು ತಿಳಿದು ಬಂದಿದೆಯೆಂದು ಹೇಳಿದ್ದಿರಿ, ಸರ್ಕಾರದವರು ಇದಕ್ಕೇನು ಮಾಡುತ್ತಾರೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಬಾವಿಗಳನ್ನು ತೆಗೆಸಲು ಬಹು ಸಂಖ್ಯೆಯಲ್ಲಿ ಸ್ಕೀಮ್‌ಗಳಿವೆ. ಸ್ಥಳೀಯ ಜನರು ವಂತಿಗೆ ಕೊಡಲು ತಯಾರಿದ್ದರೆ, ನಾವು ಯಾವಾಗಲೂ ಇದನ್ನು ಮಾಡಲು ತಯಾರಿದ್ದೇವೆ. ಮೂರನೇ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ, ಪ್ರತಿಯೊಂದು ಗ್ರಾಮದಲ್ಲಿ ಒಂದು ಕುಡಿಯುವ ನೀರಿನ ಬಾವಿ, ಇರಬೇಕು ಹಾಗೂ ರಾಜ್ಯದಾದ್ಯಂತ ತುಂಬಾ ಬಾವಿಗಳು ಬೇಕಾಗುತ್ತದೆ ಎಂಬುದು ಸರ್ಕಾರದ ಅಭಿಲಾಷೆಯಾಗಿದೆ. ಭಾರತ ಸರ್ಕಾರದವರು ಈ ವಿಷಯದಲ್ಲಿ ಹಣಕಾಸಿನ ನೆರವನ್ನು ನೀಡಲು ಭರವಸೆ ನೀಡಿದ್ದಾರೆ. ನಾವು ಪರಿಣಿತ ಇಂಜಿನಿಯರ್ಸ್ ತಂಡವನ್ನು ನೇಮಕಮಾಡಿದ್ದು, ಅವರ ಸಂಪೂರ್ಣ ವೆಚ್ಚವನ್ನು ಕೇಂದ್ರವೇ ಭರಿಸುತ್ತದೆ. ಸ್ಕೀಮ್‌ನ ಮುಖಾಂತರ ನಾವು ತೂರಿಸುತ್ತೇವೆ.

**ಶ್ರೀ ಕೆ.ಪಿ.ರೇವಣ್ಣ ಸಿದ್ದಪ್ಪ** ಮೂರನೆಯ ಯೋಜನೆಯಲ್ಲಿ ಪ್ರತಿಯೊಂದು ಗ್ರಾಮಕ್ಕೂ ಒಂದೊಂದು ಬಾವಿ ಕೊಡುತ್ತೇವೆಂದು ಹೇಳಿದರು. ದೂರದಲ್ಲಿ ಚಿಕ್ಕ ಗ್ರಾಮಗಳಿದ್ದರೆ ಅವಕ್ಕೂ ಕೊಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಅವರು ಇಚ್ಛಿಸಿದಲ್ಲಿ ನಾವು ನೀಡುತ್ತೇವೆ.

**ಶ್ರೀ ಜ್.ವಿ.ಗೌಡ –** ಅವರಿಂದ ಬರಬೇಕಾದ ಕಾಂಟ್ರಿಬ್ಯೂಷನ್ ಬಾರದೇಯಿದ್ದರೆ ಹೇಗೆ ಮಾಡುತ್ತಿರಿ?

**ಶ್ರೀ ಕೊಂಡಜ್ಜಿ ಬಸಪ್ಪ:** ಎಲ್.ಡಿ. ಯೋಜನೆಯಡಿಯಲ್ಲಿ, ನಾವು ಬಾವಿಗಳಿಗೆ ನೀಡುತ್ತೇವೆ.

**ಶ್ರೀ ಜಿ.ವಿ. ಗೌಡ:** ಅವರು ತಮ್ಮ ಭಾಗದ ಶೇಕಡ ವೆಚ್ಚವನ್ನು ಭರಿಸಲು ಅಶಕ್ತರಾದರೆ, ಅವರು ಬಾವಿಗಳನ್ನು ಹೊಂದುವುದಿಲ್ಲ.

**ಶ್ರೀ ಕೊಂಡಜ್ಜಿ ಬಸಪ್ಪ:** ಶೇಕಡ 10 ರಿಂದ 15 ರಷ್ಟು ಕಡಿಮೆ ಮಾಡಲು ಪ್ರಯತ್ನಿಸುತ್ತಿದ್ದೇವೆ.

# ಸ್ಯಾನಿಟರಿ ಇನ್‌ಸ್ಪೆಕ್ಟರ್‌ಗಳ ಸೇವೆಗಳನ್ನು ಪ್ರಾಂತೀಕರಣಗೊಳಿಸುವ ಬಗ್ಗೆ

18ನೇ ಸೆಪ್ಟೆಂಬರ್ 1962

ಶ್ರೀ ದಯಾನಂದ. ಆರ್. ಕಾರ್ಕಳ:

ಅ. ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ, ಕುಂದಾಪುರ ಮತ್ತು ಪುತ್ತೂರು ಪಂಚಾಯತ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ಯಾನಿಟರಿ ಇನ್‌ಸ್ಪೆಕ್ಟರ್‌ಗಳ ಸೇವೆಗಳನ್ನು ಪ್ರಾಂತೀಕರಣಗೊಳಿಸುವುದನ್ನು ಕೇಳುವ ಮನವಿಗಳನ್ನು ಅವರು ಸ್ವೀಕರಿಸಿದ್ದಾರೆಯೇ?

ಆ. ಹೌದು ಎಂದಲ್ಲಿ, ಇದರ ಪರವಾಗಿ ಅವರು ತೆಗೆದುಕೊಂಡ ಕ್ರಮಗಳು.

**ಶ್ರೀ ಕೊಂಡಜ್ಜಿ ಬಸಪ್ಪ:** (ಸಹಕಾರ ಶಾಖೆಯ ಉಪಮಂತ್ರಿ)(ಸಹಕಾರ ಮತ್ತು ಅಭಿವೃದ್ಧಿ ಶಾಖೆಯ ಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರ ಪರವಾಗಿ)

ಅ. ಹೌದು ಆ. ವಿಷಯವು ಪರಿಶೀಲನೆಯಲ್ಲಿದೆ.

**ಶ್ರೀ ದಯಾನಂದ್ ಆರ್. ಕಾರ್ಕಳ :** ಈ ನೌಕರರ ಸರ್ವಿಸ್ಸುಗಳನ್ನು ಪ್ರಾಂತೀಕರಣ ಗೊಳಿಸಲು ಇರುವ ತೊಂದರೆಯೇನು?

**ಶ್ರೀ ಕೊಂಡಜ್ಜಿ ಬಸಪ್ಪ :** ಏನೂ ಇಲ್ಲ. ಈಗಿರುವ ಹಾಗೆ ಲೋಕಲ್ ಬಾಡೀಸ್ ಗೆ ಅಬ್ಸರ್ಬ್ ಮಾಡಬಹುದು. ಅವರು ಸರ್ಕಾರಿ ನೌಕರರಾಗಿರುವುದರಿಂದ ಖಾಯಮಾಗಿರುವವರ ವಿಚಾರವಲ್ಲಿ ಪ್ರಪೋಸಲ್ ಬಂದಿದೆ. ಡಿ.ಪಿ.ಐ. ಎಗ್ಸಾಮಿನ್ ಮಾಡುತ್ತಿದ್ದಾರೆ.

**ಶ್ರೀ ಸಂಜೀವನಾಥ ಐತಾಳ:** ತೀರ್ಮಾನಗಳನ್ನು ಬೇಗನೇ ತೆಗೆದುಕೊಳ್ಳದೇ, ವಿಷಯಗಳನ್ನು ಪರಿಶೀಲನೆಯಲ್ಲಿಡುವ ಸರ್ಕಾರಕ್ಕೆ ಇರುವ ತೊಂದರೆ ಏನು ಎಂದು ನಾನು ತಿಳಿದುಕೊಳ್ಳಬಹುದಾ?

**ಶ್ರೀ ಕೊಂಡಜ್ಜಿ ಬಸಪ್ಪ :** ಏನೂ ಇಲ್ಲ. ಸರ್ಕಾರದಲ್ಲಿ ಒಂದು ಪ್ರಪೋಸಲ್ ಬಂದರೆ ಹಣಕಾಸಿನ ಇಲಾಖೆ ಕೇಳಬೇಕು, ಜನರಲ್ ಅಡ್ಮಿನಿಸ್ಟ್ರೇಶನ್ ಇಲಾಖೆ ಕೇಳಬೇಕು. ಕೇಳಿ ಆ ಇಲಾಖೆಗಳ ಅಭಿಪ್ರಾಯ ತೆಗೆದುಕೊಂಡು ಅನಂತ ತೀರ್ಮಾನ ಮಾಡಲು ಸ್ವಲ್ಪ ತಡವಾಗಿದೆ.

**ಶ್ರೀ ಸಂಜೀವನಾಥ ಐತಾಳ:** ಜಿ.ಎ.ಡಿ. ಯಿಂದ ಹಣಕಾಸು ವಿಭಾಗಕ್ಕೆ ಅಲ್ಲಿಂದ ಸಹಕಾರ ವಿಭಾಗಕ್ಕೆ ಮತ್ತು ಈ ವಿಷಯದಲ್ಲಿ ಅಂತಿಮ ಆದೇಶಗಳನ್ನು ನೀಡಲು ಎಷ್ಟು ದಿನಗಳು ಬೇಕಾಗುವುದು?

**ಶ್ರೀ ಕೊಂಡಜ್ಜಿ ಬಸಪ್ಪ:** ಇನ್ನೆರಡು ತಿಂಗಳುಗಳಲ್ಲಿ ಈ ವಿಷಯಗಳನ್ನು ಮುಗಿಸುತ್ತೇವೆ ಎಂದು ನನಗೆ ನಂಬಿಕೆ ಇದೆ.

## ವಿಸ್ತರಣಾ ಅಧಿಕಾರಿಗಳಾಗಿ ಗ್ರಾಮಸೇವಕರಿಗೆ ಬಡ್ತಿ ನೀಡುವ ಬಗ್ಗೆ

21ನೇ ಏಪ್ರಿಲ್ 1965

**ಶ್ರೀ ಸಂಜೀವನಾಥ ಐತಾಳ (ಸೂರತ್ಕಲ್):**

ಅ. 1960–61 ಮತ್ತು 1961–62ರ ಅವಧಿಯಲ್ಲಿ ಪಂಚಾಯತ್‌ನ ವೃಂದ ವಿಸ್ತರಣಾ ಅಧಿಕಾರಿಗಳಾಗಿ ಬಡ್ತಿ ನೀಡಿರುವ ಮೈಸೂರು ವಿಭಾಗದ ಗ್ರಾಮ ಸೇವಕ ಸಂಖ್ಯೆ.

ಆ. ಅಂತಹ ಹುದ್ದೆಗಳ ಬಡ್ತಿಗೆ ಸಂಬಂಧಿಸಿದ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಅವರಲ್ಲಿ ಬಡ್ತಿ ಹೊಂದಿರುವ ವ್ಯಕ್ತಿಗಳ ಸಂಖ್ಯೆ.

ಇ. ನಿಗದಿತ ಅರ್ಹತೆಗಳಿಲ್ಲದಿರುವ 16 ಜೂನಿಯರ್ ಗ್ರೇಡ್ ಗ್ರಾಮ ಸೇವಕಿ ಪಂಚಾಯತ್ ವಿಸ್ತರಣಾ ಅಧಿಕಾರಿಗಳಾಗಿ ಬಡ್ತಿ ನೀಡಿರುವುದು ವಾಸ್ತವ ವಲ್ಲವೇ?

ಈ. ಹೌದು ಎಂದಲ್ಲಿ, ಅಂತಹ ಬಡ್ತಿಳಿಗಿರುವ ನಿಯಮ ಮತ್ತು ನಿಬಂಧನೆಗಳಿಗೆ ವಿರುದ್ಧವಾಗಿ ಮಾಡಿರುವುದಕ್ಕೆ ಸಂಬಂಧಿಸಿದವರಿಗೆ ಇದ್ದಂತಹ ಪರಿಸ್ಥಿತಿ.

ಉ. ಈ ಬಡ್ತಿಗಳಿಗೆ ವಿರುದ್ಧವಾಗಿ ಮೇಲ್ಮನವಿ ಸಲ್ಲಿಸಿರುವವರ ಸಂಖ್ಯೆ ಹಾಗೂ ಈ ಮೇಲ್ಮನವಿಗಳಿಗೆ ಸರ್ಕಾರ ತೆಗೆದುಕೊಂಡಿರುವ ಕ್ರಮ.

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪ–ಮಂತ್ರಿ):**

ಅ. 1960–61 ಮತ್ತು 1961–62 ರ ಅವಧಿಯಲ್ಲಿ ಮೈಸೂರು ವಿಭಾಗದ 22 ಗ್ರಾಮ ಸೇವಕರಿಗೆ (ಪಂಚಾಯತ್) ವಿಸ್ತರಣಾ ಅಧಿಕಾರಿಗಳಾಗಿ ಬಡ್ತಿ ನೀಡಲಾಗಿದೆ.

ಆ. ಈ ಬಡ್ತಿಗಳನ್ನು ಮಾಡುವಾಗ ವೃಂದ ಮತ್ತು ನೇಮಕಾತಿ ನಿಯಮಗಳು ವಿಸ್ತರಣಾ ಅಧಿಕಾರಿ (ಪಂಚಾಯತ್) ಹುದ್ದೆಗೆ ನಿಯಮಗಳನ್ನು ನಿಗದಿಪಡಿಸಿರಲಿಲ್ಲ. ಇದೇ ಉದ್ದೇಶಕ್ಕಾಗಿ ತಾತ್ಕಾಲಿಕ ನಿಯಮಗಳನುಸಾರ ಅಳವಡಿಸಿಕೊಂಡಿರುವ ಹಾಗೂ ಸಿನಿಯಾರಿಟಿ ಕಮ್–ಮೆರಿಟ್ ಆಧಾರದ ಮೇಲೆ ವಿಭಾಗದ ಮುಖ್ಯಸ್ಥರು ಮಾಡಿರುವ ಶಿಫಾರಸ್ಸಿನ ಅನುಸಾರ ಈ ಬಡ್ತಿಗಳನ್ನು ಮಾಡಿರುವುದು.

ಇ. ಇಲ್ಲ

ಈ. (ಇ) ಯ ದೃಷ್ಟಿಯಿಂದ ಉದ್ಭವವಾಗುವುದಿಲ್ಲ.

ಉ. ಮೈಸೂರು ವಿಭಾಗದ ಗ್ರಾಮಸೇವಕರಿಂದ 9 ಮನವಿಗಳನ್ನು ಸ್ವೀಕರಿಸಿದ್ದೇವೆ. ಈ ಮೇಲನ್ಮವಿಗಳು ಪರಿಕ್ಷೀಸಿದ ನಂತರ 3 ಗ್ರಾಮ ಸೇವಕಿಯವರಿಗೆ ವಿಸ್ತರಣಾ ಅಧಿಕಾರಿ (ಪಂಚಾಯತ್)ಗಳಾಗಿ ಬಡ್ತಿ ನೀಡಲಾಗಿದೆ.

**ಶ್ರೀ ಸಂಜೀವನಾಥ ಐತಾಳ:** (ಇ) ಗೆ ಪೂರಕವಾಗಿ: ಆ ನಿಯಮಗಳು ಯಾವವು?

**ಶ್ರೀ ಕೊಂಡಜ್ಜಿ ಬಸಪ್ಪ** – ನಿಯಮಗಳು ಯಾವುವೆಂದರೆ, ಒಟ್ಟು ಹುದ್ದೆಗಳಲ್ಲಿ ಶೇಕಡ 55 ರಷ್ಟನ್ನು ಸಿನಿಯಾರಿಟಿ ಕಮ್ ಮೆರಿಟ್ ಆಧಾರದ ಮೇಲೆ ಗ್ರಾಮ ಸೇವಕರನ್ನು ಹಾಗೂ ಉಳಿದ ಹುದ್ದೆಗಳನ್ನು ಕಂದಾಯ ಇಲಾಖೆಯಿಂದ ತುಂಬಿಕೊಳ್ಳಬೇಕು.

**ಶ್ರೀ ಸಂಜೀವನಾಥ ಐತಾಳ** – ದಕ್ಷಿಣ ಕನ್ನಡ ಗ್ರಾಮ ಸೇವಕರಿಗೆ ಕೊಡಬೇಕಾಗಿರುವ ಬಡ್ತಿಯನ್ನು ಕೊಟ್ಟಿಲ್ಲ ಎನ್ನುವುದು ವಾಸ್ತವ ವಿಷಯವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಅದು ಸರಿಯಲ್ಲ.

**ಶ್ರೀ ಸಂಜೀವನಾಥ ಐತಾಳ** – ಅವರಲ್ಲಿ ಮೂರು ಜನರಿಗೆ ಬಡ್ತಿ ನೀಡಲಾಗಿದೆ ಎಂದು ನೀವು ಹೇಳಿದ್ದೀರಿ. ಈ ಬಡ್ತಿಗಳ ವಿರುದ್ಧ ಅವರಲ್ಲಿ ಕೆಲವರು ರಿಟ್ ಅರ್ಜಿಗಳನ್ನು ಹಾಕಿದ್ದಾರೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಸರ್ಕಾರಕ್ಕೆ ಮನವಿ ಸಲ್ಲಿಸಿರುವ ಒಂಭತ್ತು ವ್ಯಕ್ತಿಗಳಲ್ಲಿ ವಿಸ್ತರಣಾ ಅಧಿಕಾರಿಗಳನ್ನಾಗಿ ಮೂರು ಜನಕ್ಕೆ, ಸಮಾಜ ಶಿಕ್ಷಣ ಅಧಿಕಾರಿಗಳನ್ನಾಗಿ 5 ಜನಕ್ಕೆ ಬಡ್ತಿ ನೀಡಲಾಗಿದ್ದು, ಅದರಲ್ಲಿ ಇಬ್ಬರಿಗೆ ಮತ್ತೇ ಪಂಚಾಯತ್ ವಿಸ್ತರಣಾ ಅಧಿಕಾರಿಗಳಾಗಿ ಬಡ್ತಿ ನೀಡಲಾಗಿದೆ.

**ಶ್ರೀ ಸಂಜೀವನಾಥ ಐತಾಳ** – ರಿಟ್ ಅರ್ಜಿಗಳನ್ನು ಹಾಕಿದ ನಂತರ ಈ ಬಡ್ತಿಗಳನ್ನು ನೀಡಿರುವುದು ವಾಸ್ತವ ವಿಷಯವಲ್ಲವೇ?

**ಶ್ರೀ ವೈ. ಮಂಜಯ್ಯ ಶೆಟ್ಟಿ** – ಅದು ಸರಿಯಲ್ಲ.

**ಶ್ರೀ ಎ. ಕೃಷ್ಣ ಶೆಟ್ಟಿ** – ಮೈಸೂರು ವಿಭಾಗೀಯ ಕಮೀಶನ್‌ರವರು ಅವರು ಅಳವಡಿಸಿಕೊಂಡಿರುವ ನಿಯಮಗಳು ಇತರೆ ವಿಭಾಗೀಯ ಕಮೀಶನ್‌ರವರು ಅಳವಡಿಸಿಕೊಂಡಿರುವ ನಿಯಮಗಳಗಿಂತ ಭಿನ್ನವಾಗಿವೆ ಏಕೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಅದು ಸರಿಯಲ್ಲ ಮಾಡಿಕೊಂಡಿರುವ ನಿಯಮಗಳು ರಾಜ್ಯಾದ್ಯಾಂತ ಏಕರೂಪವಾಗಿ ಅನ್ವಯಿಸುತ್ತಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಶೇಕಡ 50 ರಷ್ಟರಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎಷ್ಟು ಜನರು ಬಡ್ತಿ ಹೊಂದಿದ್ದಾರೆ?

**ಶ್ರೀ ಕೊಂಡಜ್ಜಿ ಬಸಪ್ಪ** – ನಾನು ಮೈಸೂರು ವಿಭಾಗದ ಮಾಹಿತಿಯನ್ನು ನೀಡುತ್ತಿದ್ದೇನೆ ಹಾಗೂ ಇದು 25.

**ಶ್ರೀಮತಿ ಕೆ. ಎಸ್. ನಾಗರತ್ನಮ್ಮ** – ಗ್ರಾಮ ಸೇವಕರಲ್ಲಿ ಎಷ್ಟು ಜನಕ್ಕೆ ಪ್ರಮೋಷನ್ ಕೊಟ್ಟಿದ್ದೀರ?

**ಶ್ರೀ ಕೊಂಡಜ್ಜಿ ಬಸಪ್ಪ** – ಈಗಿರುವವರ ಪೈಕಿ ಯಾರು ಇಲ್ಲ ಎಂದು ಕಾಣುತ್ತದೆ.

**ಶ್ರೀ ಬಿ. ನಂಜಪ್ಪ** – ಸರ್ಕಾರದ ಮುಂದೆ ಎಷ್ಟು ಬಡ್ತಿ ಪ್ರಕರಣಗಳು ಪೆಂಡಿಂಗ್‌ನಲ್ಲಿವೆ.

**ಶ್ರೀ ಕೊಂಡಜ್ಜಿ ಬಸಪ್ಪ** – ನನಗೆ ನೋಟೀಸುಬೇಕು.

**ಶ್ರೀ ಕೃಷ್ಣ ಶೆಟ್ಟಿ** – ಸರ್ಕಾರವು ಬಡ್ತಿಯ ಮೂಲಕ ಸಾಕಷ್ಟು ಸಂಖ್ಯೆಯಲ್ಲಿ ಗ್ರಾಮ ಸೇವಕರನ್ನು ಅಬ್‌ಸರ್ಬ್(ಸೇರಿಸಿಕೊಂಡಿಲ್ಲ) ಮಾಡಿಕೊಂಡಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಆ ನಿಯಮಗಳಲ್ಲಿ ಯಾರಿಗೆ ಬರಬೇಕಾಗಿತ್ತೋ ಅವರೆಲ್ಲರೂ ಬಡ್ತಿ ಪಡೆದಿದ್ದಾರೆ.

**ಶ್ರೀ ಮಂಜಯ್ಯ ಶೆಟ್ಟಿ** – ದಕ್ಷಿಣ ಕನ್ನಡದಲ್ಲಿ ಪಂಚಾಯತ್ ವಿಸ್ತರಣಾ ಅಧಿಕಾರಿಗಳಾಗಿ ಬಡ್ತಿ ಪಡೆದಿರುವ ಗ್ರಾಮ ಸೇವಕರಲ್ಲಿ ಕೆಲವರು ಆ ಬಡ್ತಿಯನ್ನು ಪಡೆಯಲು ಅರ್ಹರಾಗಿದ್ದು ಸರ್ಕಾರಕ್ಕೆ ಮನವಿ ಸಲ್ಲಿಸಿದವರಿಗಿಂತ ಜೂನಿಯರ್‌ಗಳು ಎಂದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಪೂರ್ಣವಾಗಿ ಜ್ಯೇಷ್ಠತೆಯ ಆಧಾರದ ಮೇಲೆ ಬಡ್ತಿಯನ್ನು ಮಾಡಲಾಗಿಲ್ಲ. ಮೆರಿಟ್‌ನ್ನು ಸಹ ಪರಿಗಣಿಸಲಾಗುತ್ತದೆ. ಮೆರಿಟ್ ಅಂದರೆ ಕನಿಷ್ಟ ಮೂರು ವರ್ಷಗಳ ತೃಪ್ತಿದಾಯಕ ಸೇವೆ, ವ್ಯಕ್ತಿಯ, ನಡತೆ, ಪಂಚಾಯತ್ ಕೆಲಸಗಳಲ್ಲಿ ವಿಶೇಷ ಅನುಭವ ಇತ್ಯಾದಿ.

ಶ್ರೀ **ವೈ. ಮಂಜಯ್ಯ ಶೆಟ್ಟಿ** – ಪ್ರಮೋಶನ್/ಬಡ್ತಿ ಪಡೆಯುವಲ್ಲಿ ಕೆಲವು ಗ್ರಾಮಸೇವಕರು ಕೆಲವು ಭ್ರಷ್ಟಾಚಾರ ಅಭ್ಯಾಸಗಳನ್ನು ಅನುಸರಿಸಿದ್ದಾರೆ ಎಂದು ದಕ್ಷಿಣ ಕನ್ನಡ ಗ್ರಾಮ ಸೇವಕರು ಮಾಡಿರುವ ಮನವಿಗಳನ್ನು ಸರ್ಕಾರ ಸ್ವೀಕರಿಸಿದೆಯೇ?

ಶ್ರೀ **ಕೊಂಡಜ್ಜಿ ಬಸಪ್ಪ** – ನನ್ನ ಬಳಿ ಮಾಹಿತಿಯಿಲ್ಲ.

ಶ್ರೀ **ವೈ. ಮಂಜಯ್ಯ ಶೆಟ್ಟಿ** – ವಿಭಾಗೀಯ ಕಮೀಶನರ್ ಮಾಡಿರುವ ಶಿಫಾರಸ್ಸುಗಳ ಮೇಲೆ ಆಯ್ಕೆ ಮಾಡಿರುವುದು ವಾಸ್ತವ ವಿಷಯವಲ್ಲವೇ?

ಶ್ರೀ **ಕೊಂಡಜ್ಜಿ ಬಸಪ್ಪ** – ಶಿಫಾರಸ್ಸುಗಳನ್ನು ಮಾಡುವಾಗ, ವಿಭಾಗೀಯ ಕಮೀಶನ್‌ರವರು, ಈ ಎಲ್ಲಾ ನಿಯಮಗಳನ್ನು ಪರಿಗಣನೆಗೆ ತೆಗೆದುಕೊಂಡಿದ್ದಾರೆ?

ಶ್ರೀ **ಸಂಜೀವನಾಥ ಐತಾಳ** – ತಾತ್ಕಾಲಿಕ ನಿಯಮಗಳಾವುವು?

ಶ್ರೀ **ಕೊಂಡಜ್ಜಿ ಬಸಪ್ಪ** – ನಾನು ಅವುಗಳನ್ನು ಹೇಳಿದ್ದೇನೆ.

ಶ್ರೀ **ಎ. ಕೃಷ್ಣ ಶೆಟ್ಟಿ** – ತುಳು ಭಾಷೆಯನ್ನು ಮಾತಾನಾಡುವ ಗ್ರಾಮ ಸೇವಕರನ್ನು ದಕ್ಷಿಣ ಕನ್ನಡದಿಂದ ವರ್ಗಾವಣೆ ಮಾಡಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ **ಕೊಂಡಜ್ಜಿ ಬಸಪ್ಪ** – ಅದು ಬೇರೆ ಪ್ರಶ್ನೆಯಾಗಿದೆ.

ಶ್ರೀ **ಸಂಜೀವನಾಥ ಐತಾಳ** – ಇನ್ನು ಮುಂದೆ ಅವರು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಬದ್ಧರಾಗುತ್ತಾರೆಯೇ?

ಶ್ರೀ **ಕೊಂಡಜ್ಜಿ ಬಸಪ್ಪ** – ಇನ್ನು ಮುಂದೆ ಈ ನಿಯಮಗಳನ್ನು ಅನ್ವಯಿಸಲಾಗುತ್ತದೆ.

ಶ್ರೀ **ಗಂಜಿ ವೀರಪ್ಪ** – ಗ್ರಾಮ ಸೇವಕಿಯರಿಗೆ ಬಡ್ತಿ ನೀಡಿಲ್ಲ ಏಕೆ? ಅವರು ಸಿಗುತ್ತಿಲ್ಲವೇ ಅಥವಾ ಸೂಕ್ತವಿಲ್ಲವೆಂದು ಕಂಡುಬಂದಿಲ್ಲವೇ?

ಶ್ರೀ **ಕೊಂಡಜ್ಜಿ ಬಸಪ್ಪ** – ಬಹುಶಃ, ಅವರು ಸಿಗುತ್ತಿಲ್ಲ.

ಶ್ರೀ **ವೈ. ಮಂಜಯ್ಯ ಶೆಟ್ಟಿ** – ಗ್ರಾಮ ಸೇವಕರ ಜೇಷ್ಠತೆಯ ಪಟ್ಟಿಯನ್ನು ಅಂತಿಮಗೊಳಿಸುತ್ತಿರುವ ದೃಷ್ಟಿಯಿಂದ ಸರ್ಕಾರವು ಬಡ್ತಿಯನ್ನು ಪಡೆಯಲು ಯಾರು ಅರ್ಹರಾಗಿರುವುರೋ ಅವರಿಗೆ ನ್ಯಾಯವನ್ನು ಒದಗಿಸಲು ನೇಮಕಾತಿಗಳನ್ನು ಪರಿಷ್ಕೃತಗೊಳಿಸುತ್ತದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಈ ಪ್ರಮೋಶನ್‌ಗಳು ತಾತ್ಕಾಲಿಕವಾಗಿವೆ ಹಾಗೂ ಶಾಶ್ವತವಲ್ಲ.

**ಶ್ರೀ ಸಿ. ಜೆ. ಮುಕ್ಕಣ್ಣಪ್ಪ** – ಹೆಣ್ಣು ಮಕ್ಕಳೇ ಇಲ್ಲವೇ ಪ್ರಮೋಶನ್ ಕೊಡುವುದಕ್ಕೆ ಅರ್ಹತೆ ಇಲ್ಲ ಎಂತಲೇ, ಅರ್ಜಿ ಬಂದಿಲ್ಲ ಎಂತಲೇ, ಅದೇನು ಸಮಾಚಾರ ಅವರು ಸಿಗುತ್ತಿಲ್ಲ ಎಂದರಲ್ಲಾ, ಸರ್ಕಾರವು ಯಾವ ವರದಿಯನ್ನು ಹೊಂದಿದೆ?

**ಶ್ರೀ ಕೊಂಡಜ್ಜಿ ಬಸಪ್ಪ** – ಅವರು ಸಿಗುತ್ತಿಲ್ಲವೆಂದು ನಾನು ಹೇಳಿದ್ದರ ಅರ್ಥವೆಂದರೆ, ಅರ್ಹತೆ ಇರುವ ಗ್ರಾಮ ಸೇವಕಿಯರು ಇಲ್ಲ ಎಂದು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಗ್ರಾಮ ಸೇವಕಿಯರಾಗಿ ಕಾರ್ಯನಿರ್ವಹಿಸಲು ಅರ್ಹತೆ ಇರುವುದರಿಂದ ಅರ್ಜಿಗಳನ್ನು ಕರೆಯಲು ಸರ್ಕಾರವು ಚಿಂತಿಸುವುದೇ.

**ಶ್ರೀ ಕೊಂಡಜ್ಜಿ ಬಸಪ್ಪ** – ಅದನ್ನು ಪರಿಗಣಿಸುತ್ತೇವೆ.

**ಮಾನ್ಯ ಸದಸ್ಯರು** – ಉಳಿದ ಆರು ಮಂದಿಗೆ ಏನಾಯಿತು?

**ಶ್ರೀ ಕೊಂಡಜ್ಜಿ ಬಸಪ್ಪ** – ಇತ್ತೀಚೆಗೆ 5 ಜನಕ್ಕೆ ಬಡ್ತಿ ನೀಡಲಾಗಿದೆ. ಅವರಲ್ಲಿ ಮೂರು ಜನರನ್ನು ಸಮಾಜ ಶಿಕ್ಷಣ ಅಧಿಕಾರಿಗಳು ಮತ್ತು ಇಬ್ಬರನ್ನು ವಿಸ್ತರಣಾ ಅಧಿಕಾರಿಗಳು ನೇಮಕಾತಿ ಮಾಡಲಾಗಿದೆ. ಅವರಲ್ಲಿ ಒಬ್ಬರನ್ನು ತೆಗೆದುಕೊಂಡಿಲ್ಲ, ಏಕೆಂದರೆ ಜ್ಯೇಷ್ಠತೆಯು ತುಂಬಾ ಕಡಿಮೆ ಇದೆ.

**ಸಭಾಧ್ಯಕ್ಷರು:** 8000/– ರೂಪಾಯಿಗಳಿಗೆ, ದಿನಾಂಕವನ್ನು ನೀವು ತೆಗೆದುಕೊಂಡಿದ್ದೀರಾ. ಇದನ್ನು ಮಂತ್ರಿಯವರಿಗೆ ಕೂಡಿ, ಅವರು ಮಾಹಿತಿಯನ್ನು ಒದಗಿಸುತ್ತಾರೆ.

**ಶ್ರೀ ಕೊಂಡಜ್ಜಿ ಬಸಪ್ಪ:** ಇವರ ವಿವರಗಳು ಈಗ ನನ್ನಲ್ಲಿಲ್ಲ. ನಾನು ನಿಶ್ಚಿತವಾಗಿ ಉತ್ತರ ಪಡೆದು ನೀಡುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ದಿನಾಂಕವನ್ನು ಪಡೆದು ಕೊಂಡರೆ, ನಾನು ನಿಶ್ಚಿತವಾಗಿ ಮಾಹಿತಿಯನ್ನು ಪಡೆಯುತ್ತೇನೆ ಹಾಗೂ ಮಾನ್ಯ ಸದಸ್ಯರಿಗೆ ಇದನ್ನು ಕೊಡುತ್ತೇನೆ.

**ಸಭಾಧ್ಯಕ್ಷರು:** ದಯಮಾಡಿ ದಿನಾಂಕ ಪಡೆಯಿರಿ ಹಾಗೂ ಇದನ್ನು ಮಂತ್ರಿಯವರಿಗೆ ಕಳುಹಿಸಿ.

**ಶ್ರೀ ಕೊಂಡಜ್ಜಿ ಬಸಪ್ಪ:** ಅಲ್ಲಿ 13 ಸೊಸ್ಯೈಟಿಗಳು ಇದ್ದು, ಇದರಲ್ಲಿ ಅಪಾದಿಸಿರುವ ದುರುಪಯೋಗ/ದುರ್ಬಳಕೆಯಾಗಿರುವುದು.

**ಸಭಾಧ್ಯಕ್ಷರು:** ಈ ರೀತಿಯ ವೈಡ್ ಪ್ರಶ್ನೆಯಲ್ಲ,

**ಶ್ರೀ ಎಸ್.ಕರಿಯಪ್ಪ :** ಹಲಸೂರು ಸೊಸೈಟಿಯಲ್ಲಿ ಎಷ್ಟು ಹಣ ಮಿಸ್ ಅಪ್ರೊಪ್ರಿಯೇಟ್ ಆಗಿದೇ?

**ಶ್ರೀ ಎಸ್.ಕರಿಯಪ್ಪ :** ಮಿಸ್ ಅಪ್ಲಿಕೇಶನ್ ಆಫ್ ಫಂಡ್ಸ್ ಎಂದು ಹೇಳಿರುವುದರಲ್ಲಿ ಒಬ್ಬ ಮೆಂಬರು ಕಾಂಪೋಸ್ಟು ಪಿಟ್ಟಿಗಾಗಿ ೫೦೦೦ ರೂಪಾಯಿಗಳಷ್ಟು ಹಣ ಪಡೆದಿರುವುದು ನಿಜವೆ?.

**ಶ್ರೀ ಕೊಂಡಜ್ಜಿ ಬಸಪ್ಪ** – ಇದರ ವಿವರಗಳು ನನ್ನಲ್ಲಿಲ್ಲ.

# ಜಿಲ್ಲೆಯಲ್ಲಿನ ನೇಕಾರರ ಸಹಕಾರ ಸಂಘಗಳು

**2ನೇ ಮಾರ್ಚ್ 1965**

**ಶ್ರೀ ಎ. ಜೆ. ದೊಡ್ಡಮೇಟಿ:**

a. ಧಾರವಾಡ ಮತ್ತು ಬಿಜಾಪುರ ಜಿಲ್ಲೆಯಲ್ಲಿರುವ ನೇಕಾರರ ಸಹಕಾರ ಸಂಘಗಳ ಸಂಖ್ಯೆ

b. 01.04.1964 ರಿಂದ ಈ ಸಂಘಗಳಿಗೆ ಸರ್ಕಾರದಿಂದ ಬರಬೇಕಾಗಿರುವ ರಿಬೇಟ್ ಹಣ. (ಪ್ರತಿಯೊಂದು ಸಂಘಕ್ಕೆ ಬರಬೇಕಾಗಿರುವ ಹಣದ ಸಂಪೂರ್ಣ ಮಾಹಿತಿ ಕೊಡಬಹುದು)

c. ಆ ಹಣವನ್ನು ಸಂದಾಯ ಮಾಡುವಲ್ಲಿ ಆಗಿರುವ ವಿಳಂಬಕ್ಕೆ ಕಾರಣಗಳು.

d. ತಿಳಿಸಿರುವಂಥ ರಿಬೇಟ್ ಹಣವನ್ನು ಸಂದಾಯ ಮಾಡಲು ಬೇಕಾಗಿರುವ ಕಾಲಾವಧಿ ?

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

a. 183–ಕೆಳಗೆ ತಿಳಿಸಿರುವಂತೆ

ಧಾರವಾಡ ಜಿಲ್ಲೆ = 66

ಬಿಜಾಪುರ ಜಿಲ್ಲೆ = 117.

b. ವೈಡ್ ಹೇಳಿಕೆ ಸದನದ ಮುಂದಿದೆ. ಪ್ರತಿಯನ್ನು ಮೈಸೂರು ಲೆಜಿಸ್ಲೇಟಿವ್ ಗ್ರಂಥಾಲಯಕ್ಕೆ ನೀಡಲಾಗಿದೆ. ವೈಡ್ ಸಂಖ್ಯೆ. 17, ದಿನಾಂಕ 27.03.65

c. ಹಣ ಬೇಕಾಗಿರುವುದರಿಂದ

d. ಮಾರ್ಚ್ 1965ರ ಕೊನೆಯ 50% ಲೆಕ್ಕ ಪರಿಶೀಲನೆಯ ನಂತರ ಉಳಿದದ್ದು .

**ಶ್ರೀ ಕೊಂಡಜ್ಜಿ ಬಸಪ್ಪ** – ಅದಕ್ಕೆ ಕೊಡತಕ್ಕ ಹಣ ಪೂರ್ತಿ ಕೇಂದ್ರ ಸರ್ಕಾರದಿಂದ ಬರುತ್ತದೆ. ಇಂಥಹ ಯೋಜನೆಗಳಿಗೆ ಇಷ್ಟಿಷ್ಟು ಹಣ ಎಂದು ಬರುತ್ತದೆ. ಅದಕ್ಕೆ ಸಾಕಾಗುವಷ್ಟು ಹಣ ಇರಲಿಲ್ಲ. ಕ್ಲೈಮ್ಸ್ ವಿಪರೀತವಾಗಿತ್ತು. ಇತ್ತೀಚೆಗೆ ಅದಕ್ಕೆ ಸರ್ಕಾರದವರು ೭ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿದ್ದಾರೆ. ಈ ವರ್ಷದ ಅಂತ್ಯದಲ್ಲಿ ಎಂದರೆ ೩೧ ನೇ

ತಾರೀಖು ಅದರಲ್ಲಿ ಅರ್ಧ ಭಾಗವನ್ನು ಕೊಡಬೇಕೆಂದು ತೀರ್ಮಾನ ಮಾಡಿದ್ದೇವೆ. ಇನ್ನು ಉಳಿದ ಹಣವನ್ನು ಕೊಡುವ ವಿಷಯದಲ್ಲಿ ಮುಂದಿನ ವರ್ಷ ಆಲೋಚನೆ ಮಾಡೋಣ ಎಂದು ಕೊಂಡಿದ್ದೇವೆ.

**ಶ್ರೀ ಎ.ಜೆ.ದೊಡ್ಡ ಮೇಟಿ –** ಈ ಸಹಕಾರ ಸಂಘಗಳಿಗೆ ಸರಕಾರದವರು ಕೊಡಬೇಕಾಗಿರುವ ರಿಬೇಟ್ ಹಣ ಒಂದು ಲಕ್ಷ ೪೮ ಸಾವಿರ ರೂಪಯಿಗಳು ಎಂದು ಹೇಳಿದ್ದೀರಿ. ಈಗ ಅದರ ಬಗ್ಗೆ ೭ ಲಕ್ಷ ರೂಪಾಯಿಗಳನ್ನು ಸ್ಯಾಂಕ್ಷನ್ ಆಗಿದೆ ಎಂದು ಹೇಳಿದಿರಿ, ಅವರಿಗೆ ಕೊಡಬೇಕಾಗಿರತಕ್ಕ ಮೊತ್ತವನ್ನು ನೋಡಿದರೆ ಬಹಳ ಕಡಿಮೆ ಇದೆ, ಇದರಲ್ಲಿ ಏನೋಸ್ವಲ್ಪ ವ್ಯತ್ಯಾಸ ಕಾಣುತ್ತಿದೆ. ಅಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ –** ನಾನು ಹೇಳಿದ ಮೊತ್ತ ಪೂರ್ತಿ ರಾಜ್ಯಕ್ಕೆ ಸಂಬಂಧಪಟ್ಟದ್ದು, ಮಾನ್ಯ ಸದಸ್ಯರು ಕೇಳಿದ್ದು ಎರಡು ಡಿಸ್ಟ್ರಿಕ್ಟುಗಳಿಗೆ ಸಂಬಂಧಪಟ್ಟದ್ದು.

**ಶ್ರೀ ಎ.ಜೆ.ದೊಡ್ಡಮೇಟಿ –** ಈ ಸಹಕಾರ ಸಂಘಗಳಿಗೆ ರಿಬೇಟ್ ಕೊಡುವ ಸಂಬಂಧದಲ್ಲಿ ಕೇಂದ್ರ ಸರಕಾರದವರು ಕೆಲವು ಫಂಡು ಕೊಡುತ್ತಾರೆ, ರಾಜ್ಯ ಸರ್ಕಾರದವರು ಕೆಲವು ಫಂಡ್ ಕೊಡುತ್ತಾರೆ. ಈ ಸಂಬಂಧದಲ್ಲಿ ಕೇಂದ್ರ ಸರ್ಕಾರದವರು ಎಷ್ಟು ಪರ್ಸೆಂಟ್ ಹಣವನ್ನು ಕೊಡುತ್ತಾರೆ, ಮತ್ತು ರಾಜ್ಯ ಸರ್ಕಾರದವರು ಎಷ್ಟು ಪರ್ಸೆಂಟು ಕೊಡುತ್ತಾರೆ?

**ಶ್ರೀ ರಾಮಕೃಷ್ಣ ಹೆಗಡೆ (ಅಭಿವೃದ್ಧಿ ಪಂಚಾಯಿ ರಾಜ್ ಮತ್ತು ಸಹಕಾರ ಶಾಖೆಗಳ ಮಂತ್ರಿಗಳು):** ಈ ಸಂಘಗಳಿಗೆ ಕೊಡತಕ್ಕ ರಿಬೇಟ್ ಹಣ ಏನಿದೆ ಇದು ನಮಗೆ ಕೇಂದ್ರ ಸರ್ಕಾರದಿಂದ ಸೆಂಟ್ ಪರ್ಸೆಂಟ್ ಸಿಕ್ಕುತ್ತದೆ. ಇದಕ್ಕೇನೂ ರಾಜ್ಯ ಸರ್ಕಾರದವರು ಹಾಕಬೇಕಾದಿಲ್ಲ. ಸೆಂಟ್ರಲ್ ಗೌರ್ನಮೆಂಟ್‌ನವರು ಏನು ಹಣವನ್ನು ಕೊಡುತ್ತಾರೆಯೋ ಅದು ಪ್ಲಾನಿನ ಸೀಲಿಂಗಿಗೆ ಒಳಪಟ್ಟಿರುತ್ತದೆ. ಈಗ ೫೬ ಕೋಟಿ ರೂಪಾಯಿಗಳನ್ನು ಯೋಜನೆಗೋಸ್ಕರ ಎಂದು ಒದಗಿಸಿದ್ದರೆ ಅದರಲ್ಲಿ ರಿಬೇಟಿಗೋಸ್ಕರ ಇಷ್ಟು ಹಣ ಎಂದು ಒದಗಿಸಿರುತ್ತಾರೆ. ರಿಬೇಟ್ ಕೊಡುವುದಕ್ಕೆ ರಾಜ್ಯ ಸರ್ಕಾರದವರು ೧೦ ಕೋಟಿ ರೂಪಾಯಿಗಳನ್ನು ಕೊಟ್ಟರೆ, ಕೇಂದ್ರ ಸರ್ಕಾರದವರೂ ಸಹ ೧೦ ಕೋಟಿ ರೂಪಾಯಿಗಳನ್ನು ಕೊಡುತ್ತಾರೆ. ಅವರು ಒಂದು ಸೀಲಿಂಗ್ ಫಿಕ್ಸ್ ಮಾಡಿರುತ್ತಾರೆ. ನಾವು ಬೇರೆ ಬೇರೆ ಬಾಬುಗಳಿಗೆ ಹೆಚ್ಚು ಹಣವನ್ನು ಖರ್ಚು ಮಾಡತಕ್ಕ ಅಗತ್ಯವಿದ್ದುದರಿಂದ, ಆ ಬಾಬುಗಳಿಗೆ ಹೆಚ್ಚು ಹಣವನ್ನು ಒದಗಿಸಿ ಒಂದು ಲಕ್ಷ ರೂಪಾಯಿಗಳನ್ನು ಮಾತ್ರ ಈ ರಿಬೇಟ್ ಕೊಡುವುದಕ್ಕೋಸ್ಕರ ನಾವು ಒದಗಿಸಿದ್ದೇವು. ಆ ಬಗ್ಗೆ ಈಗ ನಾವು ಕೊಡಬೇಕಾಗಿರತಕ್ಕ ಅರಿಯರ್ಸ್ ೯ ಲಕ್ಷರೂಪಾಯಿಗಳಾಗಿರುತ್ತದೆ. ಆದ್ದರಿಂದ ಈಗ ನಾವು ಮೊದಲು ಅದರಲ್ಲಿ

ಅರ್ಧ ಹಣವನ್ನು ಎಂದರೆ ೪ ಲಕ್ಷ ರೂಪಾಯಿ ಚಿಲ್ಲರೆ ಹಣವನ್ನು ಮಾರ್ಚಿ ತಿಂಗಳ ಕೊನೆಯಲ್ಲಿ ಕೊಡುತ್ತೇವೆ.

**ಶ್ರೀ ಸಿದ್ದಯ್ಯ ಕಾಶಿಮಠ್** – ಉಪ್ಪಿನ ಬೆಟಗೇರಿ ಎಂಬ ಊರಿನಲ್ಲಿ ೩೬೦ ಮಗ್ಗಗಳು ನಡೆಯುತ್ತಾ ಇವೆ ಎಂದು ಅವರು ಸುಳ್ಳು ಲೆಕ್ಕವನ್ನು ತೋರಿಸಿ ರಿಬೇಟನ್ನು ತೆಗೆದುಕೊಳ್ಳುತ್ತಾ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಈ ತರಹ ನೂರಾರು ಆಪಾದನೆಗಳು ನಮಗೆ ಈಗಾಗಲೇ ಬಂದಿದೆ. ಆ ಬಗ್ಗೆ ಇಲಾಖೆಯವರು ತನಿಖೆ ನಡೆಸುತ್ತಿದ್ದಾರೆ.

**ಶ್ರೀ ಎಚ್.ಡಿ.ದೇವೇಗೌಡ** – ಈ ರೀತಿ ರಿಬೇಟನ್ನು ಪ್ರೈಮರಿ ಸೊಸೈಟಿಗಳಿಗೆ ಕೊಡತಕ್ಕ ಕಾಲದಲ್ಲಿ ಕೇಂದ್ರದ ಸೊಸೈಟಿಗಳಿಗೂ ಮತ್ತು ಪ್ರೈಮರಿ ಸೊಸೈಟಿಗಳಿಗೂ ಆಫೀಸ್ ಬೇರರ್ಸ್ ಲಿಂಕ್ಸ್ ಇಟ್ಟುಕೊಂಡು ಹಣವನ್ನು ಕೊಡುವಾಗ ದುರುಪಯೋಗ ನಡೆಯುತ್ತಿದೆ. ಈ ವಿಚಾರವನ್ನು ಸರ್ಕಾರದವರ ಗಮನಕ್ಕೆ ತಂದು ಅದನ್ನು ವಿಚಾರಣೆ ಮಾಡಬೇಕೆಂದು ತಿಳಿಸಿ ಇಷ್ಟು ದಿವಸಗಳಾದರೂ ಕೂಡ ಅದನ್ನು ವಿಚಾರಣೆ ಮಾಡದೆ ನಿಧಾನ ದ್ರೋಹ ಮಾಡುತ್ತ ಇರುವುದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ** – ಅಂಥಾ ಕೇಸುಗಳು ಸರ್ಕಾರದ ಗಮನಕ್ಕೆ ಬಂದಿದ್ದರಿಂದ ಆರ್ಡಿನರಿ ರಿಬೇಟನ್ನು ಕೊಟ್ಟಿಲ್ಲ. ಸ್ಪೆಷಲ್ ರಿಬೇಟನ್ನು ಮಾತ್ರ ಕೊಡುತ್ತಿದ್ದೇವೆ.

**ಶ್ರೀ ಸಿದ್ದಯ್ಯ ಕಾಶೀಮಠ್** – ಸರ್ಕಾರದವರು ರಿಬೇಟನ್ನು ಕೊಡುವಾಗ ಯಾವ ನಿಯಮವನ್ನು ಅನುಸರಿಸುತ್ತೀರಿ?

**ಶ್ರೀ ರಾಮಕೃಷ್ಣ ಹೆಗ್ಗಡೆ** – ಸಾಮಾನ್ಯವಾಗಿ ಎಲ್ಲಾ ರಾಜ್ಯಗಳಲ್ಲಿಯೂ ನಿಯಮವನ್ನು ಅನುಸರಿಸುತ್ತಾರೆಯೋ ಅದನ್ನೇ ನಾವು ಅನುಸರಿಸುತ್ತಿದ್ದೇವೆ. ಕಳೆದ ವರ್ಷ ರಿಬೇಟ್ ತೆಗೆದುಕೊಳ್ಳುವುದರಲ್ಲಿ ಎಲ್ಲ ಸೊಸೈಟಿಗಳಲ್ಲಿಯೂ ಪ್ರಾಮಾಣಿಕತೆ ಕಂಡುಬಂದಿರುವುದಿಲ್ಲ. ಈ ದೃಷ್ಟಿಯಿಂದ ನಾವು ಅದನ್ನು ನಿಲ್ಲಿಸಿ ನೂಲನ್ನು ಎಷ್ಟು ತೆಗೆದುಕೊಂಡು ಹೋಗುತ್ತಾರೆಯೋ ಅದರ ಆಧಾರದ ಮೇಲೆ ರಿಬೇಟನ್ನು ಕೊಡಬೇಕು ಎಂದು ಒಂದು ಹೊಸ ನಿರ್ಣಯವನ್ನು ತೆಗೆದುಕೊಂಡಿದ್ದೇವೆ. ಆದರೂ ಕೂಡ ಎಲ್ಲರೂ ಅಪ್ರಾಮಾಣಿಕತೆಯಿಂದ ಕೆಲಸ ಮಾಡುತ್ತಾರೆ ಎಂದು ನಾನು ಹೇಳುವುದಿಲ್ಲ. ಅದಕ್ಕಾಗಿ ಈಗ ನಾವು ಏನು ಯೋಚನೆ ಮಾಡುತ್ತಿದ್ದೇವೆ ಎಂದರೆ, ಯಾವ ಸೊಸೈಟಿಗಳು ಕೇಂದ್ರದ ಸೊಸೈಟಿಯಿಂದ ಎಷ್ಟು ನೂಲನ್ನು ಖರೀದಿ ಮಾಡುತ್ತಿದ್ದೇವೆ. ಎಷ್ಟರ ಮಟ್ಟಿಗೆ ಬಟ್ಟೆ ಸೀರೆ ಇತ್ಯಾದಿಗಳನ್ನು ಉತ್ಪಾದನೆ ಮಾಡುತ್ತವೆ, ಟೆಕ್ಸ್‌ಟೈಲ್ ಮಿಲ್ಲುಗಳು ಎಷ್ಟು ಉತ್ಪಾದನೆ ಮಾಡುತ್ತವೆ ಎಂಬುದನ್ನೆಲ್ಲಾ ನೋಡಿಕೊಂಡು ಅದರ ಮೇಲೆ ರಿಬೇಟನ್ನು ಕೊಡಬೇಕೆಂದು ನಾವು ಯೋಚನೆ ಮಾಡುತ್ತಿದ್ದೇವೆ.

**ಶ್ರೀ. ಎಚ್.ಆರ್.ಕೇಶವ ಮೂರ್ತಿ**: ಸಹಕಾರ ಸಂಘಗಳಲ್ಲಿ ಸಾರ್ವಜನಿಕ ನಿಧಿಯ ದುರ್ಬಳಕೆ ಮತ್ತು ಮಿಸ್ ಅಪ್ಲಿಕೇಷನ್ಸ್‌ಗಳ ಸಂಖ್ಯೆಯು ಗಣನೀಯವಾಗಿ ಏರುತ್ತಿರುವುದರಿಂದ, ಸಹಕಾರ ವಿಭಾಗದಲ್ಲಿ ದೋಷಗಳನ್ನು ಪೂರ್ಣವಾಗಿ ತಿಳಿಯಲು ಮತ್ತು ತಕ್ಷಣವೇ ಆ ದೋಷಗಳನ್ನು ನಿವಾರಿಸಲು ಸರ್ಕಾರವು ರಿಸರ್ಚ್ ಬ್ರಾಂಚ್‌ನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಮಾಡುವುದೇ ?

**ಶ್ರೀ ರಾಮಕೃಷ್ಣ ಹೆಗ್ಗಡೆ** – ಅದಕ್ಕೆ ಯಾವ ರಿಸರ್ಚ್ ಬ್ರಾಂಚೂ ಬೇಕಾಗಿಲ್ಲ. ಸಾಮಾನ್ಯವಾಗಿ ಆತಿ ಆಶೆ ಹೆಚ್ಚಾದಂತೆಲ್ಲಾ ಅಪ್ರಾಮಾಣಿಕತನ ಆಗತಕ್ಕದ್ದು ಸ್ವಾಭಾವಿಕವಾದದ್ದು. ಎಲ್ಲಿ ದೋಷ ಇದೆ ಏತಕ್ಕೆ ಆ ರೀತಿ ಆಗುತ್ತಿದೆ ಎಂಬುದನ್ನು ಕೇಳತಕ್ಕದ್ದು ಸ್ವಾಭಾವಿಕ. ಆದರೆ ರಿಸರ್ಚ್ ಬ್ರಾಂಚ್ ಮಾಡಿ ಯಾವ ಕಾರಣದಿಂದ ಆ ರೀತಿ ಆಗುತ್ತಿದೆ ಎಂಬುದನ್ನು ಕಂಡುಹಿಡಿಯತಕ್ಕ ಅಗತ್ಯವಿಲ್ಲ. ಲಕ್ಷಾಂತರ ರೂಪಾಯಿಗಳ ಬಂಡವಾಳವನ್ನು ಹಾಕಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸೊಸೈಟಿಗಳನ್ನು ನಡೆಸುತ್ತಾ ಇರುವಾಗ ಎಲ್ಲೋ ಅಲ್ಲೊಂದು ಇಲ್ಲೊಂದು ದೋಷ ಕಂಡು ಬಂದರೆ ಅದು ಅತ್ಯಂತ ಖಂಡನೀಯ, ಶೋಚನೀಯ ಏನೂ ಅಲ್ಲ.

**ಶ್ರೀಮತಿ ಸುಶೀಲಬಾಯಿ ಹೀರಾಚಂದ್ ಷಾ** – ಅನೇಕ ಜನರು ತಮ್ಮ ಮಕ್ಕಳ ಹೆಸರು, ಮತ್ತು ತಮ್ಮ ಸಂಬಂಧಿಕರ ಹೆಸರಿನಲ್ಲಿ ಸೊಸೈಟಿಯನ್ನು ಮಾಡುತ್ತಿದ್ದೇವೆ ಸಾವಿರಾರು ರೂಪಾಯಿಗಳ ಮಾಲನ್ನು ಮಾರಾಟ ಮಾಡಿದ್ದೇವೆ ಎಂದು ಬೇರೆ ಬೇರೆ ಹೆಸರುಗಳನ್ನು ಹೇಳಿ ಸಾವಿರಾರು ರೂಪಾಯಿಗಳ ರಿಬೇಟನ್ನು ತೆಗೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಮತ್ತು ಅಂಥವರ ಮೇಲೆ ಏನಾದರೂ ಕ್ರಮವನ್ನು ತೆಗೆದುಕೊಂಡಿದ್ದೀರಾ?

**ಶ್ರೀ ರಾಮಕೃಷ್ಣ ಹೆಗ್ಗಡೆ** – ಈ ತರಹ ಆಪಾದನೆಗಳನ್ನು ಮಾನ್ಯ ಸದಸ್ಯರು ಹೇಳಿದ್ದಕ್ಕಾಗಿ ನಾನು ಅವರಿಗೆ ತಿಳಿಸುವುದಕ್ಕೆ ಬಯಸುತ್ತೇನೆ. ನೇಕಾರರ ಸಹಕಾರ ಸಂಘಗಳ ಸಮಸ್ಯೆಯ ವಿಷಯದಲ್ಲಿ ಆಗತಕ್ಕಂಥ ವ್ಯವಹಾರ, ಅವ್ಯವಹಾರ ಇವುಗಳನ್ನು ಯಾವ ರೀತಿ ಉತ್ತಮ ಪಡಿಸಬೇಕು, ಎಂಬುದನ್ನು ಅವಲೋಕಿಸಿ ಅವುಗಳ ಮೇಲೆ ಯಾವ ಕ್ರಮವನ್ನು ತೆಗೆದುಕೊಳ್ಳಬೇಕು ಎಂಬುದನ್ನು ಶಿಫಾರಸ್ಸು ಮಾಡಲಿಕ್ಕೆ ಸದ್ಯದಲ್ಲಿಯೇ ಸರ್ಕಾರದವರು ಒಂದು ಸಮಿತಿಯನ್ನು ನೇಮಕ ಮಾಡುತ್ತಾರೆ.

**ಶ್ರೀ ಎ.ಜೆ.ದೊಡ್ಡ ಮೇಟಿ** – ಈಗ ಈ ರೀತಿಯಲ್ಲಿ ತೋರಿಸಲಾದ ೧ ಲಕ್ಷ ೮೭ಸಾವಿರ ರೂಪಾಯಿಗಳು ಕೊಡತಕ್ಕಂಥ ಬಾಕಿ ಇದೆ. ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳಿಗೂ ೧.೮೭.೦೦೦ ಬಾಕಿ ಇದೆ. ಈ ವಿವಿಧ ಸೊಸೈಟಿಗಳಿದ್ದು, ಚೌಕಾಶಿ ಮಾಡಿ ಅವು ಅಪ್ರಮಾಣಿಕತೆಯಿಂದ ದೂರವಿದೆಯೆಂದು ಪರಿಶೀಲನೆ ಮಾಡಿದೆಯೋ ಅಥವಾ ಇನ್ನೂ ಪರಿಶೀಲನೆ ಮಾಡುತ್ತಾ ಇದ್ದೀರೋ?

**ಶ್ರೀ ಕೊಂಡಜ್ಜಿ ಬಸಪ್ಪ** – ಇದು ಪರಿಶೀಲನೆ ಮಾಡಿರತಕ್ಕಂಥಾದ್ದು.

**ಶ್ರೀ ಬಿ.ಬೈರಪ್ಪಾಜಿ** – ಸಹಕಾರ ಕ್ಷೇತ್ರದಲ್ಲಿ ದಿನೇ ದಿನೇ ಅಪ್ರಮಾಣಿಕ ಹಾಗೂ ಉದ್ದಟತನ ಬೆಳೆಯುತ್ತಾ ಇದೆ. ಇದನ್ನು ತಪ್ಪಿಸಬೇಕಾದರೆ ನಿಮ್ಮ ಸರ್ಕಾರದಿಂದ ಸಾಧ್ಯವಿಲ್ಲವೆಂದು ಕಾಣುತ್ತದೆ. ಈ ಸಭೆಯಲ್ಲಿ ಪ್ರಶ್ನೆಗಳ ಮೂಲಕ ಇದನ್ನು ಪ್ರತಿ ನಿತ್ಯ ಕೇಳುತ್ತ ಇರುತ್ತೇವೆ.

**ಉಪಾಧ್ಯಕ್ಷರು** – ಪ್ರಶ್ನೆ ಕೇಳಿ.

**ಶ್ರೀ ಬಿ.ಬೈರಪ್ಪಾಜಿ** – ಈ ರೀತಿ ಅಪ್ರಮಾಣಿಕತೆಯಿಂದ ನಡೆದಂಥ ಕಾರ್ಯಕರ್ತರನ್ನು ಈ ಸಹಕಾರ ಕ್ಷೇತ್ರದಿಂದ ನಿರ್ಗಮಿಸುವ ರೀತ್ಯ ಕೆಲವು ದಿವಸ ಬ್ಲಾಕ್ ಲಿಸ್ಟಿನಲ್ಲಿ ಸೇರಿಸುವ ಏರ್ಪಾಡು ಮಾಡುವುದಕ್ಕೆ ಸಾಧ್ಯವೆ? ಅವರ ಮೇಲೆ ಈ ರೀತಿ ನಡೆಯುತ್ತಾ ಇರತಕ್ಕಂಥ ಮಿಸ್ ಅಪ್ರೋಪ್ರಿಯೇಶನ್ ನಿಲ್ಲಿಸುವುದಕ್ಕೆ ಸಾಧ್ಯವಿಲ್ಲವೆ? ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳೊಳಗೆ ಈ ಸಲಹೆಯನ್ನು ಕಾರ್ಯಗತ ಮಾಡಲು ಶುರು ಮಾಡುತ್ತೀರ?

**ಶ್ರೀ ಕೊಂಡಜ್ಜಿ ಬಸಪ್ಪ** – ಮಾನ್ಯ ಸದಸ್ಯರು ಆಗಾಗ್ಗೆ ಈ ಸಭೆಯಲ್ಲಿ ಹೇಳುತ್ತಿರುತ್ತಾರೆ. ನಮ್ಮ ಸಾರ್ವಜನಿಕ ಸಂಸ್ಥೆಗಳು ಒಳ್ಳೆಯ ಪ್ರಜಾಪ್ರಭುತ್ವದ ತಳಹದಿ ಮೇಲೆ ಕಟ್ಟಿರತಕ್ಕಂಥ ಸಂಸ್ಥೆಗಳು ಮಾನ್ಯೇಜ್‌ಮೆಂಟಿನವರು ಸ್ವಲ್ಪ ಯೋಗ್ಯವಾದ ಕಾರ್ಯಕ್ರಮ ತೆಗೆದುಕೊಂಡರೆ ಇಂಥ ದುರುಪಯೋಗ ಪೂರ್ತಿ ಹೋಗುತ್ತದೆ. ಅಂಥ ಸನ್ನಿವೇಶ ಅವರೇ ಕಲ್ಪನೆ ಮಾಡಿಕೊಳ್ಳುತ್ತಾರೆ. ಅಧಿಕಾರಿ ವರ್ಗದವರು, ಗೈಡೆನ್ಸ್ ಇನ್ಸ್‌ಪೆಕ್ಷನ್ ಅಥವಾ ಇನ್‌ಕ್ವೈರಿ ಇಂಥ ಒಂದು ಸುಪರ್ವಿಜನ್ ಮಟ್ಟದಲ್ಲಿ ಮಾತ್ರ ಇರುತ್ತಾರೆ. ಮೇನೇಜ್‌ಮೆಂಟಿನವರು ಹೆಚ್ಚು ಆಸಕ್ತಿ ವಹಿಸಿದರೆ ಇದನ್ನು ಕಡಿಮೆ ಮಾಡುವುದಕ್ಕೆ ಸಾಧ್ಯವೆಂದು ನನಗನಿಸುತ್ತದೆ.

**ಶ್ರೀ ಕೆ.ಲಕ್ಕಪ್ಪ** – ಈ ರಾಜ್ಯ ದೊಳಗೆ ಸಹಕಾರ ತತ್ವ ಒಂದು ಅಧಃ ಪತನಕ್ಕೆ ಹೋಗಿರುವಂಥ ವಿಚಾರದಿಂದ ಉಗ್ರ ಕ್ರಮ ತೆಗೆದುಕೊಳ್ಳುವುದಕ್ಕೆ ಮದರಾಸಿನಲ್ಲಿರುವಂತೆ ಒಂದು ಚಲಿಸುವ ನ್ಯಾಯಾಲಯವನ್ನು ಆಲೋಚನೆ ಮಾಡಿ ಅತಿ ಜಾಗ್ರತೆ ಏರ್ಪಾಡು ಮಾಡುತ್ತೀರಾ?

**ಉಪಾಧ್ಯಕ್ಷರು:** ಮಾನ್ಯ ಮಂತ್ರಿಯವರು ಮೊದಲು ಪ್ರಶ್ನೆಯನ್ನು ಓದಿ.

**ಶ್ರೀ ಕೊಂಡಜ್ಜಿ ಬಸಪ್ಪ** : ಇದು ಕಲ್ಪನೆಯ ಕೇಸ್ (ಪ್ರಕರಣ)

**ಶ್ರೀ ಎ.ಜಿ. ದೊಡ್ಡಮೇಟಿ:** ಉತ್ತರದಲ್ಲಿ 01.04.1964 ರಿಂದ ಧಾರವಾಡ ಮತ್ತು ಬಿಜಾಪುರ ಜಿಲ್ಲೆಯಲ್ಲಿರುವ ನೇಕಾರರ ಸಹಕಾರ ಸಂಘಗಳಿಗೆ ಸಲ್ಲಬೇಕಾದ ರಿಬೇಟ್‌ನ ಹೇಳಿಕೆ ಅಂತ ಇದೆ.

**ಶ್ರೀ ಬಿ.ಎಸ್.ಸೌದಾಗರ್** – ಉತ್ಪಾದನೆಯನ್ನು ಮಾಡುತ್ತಿರುವ ಸಹಕಾರಿ ಸಂಘಗಳಿಗೆ ರಿಬೇಟ್ ಇಲ್ಲ. ಈ ಸೇಲ್ಸ್ ಟ್ಯಾಕ್ಸ್ ಅವರ ಬಗ್ಗೆ ತೆಗೆದುಹಾಕುವ ವಿಚಾರ ಮಾಡುತ್ತೀರ?

**ಶ್ರೀ ಕೊಂಡಜ್ಜಿ ಬಸಪ್ಪ** – ಈ ವರ್ಷ ಆರ್ಡಿನೆರಿ ರಿಬೇಟ್ ಕೊಟ್ಟಿಲ್ಲ. ದೀಪಾವಳಿ ಕಾಲದಲ್ಲಿ ಮಾತ್ರ ೫ ಎನ್.ಪಿ. ಪರ್ ರೂಪಿ ಕೊಟ್ಟಿದ್ದೇವೆ.

## ತಾಲ್ಲೂಕು ವ್ಯವಸಾಯೋತ್ಪನ್ನ ಮಾರುಕಟ್ಟೆ ಸಹಕಾರ ಸಂಘ ಕಟ್ಟಡದಲ್ಲಿ ಬಾವಿಯನ್ನು ತೆಗೆಸುವ ಬಗ್ಗೆ.

7ನೇ ಮಾರ್ಚ್ 1963

**ಶ್ರೀಮತಿ ರತ್ನಮ್ಮ ಮಾಧವರಾವ್ (ಶಿವಮೊಗ್ಗ) :–**

a. ಶಿಕಾರಿಪುರ ತಾಲ್ಲೂಕು ವ್ಯವಸಾಯೋತ್ಪನ್ನ ಮಾರುಕಟ್ಟೆ ಸಹಕಾರ ಸಂಘದ ಕಟ್ಟಡದಲ್ಲಿ ಬಾವಿಯನ್ನು ತೆಗೆಸಲು ಅಂದಾಜಿಸಲಾದ ವೆಚ್ಚ 11,700 ರೂ. ಗಳಿಸಿ ಹೆಚ್ಚಾಗಿ ಒಟ್ಟು 24,500 ರೂ. ಗಳು ಖರ್ಚಾಗಿರುವುದು ನಿಜವೇ/ವಾಸ್ತವವೇ.

b. ಹೌದು ಎಂದಲ್ಲಿ, ಅಂದಾಜಿಸಲಾದ ವೆಚ್ಚಕ್ಕಿಂತ ಅಧಿಕ ಹಣವನ್ನು ವೆಚ್ಚ ಮಾಡಿರುವುದಕ್ಕೆ ಕಾರಣಗಳು:

**ಶ್ರೀ ಕೊಂಡಜ್ಜಿ ಬಸಪ್ಪ (ಸಹಕಾರ ಶಾಖೆಯ ಉಪಮಂತ್ರಿ):**

a. ಬಾವಿಯ ಒಟ್ಟು ರಿವೈಜ್ ಎಸ್ಟಿಮೇಟ್ ಬೆಲೆಯ ರೂ 25,760/– ಆಗಿದೆ ಮತ್ತು ರೂ. 24,418–24 ರೂಪಾಯಿಗಳನ್ನು ಖರ್ಚುಮಾಡಲಾಗಿದೆ.

b. a. ಗೆ ಕೊಟ್ಟಿರುವ ಉತ್ತರ ದೃಷ್ಟಿಯಿಂದ ಇದು ಉದ್ಭವವಾಗುವುದಿಲ್ಲ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಬಾವಿಯ ಒರಿಜನಲ್ ಎಸ್ಟಿಮೇಟು 13,760 ರೂ. ಎಂದು ಮಾಡಲಾಗಿತ್ತು. ಆನಂತರ ಆ ಎಸ್ಟಿಮೇಟು 11,700 ಎಂದು ಆಗಿತ್ತು. ಆದರೆ ಈ ಬಾವಿಗೆ 24,418 ರೂಪಾಯಿ ಖರ್ಚು ಮಾಡಲಾಗಿದೆ ಎಂದು ಉತ್ತರದಲ್ಲಿ ಹೇಳಿದ್ದೀರಿ. ಎಂದು ಸರಿಯಾಗಿ ಇದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಮೊದಲಿನ ಎಸ್ಟಿಮೇಟು ಸರಿಯಾಗಿಯೇ ಇದ್ದಿತು. ಪುನಃ ಅದನ್ನು ರಿವೈಜ್ ಮಾಡಲಾಯಿತು. ಎಸ್ಟಿಮೇಟು ರಿವೈಜ್ ಆದನಂತರ ಒಟ್ಟು ಅಷ್ಟು ಖರ್ಚಾಗಿದೆ.

**ಶ್ರೀ ಎಸ್. ಎಂ. ಕೃಷ್ಣ** – ಕೋ–ಆಪರೇಟಿವ್ ಇನ್‌ಸ್ಟಿಟ್ಯೂಷನ್‌ನ ಕಟ್ಟಡ ಕಟ್ಟುವುದಕ್ಕೆ ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್‌ನ ತಜ್ಞರ ಸಲಹೆ ತೆಗೆದುಕೊಳ್ಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಟೆಕ್ನಿಕಲ್ ನಾಲೆಡ್ಜ್ ಉಪಯೋಗಿಸುತ್ತೇವೆ.

**ಶ್ರೀ ಕೆ. ಪಿ. ರೇವಣ್ಣಸಿದ್ದಪ್ಪ** – ಬೆಂಗಳೂರಿನಲ್ಲಿ ಒಬ್ಬ ಎಂಜಿನಿಯರ್ ಇರುತ್ತಾನೆ. ಆರು ತಿಂಗಳಿಗೋ ಒಂದು ವರ್ಷಕ್ಕೋ ಅವರು ನೋಡುವುದಕ್ಕೆ ಬರುತ್ತಾರೆ. ಸ್ಥಳದಲ್ಲಿ ಇರತಕ್ಕವರೇ ಕೆಲಸ ಮಾಡುವುದರಿಂದ ಕೆಲಸ ನಿಧಾನವಾಗುತ್ತದೆ ಎಂಬುದು ಸರಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಕನ್ಸಲ್ಟಿಂಗ್ ಎಂಜಿನಿಯರ್ ನೇಮಿಸಿಕೊಂಡಿದೆ. ಅವರ ಅಭಿಪ್ರಾಯ ತೆಗೆದುಕೊಂಡು ಎಸ್ಟಿಮೇಟು ಮಾಡಿರುತ್ತದೆ.

**ಶ್ರೀ ಎಸ್.ಎಂ. ಕೃಷ್ಣ** : ರಿವೈಜ್ಡ ಎಸ್ಟಿಮೇಟ್ ಶೇಕಡ 100 ರಷ್ಟು ಜಾಸ್ತಿಯಾಗುವುದಕ್ಕೆ ಕಾರಣವೇನು?

**ಶ್ರೀಮತಿ ರತ್ನಮ್ಮ ಮಾಧವರಾವ್** – ಹಣ ಪಡೆದಿರತಕ್ಕಂಥ ಕಂಟ್ರಾಕ್ಟರ್ ಯಾರು?

**ಶ್ರೀ ಕೊಂಡಜ್ಜಿ ಬಸಪ್ಪ** : ನಾನು ಕಂಟ್ರಾಕ್ಟರ್‌ರವರ ಹೆಸರು ಬೇಕಾ? ಇದರ ಹಿಂದೆ ಯಾವ ಪ್ರಾಮುಖ್ಯತೆ ಇದೆ? ಹೆಸರನ್ನು ಕೊಡಬೇಕಾಗಿಲ್ಲ. ಸರ್?

**ಸಭಾಧ್ಯಕ್ಷರು:** ಅಲ್ಲಿ ಕೆಲವು ಇರೆಗ್ಯೂಲ್ಯಾರೀಟೀಸ್ ಇವೆ. ಈಗ ಡಿಪಾರ್ಟ್‌ಮೆಂಟ್ ಶಾಸನಾತ್ಮಕ ತನಿಖೆಯನ್ನು(ಕಾಯ್ದೆ ಸೆಕ್ಷನ್ 64 ರಲ್ಲಿ) ನಡೆಸಲು ಉಪ ರಿಜಿಸ್ಟ್ರಾರ್‌ರವರನ್ನು ನೇಮಕ ಮಾಡಿದೆ. ಮತ್ತು ಈ ವಿಷಯದಲ್ಲಿ ಇವರು ತನಿಖೆಯನ್ನು ನಡೆಸುತ್ತಾರೆ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಸರಿಯಾದ ರೀತಿಯಲ್ಲಿ ಹಣ ರಿವೈಜ್ಡ್ ಎಸ್ಟಿಮೇಟ್ ಪ್ರಕಾರ ಪಾವತಿ ಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ** – ಬೋರ್ಡ್ ಅಧ್ಯಕ್ಷರು ಕೊಟೇಷನ್ಸ್ ಕರೆದು ಕೊಟ್ಟಿದ್ದರು. ಎಗ್ಸಿಕ್ಯೂಟೀವ್ ಕಮಿಟಿ ಅದನ್ನು ರ್‍ಯಾಟಿಫೈ ಮಾಡಿದೆ.

**ಶ್ರೀ ರತ್ನಮ್ಮ ಮಾಧವರಾವ್** – ಲೆಕ್ಕದ ವಿವರ ಕೊಟ್ಟಿರುವುದು ಸರಿಯಾಗಿ ಇದೆ ಎನ್ನುವುದಕ್ಕೆ ಪರಿಶೀಲನೆ ಮಾಡಿದ್ದೀರಾ?

**ಶ್ರೀ ಟಿ.ಡಿ. ದೇವೇಂದ್ರಪ್ಪ** : ಈ ಬಾವಿಯ ಸುತ್ತಳತೆ ಎಷ್ಟು ಇದೆ? ಎಷ್ಟು ಅಡಿ ಆಳ ತೆಗೆದಮೇಲೆ ಕಲ್ಲು ಬಿದ್ದಿದೆ?

**ಶ್ರೀ ಕೊಂಡಜ್ಜಿ ಬಸಪ್ಪ** : 16 ಅಡಿ ಡಯಾಮೀಟರ್ ಇದೆ. 40 ಅಡಿ ಹೋದರೂ ಕೂಡ ನೀರು ಸಿಕ್ಕಲಿಲ್ಲ. ಆದುದರಿಂದ ರಿವೈಜ್ಡ್ ಎಸ್ಟಿಮೇಟು ಮಾಡಬೇಕಾಯಿತು.

**ಶ್ರೀ ಎಸ್.ಎಮ್.ಕೃಷ್ಣ:** ಸಹಕಾರ ಸಂಘಗಳಲ್ಲಿನ ಬಾವಿಗಳನ್ನು ಕಟ್ಟಿಸುವಾಗ ಮತ್ತು ಇತರೇ ಕಟ್ಟಡಗಳನ್ನು ಕಟ್ಟುವಾಗ ಅಲ್ಲದೇ ಡಿಸೈನ್ ಮಾಡುವಾಗ ಮತ್ತು ಕಂಟ್ರಾಕ್ಟಾರ್‌ಗಳಿಗೆ ವಹಿಸಿ ಕೊಡುವಾಗ ಸರಿಯಾದ ಮೇಲ್ವಿಚಾರಣೆ ನಡೆಸುವುದರ ಸಾಧ್ಯತೆಗಳ ಬಗ್ಗೆ ಸರ್ಕಾರವು ಪರಿಶೀಲಿಸಿದೆಯೇ? ಸಹಕಾರ ಸಂಘಗಳಿಗೆ

ಕಂಟ್ರಾಕ್ಟರ್‌ಗಳಿಗೇ ವಹಿಸಿಕೊಡುವ ಪದ್ಧತಿಯು ಇಲ್ಲಿಯವರೆಗೆ ಬಳಕೆಯಲ್ಲಿದೆ. ಕಂಟ್ರಾಕ್ಟರ್‌ಗಳ ಮೇಲೆ ನಿರಂತರ ಹತೋಟಿಯನ್ನು ಇಟ್ಟು ಕೊಳ್ಳುವುದರ ಸಾಧ್ಯತೆಯನ್ನು ಸರ್ಕಾರ ಪರಿಶೀಲಿಸಬಹುದು?

**ಶ್ರೀ ಕೊಂಡಜ್ಜಿ ಬಸಪ್ಪ:** ಪ್ರತಿಯೊಂದು ಯೋಜನೆ ಮತ್ತು ಅಂದಾಜು ಡಿಪಾರ್ಟ್‌ಮೆಂಟ್ ಆಫೀಸರ್ (ವಿಭಾಗದ ಅಧಿಕಾರಿ) ಅಂದರೆ ರಿಜಿಸ್ಟ್ರಾರ್ ಆಫ್ ಕೋ-ಆಪರೇಟಿವ್ ಸೊಸೈಟೀಸ್‌ರವರಿಂದ ಅನುಮತಿ ಪಡೆಯಲಾಗಿರುತ್ತದೆ. ಕೆಲವು ಸಂಘಗಳು ಇದನ್ನು ನಡೆಸುತ್ತವೆ ಮತ್ತು ಕೆಲವು ಸಂಘಗಳು ಅನುಮತಿಯಲ್ಲದೆ ಮಾಡಿದಲ್ಲಿ ನಾವು ಕ್ರಮ ತೆಗೆದುಕೊಳ್ಳುತ್ತವೆ.

**ಶ್ರೀ. ಎಸ್.ಎಮ್.ಕೃಷ್ಣ:** ಯೋಜನೆ ಮತ್ತು ಡಿಸೈನ್‌ಗಳನ್ನು ನೋಡುವಾಗ ಇವರಿಗೆ ಯಾವುದಾದರೂ ತಾಂತ್ರಿಕ ಸಹಾಯವಿದೆಯೋ?

**ಶ್ರೀ ಕೊಂಡಜ್ಜಿ ಬಸಪ್ಪ:** ಇಲ್ಲ.

**ಶ್ರೀ ಎಸ್.ಎಮ್.ಕೃಷ್ಣ:** ಯೋಜನೆ ಮತ್ತು ಡಿಸೈನ್‌ಗಳನ್ನು (ಪರಿಶೀಲಿಸಲು) ಸರಿಯಾದ ತಾಂತ್ರಿಕ ಸಹಾಯವನ್ನು ರಿಜಿಸ್ಟ್ರಾರ್‌ವರಿಗೆ ಒದಗಿಸುವುದು ಉತ್ತಮವಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ:** ಈ ಸಲಹೆಯನ್ನು ಪರಿಗಣಿಸಬಹುದಾಗಿದೆ.

**ಶ್ರೀ ರತ್ನಮ್ಮ ಮಾಧವರಾವ್:** ಕಂಟ್ರಾಕ್ಟ್ ತೆಗೆದುಕೊಂಡವರು ಒಬ್ಬರು, ಹಣ ಕೊಟ್ಟಿರುವುದು ಬೇರೆಯವರಿಗೆ. ಇದಕ್ಕೆ ಕಾರಣವೇನು?

**ಶ್ರೀ ಕೊಂಡಜ್ಜಿ ಬಸಪ್ಪ** – ಹಾಗೆ ಆಗಿಲ್ಲ. ಮೊದಲು ಒಬ್ಬ ಕಂಟ್ರಾಕ್ಟರ್ ಇದ್ದರು. ಆ ಮೇಲೆ ಬೇರೆ ಕಂಟ್ರಾಕ್ಟರ್ ಕೆಲಸ ವಹಿಸಿಕೊಂಡರು. ಲೆಕ್ಕ ಫೈನಲೈಜ್ ಮಾಡಿ ಸರಿಯಾದ ರೀತಿಯಲ್ಲಿ ದುಡ್ಡು ಕೊಟ್ಟಿದೆ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಆ ಬ್ಯಾಂಕಿನ ಅಧ್ಯಕ್ಷರು ಯಾರು? ಅವರ ಹೆಸರು ಹೇಳುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ನಾನು ಅಧ್ಯಕ್ಷರ ಹೆಸರನ್ನು ತಿಳಿಸಬಹುದು ಎಂದು ತಿಳಿದಿಲ್ಲ.

**ಶ್ರೀ ಕೆ.ಪಿ. ರೇವಣ್ಣಸಿದ್ದಪ್ಪ** – ನಮ್ಮ ರಾಜ್ಯದಲ್ಲಿ ಎಷ್ಟೋ ಬಾವಿಗಳನ್ನು ಮಾಡಬೇಕಾಗಿದೆ. ಒಂದು ಬಾವಿಗೆ ಇಪ್ಪತ್ತೈದು ಸಾವಿರ ರೂಪಾಯಿ ಖರ್ಚು ಮಾಡುವುದಾದರೆ ನಮ್ಮ ಸ್ಥಿತಿ ಏನು ಎನ್ನುವುದನ್ನು ಯೋಚನೆ ಮಾಡಿದ್ದೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಈಗಲೂ ಆ ಬಾವಿಗೆ ನೀರು ಬಿದ್ದಿಲ್ಲ. ಹತ್ತಿರದಲ್ಲಿರುವ ಇರಿಗೇಷನ್ ಚಾನೆಲ್ ನೀರು ಬಿಟ್ಟು ಅಲ್ಲಿ ಒಂದು ಟ್ಯಾಂಕ್ ಮಾಡಿಕೊಂಡು ನೀರು ಉಪಯೋಗಿಸಬೇಕೆಂದು ಮಾಡಿದೆ.

**ಶ್ರೀ ಬಿ. ಎಂ. ಪಾಟೀಲ್:** ಎಸ್ಟಿಮೇಟು ಮಾಡುವುದಕ್ಕೆ ಮುಂಚಿತವಾಗಿ ಬೋರಿಂಗ್‌ಮೆಷಿನ್ ಹಚ್ಚಿ ನೀರು ದೊರೆಯಲು ಎಷ್ಟು ಆಳ ಹೋಗಬೇಕಾಗುತ್ತದೆ ಎನ್ನುವುದನ್ನು ತಿಳಿದುಕೊಂಡು ಅಂದಾಜು ಮಾಡಿದ್ದರು ಅಲ್ಲವೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಅದನ್ನು ಮಾಡಿದ ಹಾಗೆ ಕಾಣುತ್ತದೆ. ಅನುಮಾನ ಇಲ್ಲ.

**ಶ್ರೀ ಟಿ.ಡಿ. ದೇವೇಂದ್ರಪ್ಪ**– ನನಗೇನೂ ಇಷ್ಟು ಹಣ ಖರ್ಚು ಮಾಡಿರುವುದರಲ್ಲಿ ಅನುಮಾನವಾಗುತ್ತದೆ. 75 ಅಡಿ ಆಳ ಬಾವಿಗೆ 26 ಸಾವಿರ ರೂಪಾಯಿ ಖರ್ಚು ಆಗುವುದಿಲ್ಲ. ಇದರಲ್ಲಿ ಏನೋ ದುರುಪಯೋಗ ಮಾಡಿ ಹಣ ತೆಗೆದುಕೊಂಡಿದ್ದಾರೆ ಎಂದು ಅನುಮಾನವಾಗುತ್ತದೆ. ಇದರ ಬಗ್ಗೆ ವಿಚಾರ ಮಾಡುತ್ತೀರಾ?

**ಶೀ ಕೊಂಡಜ್ಜಿ ಬಸಪ್ಪ** – ಹಾಗೇನೂ ಇಲ್ಲ. ಮೊದಲಿನ ಎಸ್ಟಿಮೇಟು ರಿವೈಜ್ ಮಾಡಬೇಕಾಯಿತು. ಇಬ್ಬರು ಕಂಟ್ರಾಕ್ಟರರಿಗೆ ಕೆಲಸ ಕೊಟ್ಟಿದೆ. ಬಾವಿಯ ಆಳ ಹೆಚ್ಚು ಮಾಡಿದರೂ ಕೂಡ ನೀರು ಬೀಳಲಿಲ್ಲ. ಮ್ಯಾನೇಜಮೆಂಟಿನವರು ಇಷ್ಟಕ್ಕೆ ಸಾಕು ಇನ್ನು ಹೆಚ್ಚು ಆಳ ತೆಗೆಯುವುದು ಪ್ರಯೋಜನವಿಲ್ಲ ಎಂದು ಹೇಳಿದ್ದರಿಂದ ಕೆಲಸ ನಿಲ್ಲಿಸಿದ್ದಾರೆ. ಹಣ ದುರುಪಯೋಗವಾಗಿದೆ. ಎಂದು ಹೇಳುವುದಕ್ಕಾಗುವುದಿಲ್ಲ.

**ಶ್ರೀಮತಿ ರತ್ನಮ್ಮ ಮಾಧವರಾವ್** – ಇಷ್ಟೆಲ್ಲಾ ಕೇಳಿದ ಮೇಲೆ ಇದರಲ್ಲಿ ಏನೋ ನಡೆದಿದೆ ಎಂದು ಕಂಡುಬರುತ್ತದೆ ಆದ್ದರಿಂದ ಇದರ ಬಗ್ಗೆ ಏನಾದರೂ ಮಾಡುತ್ತೀರಾ?

**ಶ್ರೀ ಕೊಂಡಜ್ಜಿ ಬಸಪ್ಪ:** ಕಾಯ್ದೆಯ 64ನೇ ಕಲಂನಲ್ಲಿ, ಉಪರಿಜಿಸ್ಟ್ರಾರ್‌ರವರು ಈಗಾಗಲೇ ಸಂಸ್ಥೆಯ ಕಾರ್ಯಾಚರಣೆಯ ಬಗ್ಗೆ ತನಿಖೆಯನ್ನು ಮಾಡುತ್ತಿದ್ದಾರೆ.

**ಶ್ರೀ ಸಿದ್ದಯ್ಯ ಕಾಶೀಮಠ್** – ಈ ಕೋ–ಆಪರೇಟಿವ್ ಸೊಸೈಟಿ ಪ್ರಿಮಿಸಸ್‌ನಲ್ಲಿ ಬಾವಿಯನ್ನು ತೆಗೆಸುವ ಉದ್ದೇಶವಾದರೂ ಏನು?

**ಶ್ರೀ ಕೊಂಡಜ್ಜಿ ಬಸಪ್ಪ** – ಪಾರ್ ಬಾಂಯಲ್ಡ್ ರೈಸ್ ಮಾಡಲು ಉಪಯೋಗಿಸಿಕೊಳ್ಳಬೇಕೆಂದು ಮಾಡಿದ್ದರು.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಅವರು ಹೆಸರು ಹೇಳುವುದಕ್ಕೆ ಸಾಧ್ಯವಿಲ್ಲ ಎಂದು ಹೇಳಿದಿರಿ. ಆ ಮಾರ್ಕೆಟಿಂಗ್ ಸೊಸೈಟಿ ಅಧ್ಯಕ್ಷರು ನಮ್ಮವರೇ? ನಿಮ್ಮವರೇ?

**ಶ್ರೀ ಕೊಂಡಜ್ಜಿ ಬಸಪ್ಪ** – ಅವರು ನಮ್ಮವರೂ ಅಲ್ಲ ನಿಮ್ಮವರೂ ಅಲ್ಲ, ಆ ಸೊಸೈಟಿಯ ಸದಸ್ಯರು. ಬೇರೆ ಬೇರೆ ಚಿಕ್ಕ ಚಿಕ್ಕ ಸಹಕಾರ ಸಂಘಗಳು ತಾವೇ ತಂದು ಮಾರಿಕೊಳ್ಳಬೇಕು. ಹೀಗಾಗಿ ವ್ಯವಸಾಯಾಭಿವೃದ್ಧಿಗೆ ಅತಿ ಮುಖ್ಯವಾಗಿ ಬೇಕಾದ ವ್ಯವಸಾಯ ರಾಸಾಯನಿಕ ಗೊಬ್ಬರಗಳು ದೊರೆಯುವುದೇ ಕಷ್ಟವಾಗಿದೆ. ಅಲ್ಲದೆ ಕ್ರಿಮಿನಾಶಕ ವಸ್ತುಗಳು ಯಾವುವು ಅವಶ್ಯಕವಾಗಿ ಬೇಕೋ, ಯಾವ್ಯಾವುದನ್ನು ಜನರು ಬಯಸುತ್ತಾರೋ ಅವನ್ನು ತೋರದೆಯೇ ಅಲ್ಲಿ ಆ ಕ್ರಿಮಿನಾಶಕ ವಸ್ತುಗಳನ್ನು ಮಾರಾಟ ಮಾಡುತ್ತಿದ್ದಾರೆ. ಆದರೆ ಅವರಿಗೂ ಇವರಿಗೂ ಏನೊಂದು ಕಮಿಷನ್ ವ್ಯವಸ್ಥೆ ಮಾಡಿಕೊಳ್ಳುವುದಕ್ಕೆ ಸಾಧ್ಯವಿದೆಯೋ ಅಂತಹ ಕಡೆಗಳಲ್ಲಿ ಕ್ರಿಮಿನಾಶಕ ವಸ್ತುಗಳನ್ನು ತೋರುತ್ತಾರೆಯೇ ಹೊರತು ಅವಶ್ಯಕವಾಗಿ ಬೇಕಾದ ಇತ್ಯಾದಿ ವಸ್ತುಗಳನ್ನು ತೋರುವುದಿಲ್ಲ. ಪರಿಸ್ಥಿತಿ ಹೀಗೆ ಇದ್ದರೆ ಆ ಸಂಘವನ್ನೇ ನಂಬಿಕೊಂಡಿರತಕ್ಕ ಅಲ್ಲಿನ ಸದಸ್ಯರಿಗೆ ಮತ್ತು ರೈತರಿಗೆ ಯಾವ ರೀತಿ ಪ್ರಯೋಜನವಾಗುತ್ತದೆಂಬುದನ್ನು ಊಹೆಮಾಡಬಹುದು. ಅಲ್ಲಿ ಪ್ರತ್ಯಕ್ಷವಾಗಿ ನೋಡಿದರೆ ಇನ್ನೂ ಹಲವಾರು ವಿಷಯಗಳು ಹೊರಬೀಳುತ್ತವೆ. ಈ ತಿಂಗಳು 16ನೇ ತಾರೀಖು ಜನರಲ್‌ಬಾಡಿಮಿಟಿಂಗ್ ನಡೆಯುತ್ತದೆಂದು ಇಟ್ಟು ಕೊಂಡಿದ್ದರೆ ಇನ್ನೂ ಇದುವರೆಗೆ ನೋಟೀಸ್ ಕೊಡದಿದ್ದರೆ ಏನಾಗುತ್ತದೆ ಪರಿಸ್ಥಿತಿ ಎಂಬುದನ್ನು ಯೋಚನೆ ಮಾಡಬೇಕು. ಸಾಕಷ್ಟು ನೋಟೀಸ್ ಕೊಟ್ಟಿಲ್ಲ. ಅದಕ್ಕೋಸ್ಕರ ಮೀಟಿಂಗ್ ನಡೆಯುವುದಕ್ಕಾಗುವುದಿಲ್ಲ. ಅಂದರೆ ಪುನಃ ಇನ್ನಷ್ಟು ಕಾಲ ತಾವೇ ಡೈರಕ್ಟರುಗಳಾಗಿದ್ದುಕೊಂಡು ಯಥಾಪ್ರಕಾರ ಇದೇ ಪರಿಸ್ಥಿತಿಯನ್ನು ಅಲ್ಲಿ ಮುಂದುವರಿಸಿಕೊಂಡು ಹೋಗುವುದಕ್ಕೆ ಅನುಕೂಲವಾಗುತ್ತದೆಂದು ಈ ರೀತಿ ಮಾಡಿದ್ದಾರೆಂದು ಕಾಣುತ್ತದೆ. ಆದ್ದರಿಂದ ಈ ಅಂಶಗಳನ್ನೆಲ್ಲಾ ಸರ್ಕಾರದವರು ಗಮನಕೊಟ್ಟು ನೋಡಿ ಸರಿಪಡಿಸಬೇಕಾಗಿದೆ. ಇನ್ನು ನಾನು ಮೊದಲೇ ಹೇಳಿದ ಹಾಗೆ ಇದು ಒಂದು ಸಂಸ್ಥೆ ಮಾತ್ರ ಕೆಟ್ಟು ಹೋಗಿದೆಯೆಂದು ಹೇಳುವುದಿಲ್ಲ. ಪದೇ ಪದೇ ಇಂತಹ ವಿಷಯಗಳು ಪ್ರಶ್ನೋತ್ತರಗಳ ಕಾಲದಲ್ಲಿ ಬಂದಾಗ ಇಂತಹ ಸಂಸ್ಥೆಗಳು ದೇಶದಲ್ಲಿ ಅನೇಕವಿದೆ ಎಂಬುದು ಚೆನ್ನಾಗಿ ಕಂಡುಬರುತ್ತವೆ. ಕನಕಪುರ ತಾಲ್ಲೂಕಿನಲ್ಲಿ 8 ವರ್ಷಗಳಾದರೂ ಆ ಸೊಸೈಟಿಯ ಜನರಲ್‌ಬಾಡಿ ಮಿಟಿಂಗ್ ಇನ್ನೂ ಕರೆದಿಲ್ಲ. ಆ ಸಂಬಂಧವಾಗಿ ಕಳುಹಿಸಿದಂಥ ಪ್ರಶ್ನೆಗಳು ಎಲ್ಲಿ ಮಾಯವಾಗಿ

ಹೋದವೋ ಗೊತ್ತಿಲ್ಲ. ಇನ್ನು ಒಂದು ಕಡೆ ಒಬ್ಬರು ಇನ್ನೊಂದು ಸಂಘಕ್ಕೆ ಅಧ್ಯಕ್ಷರಾಗಿದ್ದಾರೆ; ಅವರು ಅಧ್ಯಕ್ಷರಾದಾಗಿನಿಂದ ಯಾವ ಜನರಲ್ ಬಾಡಿ ಮಿಟಿಂಗನ್ನು ಮಾಡಿಲ್ಲ. ಆ ಒಂದು ಸೀಲು ಮಾಡಲು ಕಾಗದವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಬೆಂಗಳೂರಿಗೆ ಬಂದು ಹೋದುದು ಎಂಬುದಾಗಿ 15 ರೂಪಾಯಿಗಳ ಖರ್ಚನ್ನು ಹಾಕಿದ್ದಾರೆ. ಈ ಸಂಘದ ಬೆಳವಣಿಗೆಯಲ್ಲಿ ಅವರಿಗೆ ಇರತಕ್ಕ ಆಸಕ್ತಿ ಯಾವ ಮಟ್ಟದ್ದು ಎಂಬುದನ್ನು ಸರ್ಕಾರದವರು ಊಹಿಸಬೇಕು. ಅವು ಯಾವುದೆಂದರೆ, ಒಂದು ನಿಡುಗಲ್ ಸೊಸೈಟಿ ಇನ್ನೊಂದು ಮರುಳವಾಡಿ ಸೊಸೈಟಿ.

**ಶ್ರೀ ಕೊಂಡಜ್ಜಿ ಬಸಪ್ಪ: (ಸಹಕಾರ ಶಾಖೆಯ ಉಪಮಂತ್ರಿ):** ಪ್ರಶ್ನೆಯಿರುವುದು ತಾಲ್ಲೂಕು ಮಾರುಕಟ್ಟೆ ಸಂಘದ ಕುರಿತಾಗಿ, ಇವರು ಹೇಳುತ್ತಿರುವುದು ಇತರ ಎರಡು ಸಂಘಗಳ ಬಗ್ಗೆ.

**ಶ್ರೀ ಎಸ್. ಕರಿಯಪ್ಪ:** ಆ ಸಂಘದಲ್ಲಿರತಕ್ಕ ಡೈರೆಕ್ಟರ್ಸ್ ಪೈಕಿ ಇಬ್ಬರಿಗೆ ಶಿಕ್ಷೆಯಾಗಿದ್ದರೂ ಅವರು ಅಲ್ಲಿಯೇ ಹೋಗಿ ಆ ರೀತಿ ಮಾಡುತ್ತಿದ್ದಾರೆ. ಅವರು ಯಾವ ಸಂಘಕ್ಕೆ ಅಧ್ಯಕ್ಷರಾಗಿದ್ದರೋ ಅಲ್ಲೆಲ್ಲಾ ಅದೇ ರೀತಿಯೇ ಇದೆ. ಹೀಗೆಲ್ಲಾ ಇರುವುದರಿಂದಲೇ ಈ ಸಂಘ ಈ ಅವ್ಯವಸ್ಥೆಗೆ ಇಳಿದಿದೆ ಎಂಬುದನ್ನು ಸರ್ಕಾರದವರು ಮನಸ್ಸಿಗೆ ನಾಟುವಂತೆ ಹೇಳುತ್ತಿದ್ದೇನೆ.

**ಶ್ರೀ ಕೊಂಡಜ್ಜಿ ಬಸಪ್ಪ** – ಬರೀ ಎರಡು ಸೊಸೈಟಿಗಳ ವಿಷಯವಲ್ಲ. 10 ಸೊಸೈಟಿಗಳ ವಿಚಾರ ಮಾತನ್ನಾಡಿ. ನೋಟೀಸ್ ಕೊಟ್ಟಿದ್ದು ಇದ್ದುದು, ಎಲ್ಲೆಲ್ಲಿ ಆ ರೀತಿ ಮಾಡಿದ್ದಾರೆನ್ನುವುದು ತಮ್ಮ ಮುಂದೆ ಸರಿಯಾದ ಮಾಹಿತಿ ಇದ್ದರೆ ಹೇಳಿ ಇವತ್ತು ಮಾರ್ಕೆಟಿಂಗ್ ಸೊಸೈಟಿಗಳಿವೆ. ಅದರ ಬಗ್ಗೆ ಸಾಕಷ್ಟು ಸಮಜಾಯಿಷಿಕೊಡಿ.

**ಶ್ರೀ ಎಸ್. ಕರಿಯಪ್ಪ** – ನಮ್ಮ ತಾಲ್ಲೂಕ್ ಮಾರ್ಕೆಟಿಂಗ್ ಸೊಸೈಟಿಗಳ ವಿಷಯವನ್ನು ಸಹಬೇಕಾದರೆ ಹೇಳುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ** – 150 ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಗಳ ಆಡಳಿತ ವಿಷಯವನ್ನು ಇಲ್ಲಿ ಚರ್ಚೆ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಪ್ರತ್ಯೇಕವಾಗಿ ಇಂತಹ ಸೊಸೈಟಿಗೆ ಸಂಬಂಧಪಟ್ಟುದು ಎಂಬುದಾಗಿ ಪ್ರಶ್ನೆಗಳನ್ನು ಹಾಕಿ ಅದಕ್ಕೆ ಉತ್ತರ ಕೊಡುತ್ತೇನೆ.

**ಶ್ರೀ ಎಸ್. ಕರಿಯಪ್ಪ** – ನಾನು ಈಗಾಗಲೇ ಪ್ರಶ್ನೆಗಳನ್ನು ಹಾಕಿದ್ದೇನೆ. ಆ ಬಗ್ಗೆ ಎರಡು ಮೂರು ಕಾಗದಗಳನ್ನು ಬೇರೆ ಬರೆದಿದ್ದೇನೆ. ಆದ್ದರಿಂದ ಈಗಿರತಕ್ಕ ಪರಿಸ್ಥಿತಿಯನ್ನು ಸುಧಾರಿಸಿ ತಕ್ಕ ಕ್ರಮಗಳನ್ನು ಅದಷ್ಟು ಶೀಘ್ರದಲ್ಲಿ ತೆಗೆದುಕೊಳ್ಳಬೇಕೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಕೊಂಡಜ್ಜಿ ಬಸಪ್ಪ :** ಅಧ್ಯಕ್ಷರೇ, ಈ ಸೊಸೈಟಿಯ ಜನರಲ್ ಬಾಡಿ ಮಿಟಿಂಗ್ 30.9.52 ನೇ ತಾರೀಖಿನ ದಿವಸ ನಡೆಯಬೇಕೆಂದು ನಿರ್ಧಾರವಾಗಿತ್ತು. ಅದರ ಹಿಂದಿನ ದಿವಸ ಸದಸ್ಯರೊಬ್ಬರು ಆರ್ಡರ್ ಮಾಡಿಸಿ ಒಂದು ಡಿಸ್‌ಪ್ಯೂಟನ್ನು ಹಾಕಿಸಿದರು ಆಮೇಲೆ ಎಲೆಕ್ಷನ್ ಆಫ್ ಆಫೀಸ್ ಬೇರರ್ಸ್ ಮೇಲೆ ಒಂದು ಸ್ಟೇ ಆರ್ಡರ್‌ನ್ನು ತೆಗೆದುಕೊಂಡು ಬಂದರು. ಸ್ಟೇ ಆರ್ಡರ್ ತೆಗೆದುಕೊಂಡು ಬಂದು ಆ ಸ್ಟೇ ಆರ್ಡರ್ ಜಾರಿಯಾಗಿ ಬಂದಿದದ್ದರಿಂದ ಎಲೆಕ್ಷನ್ ಆಗಲಿಲ್ಲ. ಆಮೇಲೆ ಯಾವ ಕೆಲಸ ಕಾರ್‍ಯಗಳೂ ಆಗಲಿಲ್ಲ. ಆಮೇಲೆ ಮುಂದೆ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಲು ಬೇಕಾದ ಆರ್ಡರ್ ಮಾಡಿಸಿ ಎಲೆಕ್ಷನ್ ನಡೆಸಬಹುದು ಎಂಬುದಾಗಿ ತೀರ್ಮಾನ ಕೊಟ್ಟರು. ಅದು ಮೇಲೆ ರೆವಿನ್ಯೂ ಆಫ್ ಲೇಟ್ ಟ್ರಿಬ್ಯೂನಲ್‌ಗೆ ಅದು ಹೋಗಿ ಪುನಃ ಇಂಟೆರಿಯಮ್ ಸ್ಟೇ ಆರ್ಡರ್ ಬಂತು. ಅಷ್ಟು ಆಖೈರಾಗಿ ಫೈಸಲಾದುದು. ಅಲ್ಲಿಂದಾಚೆಗೆ 29.09.63 ರವರಿಗೆ ಯಾವ ವಿಧವಾದ ಎಲೆಕ್ಷನ್ ಸಹ ನಡೆಯಲಿಲ್ಲ. ಅದನ್ನು ಮಾಡಲಿಕ್ಕೆ ಆಗಲಿಲ್ಲ. ಅನಂತರ ಆದರೂ ಕೂಡ ಸುಮಾರು ಒಂದೂವರೆ ತಿಂಗಳುಗಳಾದರೂ ಏಕೆ ಚುನಾವಣೆ ಮಾಡಲಿಲ್ಲವೆಂದು ಮಾನ್ಯ ಸದಸ್ಯರು ಕೇಳತಕ್ಕ ಪರೀಕ್ಷೆ. ಅವರಿಗೆ ನಾನು ಈಗಾಗಲೇ ಉತ್ತರದಲ್ಲಿ ಕೇಳಿದ್ದೇನೆ. ಮುಖ್ಯವಾಗಿ ಭಾಗಶಃ ಚುನಾವಣಾ ವಿವಾದದಿಂದ ಮತ್ತು ಭಾಗಶಃ ಮ್ಯಾನೆಜ್‌ಮೆಂಟ್‌ನಲ್ಲಿ ಒಮ್ಮತವಿಲ್ಲದಿರುವುದರಿಂದ ಎಂಬುದಾಗಿ ಹೇಳೀದ್ದಾರೆ. ಆದರೆ ನಮ್ಮ ಅಸಿಸ್ಟೆಂಟ್ ರಿಜಿಸ್ಟರ್ ಅವರು ಬೋರ್ಡ್ ಆಫ್ ಮ್ಯಾನೆಜ್‌ಮೆಂಟ್ ಅವರಿಗೆ ಸುಮಾರು ಆರು ನೋಟೀಸ್‌ಗಳನ್ನು ಕೊಟ್ಟಿದ್ದಾರೆ. ಆ ನೋಟೀಸ್‌ಗಳನ್ನು ಯಾವ ಯಾವ ತಾರೀಖಿನಲ್ಲಿ ಕೊಟ್ಟಿದ್ದಾರೆಂದರೆ, ಅದು ಈ ರೀತಿ ಇದೆ 29.10.63, 28.11.63, 11.05.64, 26.05.64, 10.03.65 ಮತ್ತು 23.03.65. ಅದರಲ್ಲಿ ಮ್ಯಾನೆಜಮೆಂಟಿನವರು ಜನರಲ್ ಬಾಡಿ ಮಿಟಿಂಗ್‌ನ್ನು ಏಕಾಏಕಿ ಏತಕ್ಕೆ ತಡೆಮಾಡುತ್ತಿದ್ದಾರೋ ಅದು ಸರಿಯಲ್ಲ, ಕೂಡಲೇ ಆ ಮಿಟಿಂಗ್‌ನ್ನು ಕರೆಯಬೇಕೆಂದು ಹೇಳಿ ನೋಟೀಸ್ ಕೊಟ್ಟಿದ್ದಾರೆ. ಆ ರೀತಿ ನೋಟೀಸ್ ಕೊಟ್ಟಾಗ್ಯೂ ಇನ್ನು ಅವರು ಕ್ರಮ ತೆಗೆದುಕೊಂಡಿಲ್ಲವೆಂದು ಮಾನ್ಯ ಸದಸ್ಯರು ಹೇಳಿದ್ದು ನಿಶ್ಚಯವಾದ

ಮಾತು. ಇತ್ತೀಚೆಗೆ ಅದಕ್ಕಾಗಿ ಒಂದು ಕಾನೂನು ಇದೆ. ಸೆಕ್ಷನ್ 22 (7) ರ ಪ್ರಕಾರ ಡಿಸ್‌ಮಿಸ್ ಮಾಡತಕ್ಕ ಅಧಿಕಾರ ಈ ಇಲಾಖೆಯ ರಿಜಿಸ್ಟ್ರಾರ್ ಅವರಿಗೆ ಇದೆ. ಆ ಪ್ರಕಾರ ಅವರು ಈಗ ನೋಟೀಸ್ ಕೊಟ್ಟಿದ್ದಾರೆ. ಅದನೆಂದರೆ, ಅವರನ್ನು ಏತಕ್ಕೆ ಡಿಸ್‌ಮಿಸ್ ಮಾಡಕೂಡದು, ಇದುವರೆಗೆ ಜನರಲ್ ಬಾಡಿ ಮಿಟಿಂಗನ್ನು ಏಕೆ ಮಾಡಲಿಲ್ಲ, ಎಂಬುದಾಗಿ ಹೇಳಿ ಅದರ ಬಗ್ಗೆ ತಕ್ಕ ಕ್ರಮವನ್ನು ಈಗಾಗಲೇ ತೆಗೆದುಕೊಂಡಿದ್ದಾರೆ. ನನಗೆ ಬಂದಿರುವ ವರ್ತಮಾನದ ಪ್ರಕಾರ ಮುಂದಿನ ತಿಂಗಳು 16 ನೇ ತಾರೀಖಿನಲ್ಲಿ ಆ ಮೀಟಿಂಗ್ ನಡೆಯುತ್ತದೆ ಎಂದು ಕೆಲವು ಮಾನ್ಯ ಸದಸ್ಯರೇ ಹೇಳಿದ್ದಾರೆ. ಆದ್ದರಿಂದ ಮುಂದಿನ ತಿಂಗಳು 16 ನೇ ತಾರೀಖು ಅದರ ಜನರಲ್ ಬಾಡಿ ಮಿಟಿಂಗ್‌ನ್ನು ಇಟ್ಟಿದ್ದಾರೆ. ಒಂದು ವೇಳೆ ಆ ರೀತಿ ಮೀಟಿಂಗ್ ನಡೆದರೆ ಒಂಧು ತಿಂಗಳು ನೋಟೀಸ್ ಸಾಕಷ್ಟು ಇರತ್ತದೆ. ಕಾನೂನಿನಲ್ಲಿ ಅದಕ್ಕೆ ಒಂದು ಸೆಕ್ಷನ್, ಪ್ರಾವಿಷನ್ ಇದೆ. ಅದರಂತೆ ಕ್ರಮ ಕೈಗೊಳ್ಳಲಾಗುತ್ತದೆ ಎಂದು ಭರವಸೆಯನ್ನು ಹೇಳುತ್ತೇನೆ. ಇದರೆಲ್ಲಲ್ಲಾ ಆಗಬೇಕಾದರೆ ಕೊನೆಯ ಪಕ್ಷ 2–3 ತಿಂಗಳು ಆಗಬಹುದು.

ಆಮೇಲೆ ಮಾನ್ಯ ಸದಸ್ಯರು ಇನ್ನೊಂದು ಮಾತನ್ನು ಹೇಳಿದರು ಅದನೆಂದರೆ, ಕೆಲವು ಸೊಸೈಟಿಗಳಿಗೆ (ಅ) ಕ್ಲಾಸ್ ಮೆಂಬರುಗಳನ್ನು ಮಾಡಿಲ್ಲ (ಆ ಕ್ಲಾಸ್ ಮೆಂಬರುಗಳನ್ನು ಮಾತ್ರ ಮಾಡಿದ್ದಾರೆ ಎಂದು ಹೇಳಿದರು. ಅದರ ಕ್ಲಾಸಿಫಿಕೇಷನ್ ಹೇಗಿದೆ ಎಂದರೆ (ಅ) ಕ್ಲಾಸ್ ಕೋ–ಆಪರೇಟಿವ್ ಸೊಸೈಟಿಗಳು (ಆ ಕ್ಲಾಸ್ ಇಂಡಿವಿಜುಯಲ್ಸ್ (ಇ) ಕ್ಲಾಸ್ ಟ್ರೇಡರ್ಸ್ (ಈ) ಕ್ಲಾಸ್ ಸ್ಟೇಟ್ ಗೌರ್ನಮೆಂಟ್ ಎಂದು ಕ್ಲಾಸಿಫ್ಲೈ ಮಾಡಿದೆ. ಅದಕ್ಕೆ ಮಾನ್ಯ ಸದಸ್ಯರು (ಅ) ಕ್ಲಾಸ್ ಎಂದು ಇರುವುದನ್ನು (ಆ) ಕ್ಲಾಸ್ ಎಂದು ಭಾವನೆ ಮಾಡಿಕೊಂಡಿದ್ದಾರೆಂದು ಹೇಳುವಂಥಾದ್ದು ಸರಿಯಾದ ಮಾತಲ್ಲ. ಕೋ–ಆಪರೇಟಿವ್ ಸೊಸೈಟಿಗಳಿಗೆ ಯಾರೇ ಸದಸ್ಯರಾದರೂ ಕೂಡ ಅವರು (ಅ) ಕ್ಲಾಸ್ ಸದಸ್ಯರಾಗಿರುತ್ತಾರೆ.

ಇನ್ನು ಆ ಸೊಸೈಟಿಯ ಆಡಿಟ್ ವಿಚಾರದಲ್ಲಿ ಲೋಪದೋಷಗಳು ಇವೆಯೆಂದು ಹೇಳಿದರು. ಅದರ ಆಡಿಟ್ ರಿಪೋರ್ಟ್ ನನ್ನ ಹತ್ತಿರ ಇದೆ. ಅದರ ಅವಶ್ಯಕತೆ ಇದ್ದರೆ ಅದನ್ನು ಈ ಸಭೆಯ ಮೇಜಿನ ಮೇಲೆ ಇಡುತ್ತೇನೆ.

ಇನ್ನು ಅದರ ಆಡಿಟ್ ಮಾಡುವಾಗ ಕೆಲವು ಇರ್ರೆಗ್ಯುಲ್ಯಾರಿಟೀಸ್‌ಗಳನ್ನು ಕಂಡು ಹಿಡಿದಿದ್ದಾರೆ.

ಲೆಕ್ಕ ಪರಿಶೋಧಕರು ತಿಳಿಸಿರುವುದು ಏನೆಂದರೆ ಈ ಅವಧಿಯಲ್ಲಿ ಲೆಕ್ಕಪರಿಶೋಧನೆಯಡಿಯಲ್ಲಿ ಸುಮಾರು 885/–ರೂಪಾಯಿಗಳ ಮೌಲ್ಯದ 80 ಸಕ್ಕರೆ ಚೀಲಗಳನ್ನು ಸಾರಿಗೆ ಪ್ರತಿನಿಧಿಯು ಕೊಟ್ಟಿಲ್ಲವೆಂದು ಹೇಳಿದ್ದಾರೆ. ಆಮೇಲೆ ಅದರ ಬಗ್ಗೆ ಸಿವಿಲ್ ಕೇಸನ್ನು ಆ ಪ್ರತಿನಿಧಿಯ ವಿರುದ್ಧ ಹಾಕಿದ್ದಾರೆ ಮತ್ತು ಅದು ಕೋರ್ಟಿನ ಮುಂದಿದೆ. ಅವರೂ ಕೂಡ ಅದರ ಬಗ್ಗೆ ಸರಿಯಾದ ಕ್ರಮಗಳನ್ನು ತೆಗೆದುಕೊಂಡಿದ್ದಾರೆ. ಇದರಲ್ಲಿ ಅಂಥಾ ಸೀರಿಯಸ್ ವಿಷಯಗಳೇನೂ ಕಂಡು ಬರುವುದಿಲ್ಲ. ಅಲ್ಲಿ ಎಲ್ಲವೂ ಕೂಡ ಸರಿಯಾಗಿ ನಡೆದಿದೆ ಎಂದು ನನಗೆ ತಿಳಿದು ಬಂದಿದೆ. ಈ ವಿಷಯದಲ್ಲಿ ನಾನು ಇಷ್ಟು ಮಾತ್ರ ತಿಳಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

**ಶ್ರೀ ಜಿ.ವಿ ಗೌಡ** – ಸ್ವಾಮಿ, ಈ ವಿಷಯದಲ್ಲಿ ನಾನು ಒಂದೆರೆಡು ಕ್ಲಾರಿಫಿಕೇಷನ್ ಕೇಳಬೇಕಾಗಿದೆ.

**ಸಭಾಧ್ಯಕ್ಷರು:** " ಯಾವ ಸದಸ್ಯರು ನೋಟೀಸ್ ನೀಡಿರುವರೋ ಅವರು ಕಿರಿದಾದ ಹೇಳಿಕೆಯನ್ನು ಕೊಡಬಹುದು ಮತ್ತು ಸಂಬಂಧಿಸಿದ ಮಂತ್ರಿಯವರು ಸಂಕ್ಷಿಪ್ತವಾಗಿ ಉತ್ತರಿಸಲಿ. ಯಾವುದೇ ಸದಸ್ಯರು ಮುಂಚೆ ಸಭಾಧ್ಯಕ್ಷರಿಗೆ ತಿಳಿಸಿದಲ್ಲಿ ಸಭಾಧ್ಯಕ್ಷರು ಮತ್ತೆ ಯಾವುದೇ ವಸ್ತು ವಿಷಯವನ್ನು ತಿಳಿದುಕೊಳ್ಳುವ ಉದ್ದೇಶದಿಂದ ಪ್ರಶ್ನೆಯನ್ನು ಕೇಳಲು ಅನುಮತಿಸಿರುತ್ತಾರೆ.

ಒಂದೇ ಒಂದೇ ನಾವೆಲ್ಲರೂ ಒಂದೇ
ಈ ದೇಶದೊಳೆಲ್ಲಿದ್ದರು.
ಭಾರತ ನಮಗೊಂದೇ
ನಡೆ ನುಡಿ ಭೇದಗಳಷ್ಟೇ ಇದ್ದರು
ಬದುಕುವ ಜನ ಒಂದೇ.
ನೆಳಲು ಬೆಳಕುಗಳ ರೆಕ್ಕೆಯ ಬಿಚ್ಚುವ
ಹಾರಾಡುವ ಧ್ವಜ ಒಂದೇ

– **ಡಾ.ಜಿ.ಎಸ್. ಶಿವರುದ್ರಪ್ಪ**

# ಸಂಪರ್ಕ ಸಾಧನಗಳ ಕುರಿತ ಚರ್ಚೆ

29ನೇ ಜೂನ್ 1971

**ಶ್ರೀ ಕೊಂಡಜ್ಜಿ ಬಸಪ್ಪ** : ನಾನು ಬೇಡಿಕೆಗಳಿಗೆ ಬೆಂಬಲವನ್ನು ಸೂಚಿಸುತ್ತೇನೆ. ಮಾನ್ಯ ಉಪಾಧ್ಯಕ್ಷರೇ ಮಂತ್ರಿಯವರಿಗೆ ಕೆಲವು ಸಲಹೆಗಳನ್ನು ನೀಡಲು ಇಚ್ಛಿಸುತ್ತೇನೆ. ರಾಷ್ಟ್ರೀಯ ನಾಯಕರುಗಳ ಸ್ಮರಣಾರ್ಥ ಅಂಚೆ ಚೀಟಿಗಳ ಬಿಡುಗಡೆಯ ಕಾರ್ಯಕ್ರಮವನ್ನು ಇಟ್ಟುಕೊಂಡ ಮಂತ್ರಿಯವರಿಗೆ ನಾನು ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಇದಕ್ಕೆ ಸಂಬಂಧಿಸಿದಂತೆ ಹಿಂದೆ ಮೈಸೂರಿನ ಆಡಳಿತ ನಡೆಸಿದ ಆ ದಿನಗಳಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ವಿಶೇಷ ದೇಶಭಕ್ತನಾಗಿದ್ದ ಟಿಪ್ಪುಸುಲ್ತಾನ್ ಅವರ ಹೆಸರಿನಲ್ಲಿಯೂ ಅಂಚೆಚೀಟಿಯನ್ನು ಬಿಡುಗಡೆ ಮಾಡಬೇಕೆಂದು ಈ ಮೂಲಕ ತಮ್ಮನ್ನು ಕೋರಲು ಇಚ್ಛಿಸುತ್ತೇನೆ.

ಅಂಚೆಯನ್ನು ರೈಲ್ವೆ ಸ್ಟೇಷನ್‌ನಿಂದ ಮೊಫ್ಯೂಸಿಲ್ ಕೇಂದ್ರ ಸ್ಥಾನಗಳಿಗೆ ತಲುಪಿಸುವುದಕ್ಕೆ ಇರುವ ಸಬ್ಸಿಡಿ ಸ್ಕೀಮ್ ವಿಷಯಕ್ಕೆ ಬರುತ್ತೇನೆ. ಈ ವ್ಯವಸ್ಥೆಯು ತೃಪ್ತಿದಾಯಕವಾಗಿಲ್ಲ.

ಈಗ ಅಸ್ತಿತ್ವದಲ್ಲಿರುವ ವ್ಯವಸ್ಥೆ ಏನೆಂದರೆ ಯಾವುದೇ ಖಾಸಗಿ ಬಸ್ ಅಪರೇಟರ್‌ಗಳನ್ನು ಅಂಚೆಯನ್ನು ತಲುಪಿಸಲು ಕೇಳಲಾಗುತ್ತದೆ ಹಾಗೂ ಸ್ವಂತ ಹೊಣೆಯ ಮೇಲೆ ಅವರು ಈ ಕೆಲಸವನ್ನು ಮಾಡುತ್ತಾರೆ. ತಲುಪಿಸಿದ ಬ್ಯಾಗ್‌ಗಳ ತೂಕದ ಆಧಾರದ ಮೇಲೆ ಅವರಿಗೆ ನೀಡುವ ದರವನ್ನು ನಿಗದಿಪಡಿಸುತ್ತಾರೆ.

ರೈಲ್ವೆ ನಿಲ್ದಾಣದಿಂದ ಬಸ್ ನಿಲ್ದಾಣ ಮತ್ತು ಬಸ್ ನಿಲ್ದಾಣದಿಂದ ರೈಲ್ವೆ ನಿಲ್ದಾಣಕ್ಕೆ ಅಂಚೆಯನ್ನು ನಿರ್ವಹಿಸುವವರು ಬ್ಯಾಗ್‌ಗಳನ್ನು ತೆಗೆದುಕೊಂಡು ಹೋಗಬೇಕು, ಆಗುವ ನಷ್ಟಕ್ಕೆ ಅವರೇ ಸ್ವತಃ ಜವಾಬ್ದಾರರು ಹಾಗೂ ಅವರೇ ನಿರ್ವಹಿಸಬೇಕು ಎಂಬುದನ್ನು ಮಂತ್ರಿಯವರ ಗಮನಕ್ಕೆ ತರಲು ನಾನು ಇಚ್ಛಿಸುತ್ತೇವೆ.

ಬಸ್‌ಗಳಲ್ಲಿ ಬ್ಯಾಗ್‌ಗಳು ತುಂಬಾ ಜಾಗವನ್ನು ಆಕ್ರಮಿಸುವುದರಿಂದ ಈ ಬಸ್‌ಗಳಲ್ಲಿ ಸಂಚರಿಸುವ ಪ್ರಯಾಣಿಕರಿಗೆ ತುಂಬಾ ಅನಾನುಕೂಲವಾಗುತ್ತಿದೆ. ಆದ್ದರಿಂದ ಸಬ್ಸಿಡಿ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವುದರ ಬದಲಾಗಿ ರೈಲ್ವೆ ನಿಲ್ದಾಣದಿಂದ ಮೊಫ್ಯೂಸಿಲ್ ಕೇಂದ್ರ – ಸ್ಥಾನಗಳಿಗೆ ಸ್ವಂತ ವ್ಯಾನ್‌ಗಳನ್ನು ಡಿಪಾರ್ಟ್‌ಮೆಂಟ್ ಯಾಕೆ ಓಡಿಸುತ್ತಿಲ್ಲ. ಈ ರೀತಿ ಸ್ವಂತ ವ್ಯಾನ್‌ಗಳನ್ನು ಓಡಿಸುವುದರಿಂದ ಡಿಪಾರ್ಟ್‌ಮೆಂಟ್‌ಗೆ ಮತ್ತು ಸಾರ್ವಜನಿಕರಿಗೆ ತುಂಬಾ ಪ್ರಯೋಜನವಾಗುತ್ತದೆ.

# ದೂರವಾಣಿ ಶಾಖೆಯ ಮೇಲಿನ ಚರ್ಚೆ

**ಶ್ರೀ ಕೊಂಡಜ್ಜಿ ಬಸಪ್ಪ :** ಡೆಪ್ಯೂಟಿ ಸ್ಪೀಕರ್ ಸರ್, ಸಂಪೂರ್ಣ ತೃಪ್ತಿಕರವಲ್ಲದ ಖಾಸಗಿ ಆಪರೇಟರ್‌ಗಳಿಗೆ ನೀಡುತ್ತಿರುವ ಸಬ್ಸಿಡಿಯ ಬಗ್ಗೆ ನೋಡುತ್ತಿದ್ದೇನೆ ರೈಲ್ವೆ ನಿಲ್ದಾಣದಿಂದ ಮೊಫ್ಯೂಸಿಲ್ ಸ್ಥಳಗಳಿಗೆ ಡಿಪಾರ್ಟ್‌ಮೆಂಟೇ ಸಂಚಾರಿ ವ್ಯಾನ್‌ಗಳನ್ನು ಓಡಿಸುವುದನ್ನು ಮಾನ್ಯ ಮಂತ್ರಿಯವರು ಪರಿಗಣಿಸಲಿ ಎಂದು ನಾನು ಸಲಹೆ ನೀಡುತ್ತೇನೆ. ಉದಾಹರಣೆಗಾಗಿ ನನ್ನ ಸ್ವಂತ ಕ್ಷೇತ್ರವಾದ ಚಿತ್ರದುರ್ಗವನ್ನು ಇನ್ನೊಂದು ಜಿಲ್ಲೆಯಾದ ತುಮಕೂರಿಗೆ ಸೇರಿಸಲಾಗಿದೆ.

ಟೆಲಿಫೋನ್ ಡಿಪಾರ್ಟ್‌ಮೆಂಟ್‌ಗೆ ಬಂದರೆ, ಸದನದ ಪ್ರತಿಯೊಬ್ಬ ಸದಸ್ಯರು ಹೇಳುವುದೇನೆಂದರೆ ಟೆಲಿಫೋನ್ ಸರಬರಾಜ್‌ನಲ್ಲಿ ಕೊರತೆಯಿದೆ. ಮುಂದಿನ 15/20 ವರ್ಷಗಳಿಗೆ ಟೆಲಿಫೋನ್‌ಗಳ ಉತ್ಪಾದನೆಯ ಕಾರ್ಯಕ್ರಮವು ಮಂತ್ರಾಲಯಕ್ಕೆ ಇದೆಯೇ ಎಂಬುದು ನನಗೆ ಗೊತ್ತಿಲ್ಲ. ನಮ್ಮ ದೇಶದಲ್ಲಿ ಹಲವಾರು ಟೆಲಿಫೋನ್ ಇಂಡಸ್ಟ್ರೀಸ್‌ಗಳನ್ನು ಹೊಂದಿದ್ದೇವೆ. ಅವುಗಳಿಗೆ ನಮಗೆ ಇರುವ ಬೇಡಿಕೆಯನ್ನು ನಿಭಾಯಿಸಲು ಆಗುತ್ತಿಲ್ಲ. ನಾವು ಹೊಂದಿರುವ ವ್ಯವಸ್ಥೆಯು "ನಮ್ಮ ಸ್ವಂತ ಟೆಲಿಫೋನ್ ವ್ಯವಸ್ಥೆಯನ್ನು ಹೊಂದಿ" ಎಂಬುದೊಂದಿದೆ. ಇಲ್ಲಿಯೂ ಸಹ ಅನುಮತಿಯ ನಿರೀಕ್ಷೆಯಲ್ಲಿದೆ. ಅದಕ್ಕೋಸ್ಕರ ಅಲ್ಲಿ ಹಲವಾರು ಸಾವಿರಾರು ಅರ್ಜಿಗಳು 2000ರೂಪಾಯಿಗಳು ಅಥವಾ 3000 ಸಾವಿರ ರೂಪಾಯಿಗಳನ್ನು ಠೇವಣಿ ಇಟ್ಟಿರುವವರು ಸಹ ಟೆಲಿಫೋನ್‌ಗಳನ್ನು ಪಡೆಯಲಾಗುತ್ತಿಲ್ಲ. ವಂತಿಗೆಯನ್ನು ನೀಡಿರುವವರು ತಕ್ಷಣವೇ ಟೆಲಿಫೋನ್‌ನ್ನು ಪಡೆದುಕೊಳ್ಳುವ ಆಸಕ್ತಿ ಇರುತ್ತದೆ. ಆದ್ದರಿಂದ ಮಂತ್ರಾಲಯವು ಮುಂದಿನ 15 ಅಥವಾ 20 ವರ್ಷಕ್ಕೆ, ಯೋಜನೆ ತಯಾರಿಸಲಿ ಹಾಗೂ ಟೆಲಿಫೋನ್ ಯಂತ್ರೋಪರಕರಣಗಳ ಉತ್ಪಾದನೆಯನ್ನು ಉತ್ತಮಪಡಿಸಲಿ ಎಂದು ಹೇಳಲು ನಾನು ಸೂಚಿಸುತ್ತೇನೆ. ಟ್ರಂಕ್ ಡಯಲಿಂಗ್ ವಿಷಯಕ್ಕೆ ಬಂದಾಗ ಬೆಂಗಳೂರಿನಿಂದ ಮೈಸೂರಿಗೆ, ಬೆಂಗಳೂರಿನಿಂದ ಮಡಿಕೇರಿ ಹಾಗೂ ಮಂಗಳೂರಿಗೆ, ಹುಬ್ಬಳ್ಳಿ ಮತ್ತು ಇತರ ಸ್ಥಳಗಳಿಗೆ, ನಾವು ಯಾವಾಗಲೂ ತೊಂದರೆಯನ್ನು ಅನುಭವಿಸುತ್ತಿದ್ದೇವೆ.

ನೀವು ಯಾವಾಗಲಾದರೂ ಬೆಂಗಳೂರಿನಿಂದ ಮಡಿಕೇರಿಗೆ ಕಾಲ್ ಬುಕ್ ಮಾಡಿದರೆ, ವರ್ಷದಾದ್ಯಂತ ಅಲ್ಲ ತುಂಬಾ ಮಳೆಗಾಲವಿರುವುದರಿಂದ ನಮಗೆ ಲೈನ್ ಕನೆಕ್ಟ್ ಆಗುವುದೇ ಇಲ್ಲ. ಯಾವಾಗಲೂ ಲೈನ್ ಔಟ್ ಆಫ್ ಆರ್ಡರ್‌ನಲ್ಲಿರುತ್ತದೆ. ಈ ರೀತಿಯ ಕೊರತೆಯನ್ನು ನೀಗಿಸಲು. ಮುಂಬರುವ 4 ಅಥವಾ 5 ವರ್ಷಗಳವರೆಗೆ, ನಮ್ಮ ದೇಶದಲ್ಲಿ ವಿದ್ಯುತ್ ಕೊರತೆ ಉಂಟಾಗುವುದು ನಿಶ್ಚಯ.

# ವಿದ್ಯುತ್ ಉತ್ಪಾದನೆ ಕುರಿತು ಚರ್ಚೆ

**12ನೇ ಜೂನ್ 1971**

**ಶ್ರೀ ಕೊಂಡಜ್ಜಿ ಬಸಪ್ಪ (ಚಿತ್ರದುರ್ಗ):** ಮುಂದಿನ 15 ವರ್ಷಗಳಿಗೆ ವಿದ್ಯುತ್ ಉತ್ಪಾದನೆಗಾಗಿ ಯಾವುದೇ ಪ್ರಗತಿಪರ ಯೋಜನೆಗಳನ್ನು ನಿರೂಪಿಸಲಾಗಿದೆಯೇ? ಮಾನ್ಯ ಸಚಿವರಿಗೆ, ನಾನು ಈ ಪ್ರಶ್ನೆಯನ್ನು ಕೇಳುತ್ತೇನೆ ಹಾಗೂ ಈ ಬಗ್ಗೆ ತಕ್ಷಣವೇ ಪರಿಗಣಿಸಿ, ಮುಂದಿನ 15 ವರ್ಷಗಳಿಗೆ ಒಂದು ಯೋಜನೆಯನ್ನು ಹೊಂದಿರುವುದು ಕ್ಷೇಮಕರವೆಂದು ಭಾವಿಸುತ್ತೇನೆ.

ಮೈಸೂರಿನಲ್ಲಿ ಮುಂದಿನ 2 ಅಥವಾ 3 ವರ್ಷಗಳಲ್ಲಿ ವಿದ್ಯುತ್ ಕೊರತೆ ಉಂಟಾಗುವುದನ್ನು ನಾವು ಮುಂಗಾಣುತ್ತಿದ್ದೇವೆ. ಅವರು ಕಾಳನದಿ ಯೋಜನೆಯ 2 ಮತ್ತು 3ನೇ ಹಂತಗಳಿಗೆ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತಾರೆ. ಇದರಿಂದ ಅವರಿಗೆ ವಿದ್ಯುತ್ ಕೊರತೆಯನ್ನು ನೀಗಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಯೋಜನೆಯ ಶರಾವತಿ ಕಣಿವೆ ಯೋಜನೆಗಿಂತ ಬಹುದೊಡ್ಡ ಪ್ರಮಾಣದ್ದಾಗಿರುತ್ತದೆ.

ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದಲ್ಲಿ ನಿಗದಿತ ಗುರಿಯನ್ನು ತಲುಪಲು ನಮಗೆ 23 ದಶಲಕ್ಷ ಕಿಲೊ ವ್ಯಾಟ್ ವಿದ್ಯುತ್ ಉತ್ಪಾದನೆ ಮಾಡುವ ಅಗತ್ಯವಿರುತ್ತದೆ. ಆದರೆ ಈವರೆಗೆ ನಾವು ಸಾಧಿಸಿರುವ ಪ್ರಮಾಣವೆಷ್ಟು? ಒಟ್ಟು ನಿಗದಿತ ಗುರಿಯ 2/3 ಭಾಗ ದಷ್ಟು ಮಾತ್ರ ಸಾಧಿಸಿದ್ದೇವೆ. ಪೂರ್ತಿಗಾಗಿ ಸಾಧಿಸಲು ಏಕೆ ಸಾಧ್ಯವಾಗಿಲ್ಲ? ಇದಕ್ಕೆ ಕಾರಣ ಹೀಗಿದೆ: ಸ್ಥಳೀಯವಾದ ಯಂತ್ರಗಳು, ಸಾಮಗ್ರಿಗಳು ಮತ್ತು ಉಪಕರಣಗಳ ಉತ್ಪಾದನೆಯ ಮೂಲಕ ಇದನ್ನು ಸಾಧಿಸುವುದು ಸಾಧ್ಯವಾಗಿದೆ. ಈ ಸಾಮಗ್ರಿಗಳಿಂದ ನಾವು ನಮ್ಮ ಗುರಿ ತಲುಪುವುದು ಸಾಧ್ಯವೇ ಇಲ್ಲ ಎನ್ನುವುದು ನನ್ನ ಭಾವನೆ. ಆದ್ದರಿಂದ ಮಾನ್ಯ ಸಚಿವರಲ್ಲಿ ನಾನು ವಿನಂತಿಸುವುದೇನೆಂದರೆ, ಯಂತ್ರಗಳು ಉಪಕರಣಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದರ ಬಗ್ಗೆ ಪರಿಗಣಿಸಬೇಕು. ಇದರಿಂದ, ನಮ್ಮ ಗುರಿಯನ್ನು ನಿಗದಿತ ಅವಧಿಯಲ್ಲಿ ಮುಟ್ಟಲು ಸಾಧ್ಯವಾಗುತ್ತದೆ.

ಶರಾವತಿ ಕಣಿವೆ ಪ್ರಯೋಜನೆಯಲ್ಲಿಯೂ ಕೂಡ 9 ಮತ್ತು 10ನೇ ಘಟಕಗಳನ್ನು ಹಲವಾರು ವರ್ಷಗಳಾದರೂ ಪೂರೈಸಲು ಸಾಧ್ಯವಾಗಿಲ್ಲ. ಇದಕ್ಕೆ ಕಾರಣ, ಸ್ಥಳೀಯ ಉತ್ಪಾದನೆಯಿಂದ ದೇಶದ ಅಗತ್ಯಗಳನ್ನು ಪೂರೈಸಲು ಆಗಿಲ್ಲ. ಸಚಿವಾಲಯವು ವಿದೇಶಿ ಯಂತ್ರಗಳಿಗೆ ಆಮದು ಪರವಾನಗಿ ನೀಡುವುದರಿಂದ ಇದನ್ನು ಸಾಧ್ಯವಾಗಿಸಬಹುದು.

ಕಲ್ಪಕಂ ಪ್ರಾಯೋಜನೆಯ ಪೂರ್ಣ ಮೊತ್ತವನ್ನು ಕೇಂದ್ರ ಸರ್ಕಾರವೇ ಭರಿಸಿವೆ. ದಕ್ಷಿಣ ಪ್ರಾಂತಗಳ ವಿದ್ಯುತ್ ಮಂಡಳಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳ ಸಭೆಯಲ್ಲಿ ಮದ್ರಾಸು, ಮೈಸೂರು, ಆಂಧ್ರಪ್ರದೇಶಗಳ ತಲಾ 1/3 ಭಾಗ ಪಡೆಯುತ್ತದೆಂದು ನಿರ್ಣಯ ಕೈಗೊಳ್ಳಲಾಯಿತು. ಆದರೆ ಈ ನಿರ್ಣಯ ಇನ್ನು ಜಾರಿಗೊಂಡಿಲ್ಲ. ಇದು ಜಾರಿಗೊಂಡರೆ ಮುಂದಿನ 2 ವರ್ಷಗಳಿಗೆ, ನಮ್ಮ ರಾಜ್ಯಕ್ಕೆ ಹಾಗೂ ದೇಶಕ್ಕೆ ಸೂಕ್ತ ಪರಿಹಾರ ಒದಗಿದಂತಾಗುತ್ತದೆ.

ವಿತರಣ ಮತ್ತು ಪರಿವಹನ ವ್ಯವಸ್ಥೆಯಲ್ಲಿ ಹೆಚ್ಚು ನಷ್ಟವುಂಟಾಗಿರುತ್ತದೆ. ಈ ಬಗ್ಗೆ ತಜ್ಞರ ಸಮಿತಿಯು ಪರಿಶೀಲನೆ ಮಾಡಬೇಕಾಗುತ್ತದೆ.

ಗ್ರಾಮೀಣ ವಿದ್ಯುದ್ದೀಕರಣಕ್ಕೆ ಸಂಬಂಧಿಸಿದಂತೆ ಹರಿಜನ ಹಾಗೂ ಪರಿಶಿಷ್ಟ ಪಂಗಡದವರು ವಾಸಿಸುತ್ತಿರುವ ಪ್ರದೇಶಗಳನ್ನು ಲೈನು ಮಿನಿಮಮ್ ಅನ್ನು ಕಡ್ಡಾಯ ಮಾಡಬಾರದು. ಈ ಪ್ರದೇಶಗಳಿಗೆ ಹೆಚ್ಚಿನ ಆದ್ಯತೆ ನೀಡಬೇಕು. ಸಾಲಗಳಿಗೆ ಸಂಬಂಧಿಸಿದಂತೆ ಮೊದಲ 5 ವರ್ಷಗಳಿಗೆ ಬಡ್ಡಿ ರಹಿತವಾದ ಸಾಲನೀಡಬೇಕು., ಅನಂತರ ಅವರಿಗೆ ಕಡಿಮೆ ಬಡ್ಡಿ ದರವನ್ನು ನಿಗದಿಪಡಿಸಬೇಕು.

ಅಂತರ್ಜಲ ಸಂಪನ್ಮೂಲ ಸಮೀಕ್ಷೆಯಿಂದ ಹಳ್ಳಿಗಳಲ್ಲಿ ವಿದ್ಯುದೀಕರಣಕ್ಕೆ ಹಾಗೂ ನೀರಾವರಿ ಪಂಪ್‌ಸೆಟ್‌ಗಳಿಗೆ ವಿನಿಯೋಗಿಸುವ ಹಣ ಉಪಯುಕ್ತವಾಗಿದೆಯೇ ಎಂಬುದನ್ನು ನಿರ್ಧರಿಸಬೇಕು.

ಕೃಷ್ಣಾ ನದಿಯ ಆಲಮಟ್ಟಿ ನಾರಾಯಣಪುರ ಅಚ್ಚುಕಟ್ಟು ಪ್ರದೇಶಗಳಿಗೆ ಸಂಬಂಧಿಸಿದಂತೆ ಪ್ರಸ್ತಾವನೆ ಸಲ್ಲಿಸಿದ್ದು, ಇದು ಜಾರಿಗೊಂಡಿರುವುದಿಲ್ಲ. ಈ ಬಗ್ಗೆ ವಿಶ್ವಬ್ಯಾಂಕ್ ಕೂಡ ನೆರವು ನೀಡಲು ಮುಂದಾಗಿದ್ದು ಆದರೆ ಇದರಲ್ಲಿ ಅಂತರರಾಜ್ಯ ಸಮಸ್ಯೆ ಇರುವುದರಿಂದ ಹಿಂತೆಗೆದುಕೊಂಡಿದೆ. ವಿಶ್ವ ಬ್ಯಾಂಕು ನೆರವು ಪಡೆದರೆ, ಈ ಯೋಜನೆಗಳು ಕೈಗೂಡಿ ಸಮಸ್ಯೆ ಪರಿಹಾರವಾಗುತ್ತದೆಂದು ಭಾವಿಸಿದ್ದೇನೆ. ಇದಕ್ಕೆ ವ್ಯತಿರಿಕ್ತವಾಗಿ ಪೋಚಮ್ ಪಟ್ಟು ಪ್ರಾಯೋಜನೆಗೆ ವಿಶ್ವಬ್ಯಾಂಕು ನೆರವು ದೊರತಿದ್ದು ಭಾರತ ಸರ್ಕಾರವೂ ಕೂಡ ಮಂಜೂರಾತಿ ನೀಡಿದೆ. ಈ ನೆರವನ್ನು, ನಮ್ಮ ರಾಜ್ಯಕ್ಕೆ ಏಕೆ ಕೊಟ್ಟಿಲ್ಲ.

ಕಾವೇರಿ ನದಿಗೆ ಸಂಬಂಧಿಸಿದಂತೆ ಹಾರಂಗಿ ಮತ್ತು ಯಗಚಿ ಹಾಗೂ ಇನ್ನು ಹಲವಾರು ಯೋಜನೆಗಳಿಗೆ ಮದ್ರಾಸು ಸರ್ಕಾರದೊಂದಿಗೆ 1924 ರಲ್ಲಿಯೇ ಒಪ್ಪಂದವಾಗಿದ್ದರೂ ಕೂಡ ಇನ್ನೂ ಏಕೆ ಜಾರಿಗೆ ಬಂದಿಲ್ಲವೆಂದು ನನಗೆ

ಅರ್ಥವಾಗುತ್ತಿಲ್ಲ. ಮದ್ರಾಸಿನ ಭವಾನಿ ಮತ್ತು ನೊಯಿವೇಲಿ ಮತ್ತಿತರ ಯೋಜನೆಗಳಿಗೆ ನಮ್ಮ ಸರ್ಕಾರ ವಿರೋಧಿಸಿದ್ದಾದರೂ ಕೂಡ ಕೇಂದ್ರವು ಅವರಿಗೆ ಅನುಮೋದನೆ ನೀಡಿರುತ್ತದೆ. ಎರಡೂ ರಾಜ್ಯಗಳ ಬಗ್ಗೆ ಕೇಂದ್ರದ ತಾರತಮ್ಯ ನಿಲುವು ನಮಗೆ ಅರ್ಥವಾಗಿಲ್ಲ. ಈ ಬಗ್ಗೆ ಮಾನ್ಯ ಸಚಿವರು ಗಮನಹರಿಸಿ, ನಮ್ಮ ರಾಜ್ಯದ ಯೋಜನೆಗಳಿಗೆ ಕೇಂದ್ರದ ಒಪ್ಪಿಗೆ ಪಡೆಯಬೇಕಾಗಿ ನಾನು ಸೂಚಿಸಬಯಸುತ್ತೇನೆ.

ಕೊನೆಯದಾಗಿ ತುಂಗಭದ್ರ ಪ್ರಾಯೋಜನೆಯಲ್ಲಿ ಕಾಲುವೆ ನಿರ್ಮಾಣ ಕಾರ್ಯ ಪೂರ್ಣಗೊಂಡಿದ್ದಾಗಿಯೂ ಇದರ ನಿರ್ವಹಣಾ ಕಾರ್ಯ ನಡೆಯುತ್ತಿಲ್ಲ. ಈ ಯೋಜನೆಯ ಮುಖ್ಯಭಾಗ ನಮ್ಮ ರಾಜ್ಯದಾಗಿದ್ದು, ಇದರ ನಿರ್ವಹಣೆಯನ್ನು ನಮ್ಮ ರಾಜ್ಯಕ್ಕೆ ವಹಿಸಿಕೊಡುವ ಬಗ್ಗೆ ಸಚಿವರು ಕ್ರಮಕೈಗೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇನೆ.

# ವಿಮಾನಯಾನ ಯೋಜನೆ ಕುರಿತು ಚರ್ಚೆ

**ಶ್ರೀ ಕೊಂಡಜ್ಜಿ ಬಸಪ್ಪ:** ವಿಮಾನಯಾನ–ಯೋಜನೆಯೂ 1969–70 ರಲ್ಲಿ ಕೆಲವು ತೊಂದರೆಗಳನ್ನು ಎದುರಿಸಿದ್ದಾಗಿದ್ದರೂ ಸಹ ಮುಂದೆ 5–10 ವರ್ಷಗಳಿಗೆ ಇದು ಪ್ರಗತಿಯಾಗಬೇಕೆಂದು ನಾನು ನಿರೀಕ್ಷಿಸುತ್ತೇನೆ. ಇದಕ್ಕಾಗಿ ಕೆಲವು ಒಪ್ಪಂದಗಳನ್ನು ಮಾಡಲಾಗಿರುವುದು ಸಂತೋಷದ ವಿಷಯ. ಕೆಲವು ಹಳೆಯ ಉಪಯುಕ್ತವಲ್ಲದ ವಿಮಾನಗಳನ್ನು ತೆಗೆದು ಹೊಸ ತಂತ್ರಜ್ಞಾನದ ವಿಮಾನಗಳನ್ನು ಖರೀದಿಸಿಬೇಕೆಂದು ವಿನಂತಿಸಿತ್ತೇನೆ. ಹಾಗೂ ವಿಮಾನಗಳಲ್ಲಿ ನೀಡುವ ಸಸ್ಯಾಹಾರಿ ಆಹಾರ ಕ್ರಮದಲ್ಲಿ ಸ್ಥಳೀಯ ಆಹಾರಗಳನ್ನು ಸೇರಿಸಬೇಕು. ವಿಮಾನ ನಿಲ್ದಾಣಗಳು ಸಹ ನವೀನಗೊಳ್ಳಬೇಕು. ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳ ನಿರ್ವಹಣೆ ಉತ್ತಮಮಟ್ಟದಾಗಬೇಕು.

ಟಿಕೇಟು ಕಾಯ್ದಿರಿಸುವ ವ್ಯವಸ್ಥೆಯಲ್ಲಿ ಕಂಪ್ಯೂಟರಿಕರಣವಾಗಬೇಕು. ನಮ್ಮ ದೇಶದಲ್ಲಿ ಪ್ರವಾಸೋದ್ಯಮದಲ್ಲಿ ಗಣನೀಯ ಮಟ್ಟದ್ದಾಗಿದೆ. ಆದ್ದರಿಂದ ಪ್ರವಾಸಿಗರಿಗೆ ಆಸಕ್ತಿ ಇರುವ ಪ್ರದೇಶಗಳಲ್ಲಿ ಹೆಚ್ಚಿನ ಸುಧಾರಣೆಯಾಗಬೇಕು. ವಿದ್ಯಾರ್ಥಿಗಳಿಗೆ ದರ ರಿಯಾಯತಿಕೊಡಬೇಕು. ಹೋಟೇಲು ಉದ್ಯಮದಲ್ಲಿ ವಿದ್ಯಾರ್ಥಿಗಳಿಗೆ ತರಬೇತಿ ನೀಡಬೇಕು ಹಾಗೂ ಪ್ರಾದೇಶಿಕ ಭಾಷೆಗಳ ಬಗ್ಗೆ ಅರಿವು ಮೂಡಿಸಬೇಕು. ಬಂಡಿಪುರ ಮತ್ತು ಖಾನಾಪುರ ವನ್ಯಜೀವಿ ಸಂರಕ್ಷಣಾ ವಿಧಾನಗಳ ಬಗ್ಗೆ ಹೆಚ್ಚಿ ಆಸಕ್ತಿ ತೋರಿ ಪ್ರಗತಿ ಸಾಧಿಸಬೇಕು.

ಸಣ್ಣ ಪ್ರಮಾಣದ ಉದ್ಯಮದಲ್ಲಿ ಅಗತ್ಯ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುವಂತೆ ಅವಕಾಶ ಮಾಡಿಕೊಡಬೇಕು. ಹೊಸಪೇಟೆ ಉಕ್ಕಿನ ಯೋಜನೆ ಸ್ಥಗಿತವಾಗಿರುವುದು ಏಕೆ?

ತುಂಗಭದ್ರ ಉಕ್ಕು ಉತ್ಪಾದನೆ ನಿಗಮ ಸಲ್ಲಿಸಿರುವ ಯೋಜನೆಗಳಿಗೆ ಅಗತ್ಯ ಮಾರ್ಪಾಡು ಮಾಡಿ ಒಪ್ಪಿಗೆ ನೀಡಬೇಕು.

ಕುದುರೆಮುಖ ಗಣಿ ಯೋಜನೆ: ನಮ್ಮ ರಾಜ್ಯದ ಮೊಟ್ಟ ಮೊದಲ ಯೋಜನೆಯಾಗಿದ್ದು. ಇದು ನಿಧಾನವಾಗುತ್ತಿರುವ ಕಾರಣ ನನಗೆ ತಿಳಿಯುತ್ತಿಲ್ಲ. ಇದರಿಂದ ವಿದೇಶಿ ವಿನಿಮಯಕ್ಕೆ ಹೆಚ್ಚಿನ ಅವಕಾಶವಿರುವುದರಿಂದ ಮಾನ್ಯ ಸಚಿವರು ಈ ಬಗೆಗೆ ಶೀಘ್ರಕ್ರಮ ಕೈಗೊಳ್ಳಬೇಕೆಂದು ಕೋರುತ್ತೇನೆ. 'ಆಟೋ–ಎಕ್ಸ್‌ಚೇಂಜ್'

ಬಗ್ಗೆ ತಮ್ಮ ಗಮನ ಸೆಳೆಯಲು ಇಚ್ಛಿಸುತ್ತೇನೆ. ನಮ್ಮ ದೇಶದ ಎಲ್ಲಾ ನಗರಗಳಲ್ಲಿಯೂ ಇವುಗಳ ಇರುವುದರ ಅಗತ್ಯವಿದೆ. ಆದರೆ ಸಣ್ಣ ಹಳ್ಳಿಗಳಲ್ಲಿರುವುದು ಕಂಡು ಬಂದಿದೆ. ಆದರೆ ನನ್ನ ಚುನಾವಣೆಯ ಕ್ಷೇತ್ರವಾದ ದಾವಣಗೆರೆ, ದಕ್ಷಿಣ ಭಾರತದಲ್ಲಿಯೇ ಬಹುಮುಖ್ಯವಾದ ಕೈಗಾರಿಕಾ ನಗರವೆಂದು ಪ್ರಾಮುಖ್ಯತೆ ಪಡೆದಿದ್ದರೂ ಅಲ್ಲಿ ಆಟೋ ಎಕ್ಸ್‌ಚೇಂಜ್‌ಗಳಿಲ್ಲ. ಈ ಬಗೆಗೆ ಅಲ್ಲಿಂದ ಬೇಡಿಕೆ ಬಂದಿದ್ದರೂ ಸಹ ಪರಿಗಣಿಸಿಲ್ಲ. ನಾನು ಮಂತ್ರಿ ಮಹೋದಯರಲ್ಲಿ ವಿನಂತಿಸಿಕೊಳ್ಳುವುದೇನೆಂದರೆ, ಪ್ರತಿಯೊಂದು ವಾಣಿಜ್ಯ ನಗರಗಳಲ್ಲಿ ಆಟೋ ಎಕ್ಸ್‌ಚೇಂಜ್ ಹೊಂದುವಂತಾದರೆ, ಅಲ್ಲಿನ ವ್ಯಾಪಾರಸ್ಥರಿಗೂ ಹಾಗೂ ಇತರರಿಗೂ ಅದರ ಲಾಭವನ್ನು ಪಡೆಯುವಂತಾಗುತ್ತದೆ. ತಾವು ಈ ಬಗೆಗೆ ಗಮನ ಹರಿಸಬೇಕೆಂದು ಕೋರುತ್ತೇನೆ.

## ರೈಲ್ವೆ ಇಲಾಖೆಯ ಮೇಲಿನ ಚರ್ಚೆ

14ನೇ ಜೂನ್ 1971

ಶ್ರೀ ಕೊಂಡಜ್ಜಿ ಬಸಪ್ಪ (ಚಿತ್ರದುರ್ಗ) : ರೈಲ್ವೆಯ ಬೇಡಿಕೆಗಳಿಗೆ ಬೆಂಬಲವನ್ನು ಸೂಚಿಸುತ್ತ, ನಾನು ಕೆಲವು ಸಲಹೆಗಳನ್ನು ಮಾಡಲು ಇಚ್ಛಿಸುತ್ತೇನೆ.

ಮೀಟರ್‌ಗೇಜ್‌ನಿಂದ ಬ್ರಾಡ್‌ಗೇಜ್‌ಗೆ ಪರಿವರ್ತಿಸುವ ಸರ್ಕಾರದ ಕೆಲಸ ತುಂಬಾ ನಿಧಾನಗತಿಯಲ್ಲಿದೆ. ಪ್ರಸ್ತುತ ಸುಮಾರು 30,000 ಕಿ.ಮಿ. ಮೀಟರ್‌ಗೇಜ್ ಇದೆ. ಪ್ರಸ್ತುತದಲ್ಲಿ ಬ್ರಾಡ್‌ಗೇಜ್‌ಗೆ ಪರಿವರ್ತನೆಯಾಗಲು ಹಲವಾರು ದಶಕಗಳು ಆಗುವುದರಿಂದ ಸಂಚರಿಸುವ ಸಾರ್ವಜನಿಕರಿಗೆ ಪ್ರಯೋಜನವಾಗುವುದು ಎಂದು ಹೇಳುತ್ತೇನೆ. ಉದಾಹರಣೆಗಾಗಿ. ಬೆಂಗಳೂರು. ಮದ್ರಾಸ್–ದೆಹಲಿ ಮತ್ತು ಬೆಂಗಳೂರು ಗುಂಟಕಲ್–ಸಿಕಂದರಾಬಾದ್–ದೆಹಲಿ–ಈ ಎರಡು ಮಾರ್ಗಗಳನ್ನು ತೆಗೆದುಕೊಂಡರೆ 2 ನೇ ಮಾರ್ಗದಲ್ಲಿ ಮೊದಲನೇ ಮಾರ್ಗಕ್ಕಿಂತ 200 ಕಿ.ಮೀ ಕಡಿಮೆ ಇದೆ. ಡೀಸಲ್ ಇಂಜಿನ್‌ನೊಂದಿಗೆ ವೇಗದ ರೈಲುಗಳನ್ನು ಓಡಿಸಿದರೆ. ಸಂಚರಿಸುವ ಸಾರ್ವಜನಿಕರಿಗೆ ತಕ್ಷಣ ಅವಶ್ಯಕತೆಗಳನ್ನು ಪೂರೈಸಿದಂತಾಗುತ್ತದೆ.

ರೈಲ್ವೆ ಆಡಳಿತದ ವಿಷಯಕ್ಕೆ ಬಂದರೆ. ನನ್ನ ಕ್ಷೇತ್ರವಾದ ದಾವಣಗೆರೆಯಲ್ಲಿ ಒಟ್ಟು 4 ವಿಶ್ರಾಂತಿ ಕೊಠಡಿಗಳಿವೆ. ಒಂದು ವಿಶ್ರಾಂತಿ ಕೊಠಡಿಯನ್ನು ಕಾಯ್ದಿರಿಸಲು ಹೋದಾಗ ನನ್ನ ಗಮನಕ್ಕೆ ಬಂದ ವಿಷಯವೆಂದರೆ ಒಂದು ವಿಶ್ರಾಂತಿ ಕೊಠಡಿಯಲ್ಲಿ ಆಫೀಸ್ ನಡೆಯುತ್ತಿದೆ. ವರಾಂಡವನ್ನು ಸಹ ಆಫೀಸ್‌ಗಾಗಿ ಬಳಸಿಕೊಂಡಿದ್ದಾರೆ. ಇನ್ನೊಂದು ವಿಶ್ರಾಂತಿ ಕೊಠಡಿಯನ್ನು ಪರ್ಮನೆಂಟ್ ನೌಕರರು ಉಪಯೋಗಿಸಿಕೊಂಡಿದ್ದಾರೆ. ಆದ್ದರಿಂದ ಎರಡು ವಿಶ್ರಾಂತಿ ಕೊಠಡಿಗಳು ಮಾತ್ರ ಉಳಿದಿವೆ. ಈ ವಿಶ್ರಾಂತಿ ಕೊಠಡಿಗಳನ್ನು ಕಟ್ಟಿಸಿರುವುದು ಆಫೀಸ್ ಬಳಕೆಗಾಗಿಯೇ? ತ್ವರಿತವಾಗಿ ಇದನ್ನು ಪರಿಶೀಲಿಸಬೇಕೆಂದು ಮಾನ್ಯ ಮಂತ್ರಿಯವರನ್ನು ನಾನು ಕೇಳಿಕೊಳ್ಳುತ್ತೇನೆ.

ಬಹುಕಾಲದಿಂದ ಬೇಡಿಕೆಯಲ್ಲಿರುವ ರಾಜ್ಯದ ಕೆಲವು ಮಾರ್ಗಗಳಿವೆ. ಅವು ಹುಬ್ಬಳ್ಳಿಯಿಂದ ಕಾರವಾರ ನಡುವಿನ ಮಾರ್ಗವು ಬಹುಕಾಲದಿಂದ ಬೇಡಿಕೆಯಲ್ಲಿದೆ. ದೋಣಿಮಲೈ ಕಬ್ಬಿಣ ಅದಿರು ಯೋಜನೆಗೆ ಸಮೀಪವಿರುವ ಬಂದರು ಕಾರವಾರ. ಆದ್ದರಿಂದ ಕಬ್ಬಿಣದ ಅದಿರನ್ನು ಸಾಗಿಸಲು ಈ ಮಾರ್ಗ ತ್ವರಿತಗತಿಯಲ್ಲಿ ನಿರ್ಮಾಣವಾಗಬೇಕು.

ಯಾವುದೇ ರೈಲು ಹೋದರೂ ಅರ್ಧ ಘಂಟೆಯವರೆಗೆ ಮಾರ್ಗದ ಎರಡು ಬದಿಯಲ್ಲಿ ಸಂಚಾರ ದಟ್ಟಣೆಯಿರುವುದು ಹಾಗೂ ಇದರಿಂದ ಜನರಿಗೆ ತುಂಬಾ ಅನಾನುಕೂಲವಾಗುತ್ತಿದೆ. ಆದ್ದರಿಂದ, ಪ್ರಮುಖ ನಗರಗಳಲ್ಲಿ ಮೇಲು ಸೇತುವೆ ಮತ್ತು ಕೆಳಸೇತುವೆ ನೀಡುವ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸಬೇಕೆಂದು ಸೂಚಿಸುತ್ತೇನೆ.

ಪ್ರಸ್ತುತ, ಬೆಂಗಳೂರಿನಿಂದ ತಾಳಗುಪ್ಪದವರೆಗೆ ನೇರ ಮಾರ್ಗವಿಲ್ಲ. ಅದಕ್ಕೆ ನೇರ ಮಾರ್ಗವನ್ನು ಮಾಡಬೇಕು. ಬೀರೂರುನಿಂದ ತಾಳಗುಪ್ಪಕ್ಕೆ ರೈಲು ಮಾತ್ರವೇ ಚಲಿಸುತ್ತದೆ. ಪ್ರಥಮ ದರ್ಜೆ ಮತ್ತು ದ್ವಿತೀಯ ದರ್ಜೆ ತೃತೀಯ ದರ್ಜೆ ರೈಲುಗಳನ್ನು ಯಾಕೆ ನೀಡಿಲ್ಲ? ಪ್ರಥಮ ದರ್ಜೆಯಲ್ಲಿ ಯಾವ ಪ್ರಯಾಣಿಕರು ಸಂಚರಿಸುವುದಿಲ್ಲವೆಂದು ಅವರು ತಿಳಿದಿದ್ದಾರೆಯೇ? ಅಲ್ಲಿ ಪ್ರಮುಖ ವಾಣಿಜ್ಯ ನಗರಗಳು ಇರುವುದರಿಂದ ತ್ವರಿತವಾಗಿ ಪ್ರಥಮ ಮತ್ತು ದ್ವಿತೀಯ ದರ್ಜೆಯ ರೈಲುಗಳನ್ನು ಪರಿಚಯಿಸಬೇಕು. ಪ್ರಸ್ತುತ, ಇನ್ನೊಂದು ರಾಜಧಾನಿ ಎಕ್ಸ್‌ಪ್ರೆಸ್‌ನ್ನು ದೆಹಲಿಯಿಂದ ಸಿಕಂದರಾಬಾದ್‌ವರೆಗೆ ಓಡಿಸುವ ಪ್ರಸ್ತಾವನೆಯಿದೆ. ಇದನ್ನು ಗುಂತಕಲ್ ನಂತರ ಬೆಂಗಳೂರುವರೆಗೆ ಏಕೆ ಓಡಿಸಬಾರದು? ಇದು ಧೀರ್ಘಾವಧಿಯಲ್ಲಿ ನಮಗೆ ಉಪಯೋಗವಾಗುತ್ತವೆ. ಈ ಸಲಹೆಗಳ ಮೂಲಕ ರೈಲ್ವೆ ಸಚಿವಾಲಯದ ಗ್ರಾಂಟ್ಸ್‌ನ ಬೇಡಿಕೆಗಳನ್ನು ನಾನು ಬೆಂಬಲಿಸುತ್ತೇನೆ.

# ದೇಶದಲ್ಲಿ ಬರಗಾಲ

**ಶ್ರೀ ಕೊಂಡಜ್ಜಿ ಬಸಪ್ಪ** : (1972) ಸರ್ ಮೈಸೂರಿನಲ್ಲಿ ಬರಗಾಲದಿಂದ ಕ್ಷಾಮ ಹರಡುತ್ತಿದೆ. 19 ಜಿಲ್ಲೆಗಳಲ್ಲಿ 16, ಜಿಲ್ಲೆಗಳಲ್ಲಿ ಬರಗಾಲವಿದೆ. ಈ 16 ಜಿಲ್ಲೆಗಳಲ್ಲಿ ತೀಕ್ಷ್ಣವಾಗಿ ತೊಂದರೆಗೀಡಾಗಿರದ 6 ಜಿಲ್ಲೆಗಳಾವುವೆಂದರೆ, ಬಿಜಾಪುರ, ಚಿತ್ರದುರ್ಗ, ಬಳ್ಳಾರಿ, ತುಮಕೂರು, ಕೋಲಾರ ಮತ್ತು ಗುಲ್ಬರ್ಗಾ. ದಕ್ಷಿಣ ಕನ್ನಡದ ಜಿಲ್ಲೆಗಳಲ್ಲಿ ಯಾವಾಗಲೂ ಸಮುದ್ರದ ಕೊರೆತ ಹಾಗೂ ಮಳೆಗಾಲದಲ್ಲಿ ಅವಧಿಯಲ್ಲಿ ಕರಾವಳಿ ತೀರ ಪ್ರದೇಶಗಳಾದ ಕಾಪು ಮತ್ತು ಮರವಂತಗಳಲ್ಲಿ ಜಮೀನುಗಳು ನಾಶವಾಗುತ್ತಿವೆ.

ಡಾ. ಹೆನ್ರಿ ಆಸ್ಟಿನ್‌ರವರು ನೀಡಿರುವ ಸಲಹೆಯಂತೆ ಸಮುದ್ರ ಕೊರೆತವನ್ನು ತಡೆಹಿಡಿಯುವ ದಾರಿ ಮತ್ತು ಕ್ರಮಗಳನ್ನು ಕಂಡು ಹಿಡಿಯಲು ಸರ್ಕಾರವು ರಾಷ್ಟ್ರೀಯ ಮಂಡಳಿಯನ್ನು ನೇಮಿಸಬೇಕು.

ಚಿತ್ರದುರ್ಗ ಮತ್ತು ರಾಯದುರ್ಗ ಮಧ್ಯದ ರೈಲ್ವೆ ಮಾರ್ಗದಂತಹ ಶಾಶ್ವತ ಪರಿಹಾರ ಕಾರ್ಯಗಳನ್ನು ಕೈಗೆತ್ತಿಗೊಳ್ಳಬೇಕಾಗಿದೆ. ಈ ರೈಲು ಮಾರ್ಗವು ಚಿತ್ರದುರ್ಗದ ಧೀರ್ಘಕಾಲ ಬರಗಾಲ ಪೀಡಿತ ಪ್ರದೇಶಗಳಿಗೆ ಉಪಯೋಗವಾಗುವುದು. ಇದೇ ರೀತಿಯಲ್ಲಿ ಕೊಟ್ಟೂರು ಮತ್ತು ಹರಿಹರ ಹಾಗೂ ಚಾಮರಾಜನಗರ ಮತ್ತು ಕೊಯಮತ್ತೂರು ಮಧ್ಯದ ರೈಲ್ವೆ ಮಾರ್ಗಗಳನ್ನು ಕೈಗೆತ್ತಿಕೊಳ್ಳಬೇಕು. ಇದರಿಂದ ಕಾಲಾನುಕ್ರಮದಲ್ಲಿ ಬರಗಾಲ ಪೀಡಿತ ಪ್ರದೇಶಗಳಿಗೆ ಅನುಕೂಲವಾಗುವುದು.

ಹಂಚಿಕೆಯಾಗಿರುವ ನೀರಿನಲ್ಲಿ ಕೃಷ್ಣ ಮೇಲ್ದಂಡೆ ಯೋಜನೆಗೆ ಮತ್ತು ಬೆಳಗಾಂನಲ್ಲಿರುವ ಘಟಪ್ರಭಾದ ಬಲದಂಡೆ ಕಾಲುವೆಗೆ ಇರುವ ಅಡ್ಡಿ–ಅಡಚಣೆಗಳನ್ನು ನೀರಾವರಿ ಮಂತ್ರಿ ಅವರು ಅಲ್ಲದೆ ಭಾರತ ಸರ್ಕಾರದ ಪರಿಗಣನೆಯಲ್ಲಿರುವ ಇತರೆ ಯೋಜನೆಗಳಾದ ಯಗಚಿ ಯೋಜನೆ ಇತ್ಯಾದಿಗಳಿಗೆ ಆಜ್ಞೆ ನೀಡಬೇಕು. ಇವುಗಳನ್ನು ಮಾಡುವುದರಿಂದ ನೀರಿನ ಕೊರತೆಯಿಂದ ತೊಂದರೆಯಾಗಿರುವ ಪ್ರದೇಶಗಳಾದ ಬೆಳಗಾಂ, ಬಿಜಾಪುರ, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳಿಗೆ ತುಂಬಾ ಅನುಕೂಲವಾಗುತ್ತದೆ.

# ಗೃಹ ವ್ಯವಹಾರಗಳ ಮೇಲಿನ ಚರ್ಚೆ

1972

ಶ್ರೀ ಕೊಂಡಜ್ಜಿ ಬಸಪ್ಪ (ಚಿತ್ರದುರ್ಗ): ಮಾನ್ಯ ಉಪ-ಸಭಾಪತಿಯವರೇ, ಈಗ ಗೃಹ ವ್ಯವಹಾರಗಳ ಸಚಿವಾಲಯಕ್ಕೆ ಸಂಬಂಧಿಸಿದಂತೆ ಗ್ರಾಂಟ್ಸ್ ಬೇಡಿಕೆಗಳನ್ನು ಬೆಂಬಲಿಸುವಾಗ ಸದನದ ಮುಂದೆ ಕೆಲವು ಅಂಶಗಳನ್ನು ಇಡಲು ಇಚ್ಛಿಸುತ್ತೇನೆ. ಮೊದಲನೆಯದಾಗಿ, ರಾಜ್ಯಗಳ ಪುನರ್‌ರಚನೆ ಕಾಯ್ದೆ ಜಾರಿಗೆ ಬಂದು 15 ವರ್ಷಗಳು ಕಳೆದರೂ ಅಂತರ್‌ರಾಜ್ಯ ಅಧಿಕಾರಿಗಳ ಜ್ಯೇಷ್ಠತೆಯನ್ನು ಕೆಲವೊಂದು ರಾಜ್ಯಗಳಲ್ಲಿ ಇನ್ನು ಅಂತಿಮಗೊಳಿಸಿಲ್ಲ. ಇದು ಈ ಅಧಿಕಾರಿಗಳಲ್ಲಿ ಬಹಳ ಹತಾಶೆ ಮತ್ತು ಅತೃಪ್ತಿಯನ್ನುಂಟು ಮಾಡಿಸಿರುವುದರಿಂದ ಸಂಬಂಧಪಟ್ಟ ರಾಜ್ಯಗಳಲ್ಲಿ ಅದಕ್ಷ ಆಡಳಿತವನ್ನು ನೋಡಬಹುದಾಗಿದೆ. ಸಚಿವಾಲಯವು ಈ ಪ್ರಶ್ನೆಯನ್ನು ಪರಿಶೀಲಿಸಿ, ಸಾಧ್ಯವಾದಷ್ಟು ಬೇಗ ಜ್ಯೇಷ್ಠತೆಯನ್ನು ಅಂತಿಮಗೊಳಿಸುವ ಕ್ರಮ ಕೈಗೊಳ್ಳುತ್ತದೆ ಎಂಬ ಭರವಸೆಯಿದೆ. ಆಲ್ ಇಂಡಿಯಾ ಸರ್ವಿಸಸ್‌ಗೆ ಸಂಬಂಧಿಸಿದಂತೆ. ಉದಾ: ಐ.ಎ.ಎಸ್., ಅರಣ್ಯ, ಶಿಕ್ಷಣ, ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಮಾದರಿಯ ಸೇವೆಗಳನ್ನು ರಚಿಸಲು ಸರ್ಕಾರವು ತೀರ್ಮಾನ ತೆಗೆದುಕೊಳ್ಳಲಿ. ಆದರೆ ಈಗಾಗಲೇ ಅರಣ್ಯ ವಿಭಾಗದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಇತರೇ ಮೂರು ವಿಭಾಗಗಳಲ್ಲಿ ಇದುವರೆಗೂ ಈ ಸೇವೆಗಳನ್ನು ಸ್ಥಾಪಿಸಲಾಗಿಲ್ಲ. ಏಕೆಂದರೆ ಕೆಲವು ರಾಜ್ಯಗಳು ಈ ಕಾರ್ಯರೂಪವನ್ನು ಅನುಷ್ಠಾನಗೊಳಿಸಲು ಅಪ್ಪಣೆ ನೀಡಿಲ್ಲ. ಶೀಘ್ರದಲ್ಲಿ ಈ ಸ್ಕೀಮ್‌ನ್ನು ಅನುಷ್ಠಾನಗೊಳಿಸಲು ಸಚಿವಾಲಯವು ಏನಾದರೂ ಮಾಡುತ್ತದೆ ಎಂಬ ಭರವಸೆಯಿದೆ.

ಇದಲ್ಲದೇ ಕೃಷಿಯು ತುಂಬಾ ಮಹತ್ವದ ವಿಷಯವಾಗಿದೆ. ಆದುದರಿಂದ ಈ ಡಿಪಾರ್ಟ್‌ಮೆಂಟ್‌ನಲ್ಲಿ ಐ.ಎ.ಎಸ್., ಮಾದರಿಯಲ್ಲಿ ಆಲ್ ಇಂಡಿಯಾ ಸರ್ವಿಸ್ ರಚಿಸುವುದು ಅತಿ ಮಹತ್ವದ್ದಾಗಿದೆ. ಈ ವಿಷಯದಲ್ಲಿ ಕೇಂದ್ರವೇ ಸೂಕ್ತ ನಿರ್ಧಾರ ಮಾಡಲಿ ಎಂದು ಕೋರುತ್ತೇನೆ.

ನಾನು ನೀಡುತ್ತಿರುವ ಅಂಕಿಅಂಶದಿಂದ ಐ.ಎ.ಎಸ್., ನಲ್ಲಿ ಪ್ರಥಮ ದರ್ಜೆಯ ಪದವೀಧರರು ಸರ್ವಿಸ್‌ಗೆ ಸೇರುವವರ ಸಂಖ್ಯೆಯು ನಿಶ್ಚಿತವಾಗಿ ಕಡಿಮೆಯಾಗುತ್ತಿರುವುದು ನೋಡಬಹುದು. 1967ರಲ್ಲಿ ಸೇವೆಗೆ ತೆಗೆದುಕೊಂಡಿರುವ

141 ಪದವೀಧರರಲ್ಲಿ, ಪ್ರಥಮ ದರ್ಜೆ ಪದವೀಧರರ ಸಂಖ್ಯೆ 39ಕ್ಕೆ ಇಳಿಯಿತು ಮತ್ತು 1969 ರಲ್ಲಿ 100 ಪದವೀಧರರಲ್ಲಿ ಪ್ರಥಮ ದರ್ಜೆ ಪದವೀಧರರ ಸಂಖ್ಯೆ 32 ಮಾತ್ರ. ಇದರರ್ಥವೇನೆಂದರೆ, ಬರೀ 1/3ರಷ್ಟು ಪದವಿಯನ್ನು ಹೊಂದಿರುವುದು ಪ್ರಥಮ ದರ್ಜೆ ಪದವೀಧರರು. ಇದರಿಂದ ತಿಳಿಯುವುದು ಏನೆಂದರೆ, ಪ್ರಥಮ ದರ್ಜೆ ಪದವೀಧರರು ಸರ್ಕಾರಿ ಸೇವೆಗಳಿಗೆ ಸೇರುತ್ತಿಲ್ಲದರ ಕಾರಣ ಅವರಿಗೆ ಖಾಸಗಿ ಕ್ಷೇತ್ರದಲ್ಲಿ ಅವಕಾಶಗಳಿವಿರುವುದು.

ಸಮರ್ಥ ದಕ್ಷ ಆಡಳಿತದ ದೃಷ್ಟಿಯಿಂದ ದೇಶದಲ್ಲಿ ಬುದ್ಧಿವಂತ ವಿದ್ಯಾರ್ಥಿಗಳಿಗೆ ಅಲ್ಲ ಎಂಬುದಕ್ಕೆ ಕಾರಣಗಳನ್ನು ಕಂಡುಹಿಡಿಯಬೇಕಾಗಿದೆ. ಗೃಹ ಮಂತ್ರಿಯವರು ಈ ವಿಷಯವನ್ನು ನೋಡಿ, ಆಲ್ ಇಂಡಿಯಾ ಸರ್ವಿಸ್‌ಗಳ ಪರಿಸ್ಥಿತಿಯನ್ನು ಉತ್ತಮ ಪಡಿಸಲಿ ಎಂದು ನಾನು ಬಯಸುತ್ತೇನೆ.

ಐ.ಎ.ಎಸ್., ಅಧಿಕಾರಿಗಳು ಸೇವೆಗೆ ಸೇರಿದ 5 ಅಥವಾ 6 ವರ್ಷಗಳಲ್ಲಿ ಕಲೆಕ್ಟರ್‌ಗಳಾಗಿ ಅಥವಾ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿ ನೇಮಕವಾಗುವುದನ್ನು ಗಮನಿಸಲಾಗಿದೆ. ಕಲೆಕ್ಟರ್‌ಗಳಾಗಿ ನೇಮಕಾತಿ ಮಾಡುವ ಪದ್ಧತಿಯು ದಕ್ಷ ಆಡಳಿತಕ್ಕೆ ಒಳ್ಳೆಯದಲ್ಲ ಎಂದು ನನಗನಿಸುತ್ತಿದೆ. ನನ್ನ ಅಭಿಪ್ರಾಯವೇನೆಂದರೆ, ಈ ಐ.ಎ.ಎಸ್., ಅಧಿಕಾರಿಗಳನ್ನು ಸರ್ಕಾರದ ವಿವಿಧ ಡಿಪಾರ್ಟ್‌ಮೆಂಟ್‌ಗಳಲ್ಲಿ ಕಡಿಮೆಯೆಂದರು 10 ರಿಂದ 12 ವರ್ಷಗಳಕಾಲ ಅಧೀನಕಾರ್ಯದರ್ಶಿ ಮತ್ತು ಉಪಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಲು ಕೇಳಬೇಕು. ಇದಾದ ನಂತರ ಅವರು ಸಾಕಷ್ಟು ಪರಿಣಿತಿಯನ್ನು ಪಡೆದುಕೊಂಡಾಗ ಅವರನ್ನು ಜಿಲ್ಲೆಗಳಿಗೆ ಕಲೆಕ್ಟರ್‌ಗಳಾಗಿ ನೇಮಕಾತಿ ಮಾಡಬೇಕು. ಗೃಹ ಸಚಿವಾಲಯವು ಈ ವಿಷಯವನ್ನು ಪರಿಶೀಲಿಸಬೇಕೆಂಬುದು ನಾನು ಸೂಚಿಸುತ್ತೇನೆ.

ನಮ್ಮ ದೇಶದಲ್ಲಿ ಕೇವಲ 3 ಫೋರೆನ್‌ಸಿಕ್ ಸೈನ್ಸ್ (ವಿಧಿ ವಿಜ್ಞಾನ) ಪ್ರಯೋಗಾಲಯಗಳು ಇವೆ. ಅವು ದೆಹಲಿ, ಕಲ್ಕತ್ತ ಮತ್ತು ಹೈದರಾಬಾದ್‌ನಲ್ಲಿವೆ. ಬಹು ಸಂಖ್ಯೆಯ ಕ್ರಿಮಿನಲ್ ಪ್ರಕರಣಗಳಲ್ಲಿ ಸಂಶೋಧನೆಯ ವಿಳಂಬವಾಗುತ್ತಿರುವುದು ಕಾರಣವೇನೆಂದರೆ, ಈ ಮೂರು ಪ್ರಯೋಗಾಲಯಗಳಿಗೆ ಕೆಲಸದ ಒತ್ತಡವನ್ನು ನಿರ್ವಹಿಸಲು ಆಗುತ್ತಿಲ್ಲ. ಆದ್ದರಿಂದ, ಪ್ರತಿಯೊಂದು ರಾಜ್ಯವು ಒಂದು ಪ್ರಯೋಗಲಾಲಯವನ್ನು ಹೊಂದುವುದು ಅವಶ್ಯವೆಂದು ನಾನು ಪರಿಗಣಿಸುತ್ತೇನೆ ಹಾಗೂ ಸಚಿವಾಲಯವು ಈ ಪ್ರಶ್ನೆಯನ್ನು ಪರಿಶೀಲಿಸಿ ಅವಶ್ಯ ಕ್ರಮವನ್ನು ತೆಗೆದುಕೊಳ್ಳುವುದುದೆಂಬ ಭರವಸೆಯಿದೆ.

ಸೆಂಟ್ರಲ್ ವಿಜಿಲೆನ್ಸ್ ಕಮಿಷನ್‌ಗೆ ಸಂಬಂಧಿಸಿದಂತೆ, ಎಸ್ಟಿಮೇಷನ್ ಕಮಿಟಿಯು ತನ್ನ 84ನೇ ವರದಿಯಲ್ಲಿ ಶಿಫಾರಸ್ಸು ಮಾಡಿರುವುದು ಕೆಳಗಿನಂತಿದೆ. "ಸೆಂಟ್ರಲ್ ವಿಜಿಲೆನ್ಸ್ ಕಮೀಶನರ್‌ರವರು ವೈಯುಕ್ತಿತವಾಗಿ ಪ್ರತಿಯೊಂದನ್ನು ಅಭ್ಯಾಸಿಸಿ ಸ್ವತಃ ಅವರೇ ತೀರ್ಮಾನ ತೆಗೆದುಕೊಳ್ಳಲಿ ಎಂಬ ವಿಷಯವನ್ನು ಪರಿಗಣಿಸಿದಾಗ ಒಬ್ಬ ವ್ಯಕ್ತಿಯು ವಿಭಿನ್ನ ಕೆಲಸ ಮತ್ತು ದೊಡ್ಡ ಪ್ರಮಾಣದಲ್ಲಿ ಕಮಿಶನ್ ವಹಿಸಿಕೊಟ್ಟಿರುವುದನ್ನು ಮಾಡಲು ಮನುಷ್ಯರಿಗೆ ಸಾಧ್ಯವಿಲ್ಲ ಎಂಬುದು ಕಮಿಟಿಗೆ ಮನವರಿಕೆಯಾಗಿದೆ. ಕಮೀಶನ್‌ರವರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದುರ ಜೊತೆಯಲ್ಲಿ ಸಮ್ಮೇಳನ ಮತ್ತು ಮೀಟಿಂಗ್‌ಗಳಲ್ಲಿ ಭಾಗವಹಿಸಬೇಕು ಹಾಗೂ ದೆಹಲಿಯಿಂದ ಹೊರಗಿನ ಸ್ಥಳಗಳಿಗೂ ಭೇಟಿನೀಡಬೇಕು ಎಂಬುದನ್ನು ಸಿವಿಸಿಯ ವಾರ್ಷಿಕ ವರದಿಗಳಲ್ಲಿ ಗಮನಿಸಬಹುದು. ಇದು ಕಮೀಶನ್‌ರವರ ಸಮಯದ ಕೆಲವು ಭಾಗವನ್ನು ತೆಗೆದುಕೊಳ್ಳುತ್ತದೆ. ಆದ್ದರಿಂದ ಕಮಿಟಿ ಶಿಫಾರಸ್ಸು ಮಾಡಿರುವುದು ಏನೆಂದರೆ, ಕಮೀಶನ್ ತನಗೆ ವಹಿಸಿಕೊಟ್ಟಿರುವಂಥ ಕರ್ತವ್ಯಗಳನ್ನು ನಿರ್ವಹಿಸಬೇಕೆಂದರೆ, ಕಮೀಶನ್‌ಗೆ ಕಡಿಮೆಯೆಂದರೂ ಇನ್ನೊಬ್ಬ ಸದಸ್ಯರನ್ನು ಸೇರಿಸಿಕೊಳ್ಳಬೇಕು"

ವಿಜಿಲೆನ್ಸ್ ಕಮಿಶನ್‌ಗೆ ವಹಿಸಿಕೊಟ್ಟಿರುವ ಪ್ರಕರಣಗಳನ್ನು ತ್ವರಿತವಾಗಿ ಮುಗಿಸಲು ಹಾಗೂ ಕೆಲಸವನ್ನು ಮಾಡಲು ಹೆಚ್ಚುವರಿ ಕಮಿಶನ್‌ರವರನ್ನು ನೇಮಕಾತಿ ಮಾಡುವ ವಿಷಯದಲ್ಲಿ ಸರ್ಕಾರವು ತೆಗೆದುಕೊಂಡಿರುವ ಕ್ರಮವನ್ನು ತಿಳಿದುಕೊಳ್ಳಲು ನಾನು ಇಚ್ಛಿಸುತ್ತೇನೆ.

ಕೊನೆಯದಾಗಿ, ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ಯೋಜನೆಯ ಬಗ್ಗೆ ಸರ್ಕಾರದ ಗಮನವನ್ನು ಸೆಳೆಯಲು ನಾನು ಇಚ್ಛಿಸುತ್ತೇನೆ.

ಪ್ರಸ್ತುತ ಸರ್ಕಾರ ತಯಾರಿಸಿದ ಯೋಜನೆಯನುಸಾರ ಯಾರು ಆರು ತಿಂಗಳ ಕಾಲ ಜೈಲುವಾಸ ಶಿಕ್ಷೆಯನ್ನು ಅನುಭವಿಸಿದವರು ಪಿಂಚಣಿ ಪಡೆಯಲು ಅರ್ಹರಾಗಿರುತ್ತಾರೆ. ಈ ನಿಭಂದನೆಯು ಕಠಿಣವಾಗಿದ್ದು ಈ ನಿಬಂಧನೆಗಾಗಿ ಬಲವಂತಪಡಿಸಬಾರದು. ಮೈಸೂರು ರಾಜ್ಯದಲ್ಲಿ ರಾಜಕೀಯ ಬಂಧಿಯು ಸಹ ಪಿಂಚಣಿಯನ್ನು ಪಡೆಯಲು ಅರ್ಹರಾಗಿದ್ದು. ಅಂಥ ಪ್ರಕರಣವಿರುವಾಗ, ಈ ನಿಬಂಧನೆಯನ್ನು ಸಡಿಲಗೊಳಿಸುವುದು ನನಗೆ ಬೇಕಾಗಿದೆ. ಅದರಲ್ಲಿ ಯಾರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುತ್ತಾರೋ ಅವರಿಗೆ, ಅವರು ದೇಶಕ್ಕೆ ಸಲ್ಲಿಸದ ಸೇವೆಯನ್ನು ಮಾನ್ಯತೆಮಾಡಿ ಪ್ರಮಾಣ ಪತ್ರ ನೀಡಬೇಕು. ಸ್ವಾತಂತ್ರ್ಯ

ಹೋರಾಟಗಾರರ ಕುಟುಂಬದವರು ಉಚಿತ ವೈದ್ಯಕೀಯ ಚಿಕಿತ್ಸೆಯನ್ನು ಪಡೆಯಲು ಅರ್ಹರಾಗುತ್ತಾರೆ ಹಾಗೂ ವೈದ್ಯಕೀಯ, ಇಂಜಿನಿಯರಿಂಗ್, ಉನ್ನತ ತಾಂತ್ರಿಕತೆ ಮತ್ತು ಅಗ್ರಿಕಲ್ಚರಲ್ ಕಾಲೇಜುಗಳಲ್ಲಿ ನಿರ್ದಿಷ್ಟ ಶೇಕಡವಾರು ಅಂದರೆ 55% ರಿಂದ 10% ರಷ್ಟು ಸೀಟುಗಳನ್ನು ಮೀಸಲಿಡಬೇಕು.

ಕೊನೆಯದಾಗಿ 1857ರಿಂದ 1947 ರ ನಡುವೆ ನಡೆದ ಹೋರಾಟಗಳಲ್ಲಿ ಜೀವ ಕಳೆದುಕೊಂಡ ಸ್ವಾತಂತ್ರ್ಯ ಹೋರಾಟಗಾರರ ನೆನಪಿನಲ್ಲಿ ಸರ್ಕಾರವು ಮೆಮೊರಿಯಲ್‌ನ್ನು ಮಂಡಿಸಿದೆ ಹಾಗೂ 1972 ರ ಎಪ್ರಿಲ್‌ನಲ್ಲಿ ಈ ಮೆಮೊರಿಯಲ್ ರೆಡಿಯಾಗುವುದು ಎಂದು 05.12.1969 ರಂದು ಲೋಕಸಭೆಯಲ್ಲಿ ಪ್ರಶ್ನೆಗೆ ಕೊಟ್ಟಿರುವ ಉತ್ತರದಲ್ಲಿ ಹೇಳಿರುವರು. ಈ ವಿಷಯ ಯಾವ ಹಂತದಲ್ಲಿ ನಿಂತಿದೆ ಎಂದು ತಿಳಿದುಕೊಳ್ಳಲು ನಾನು ಇಚ್ಛಿಸುತ್ತೇನೆ.

# ಮುದ್ರಣ ಮಾಧ್ಯಮ ಹಾಗೂ ಸಮೂಹ ಮಾಧ್ಯಮಗಳ ಚರ್ಚೆ

1972

**ಶ್ರೀ ಕೊಂಡಜ್ಜಿ ಬಸಪ್ಪ :** (ಚಿತ್ರದುರ್ಗ) ನಾನು ಸಚಿವಾಲಯದ ಬೇಡಿಕೆಗಳಿಗೆ ಬೆಂಬಲಿಸುತ್ತೇನೆ.

**ಮಾನ್ಯ ಸಭಾಧ್ಯಕ್ಷರು:** (ಬೆಲ್ ಹೊಡೆಯುತ್ತಿದೆ. ಈಗ ಕೋರಂ ಇದೆ. ಮಾನ್ಯ ಸದಸ್ಯರು ಮುಂದುವರೆಸಲಿ).

**ಶ್ರೀ ಕೊಂಡಜ್ಜಿ ಬಸಪ್ಪ:** ನ್ಯೂಸ್‌ಪ್ರಿಂಟ್, 10 ಪುಟಗಳಿಗೆ ಸಂಖ್ಯೆಯನ್ನು ನಿರ್ಬಂಧಿಸುವುದಕ್ಕೆ ಸಂಬಂಧಿಸಿದ ಕಾರ್ಯ ನೀತಿಯು ಸರ್ಕಾರದ ಸ್ವಾಗತಕಾರಿ ನೀತಿಯಾಗಿದೆ. ಈ ನೀತಿಯು ಸಣ್ಣ ಮತ್ತು ಮಧ್ಯಮ ಗಾತ್ರದ ಪತ್ರಿಕೆಗಳಿಗೆ ಪ್ರೋತ್ಸಾಹಕಾರಿಯಾಗಿದೆ. ಆದರೆ, ಇದರಿಂದ ನ್ಯೂಸ್ ಪಬ್ಲಿಕೇಷನ್, ಈ ಸದನದ ಮತ್ತು ರಾಜ್ಯ ಅಸೆಂಬ್ಲಿಗಳ ಕಲಾಪಗಳ ಕವರೇಜ್ ಕಡಿತವಾಗುವುದು. ಏಕೆಂದರೆ, ಪತ್ರಿಕೆಯಲ್ಲಿನ ತುಂಬಾ ಸ್ಥಳವನ್ನು ಜಾಹೀರಾತುಗಳಿಗಾಗಿ ಅಕ್ರಮಿಸಿರುತ್ತದೆ. ಆದ್ದರಿಂದ ಇದು ಇನ್ನೊಂದು ಪ್ರಶ್ನೆಯನ್ನು ಪ್ರತಿಪಾದಿಸುತ್ತದೆ. ಅಂದರೆ, ಜಾಹೀರಾತು ಸ್ಥಳವನ್ನು ಕಡಿತಗೊಳಿಸುವುದೇ ಅಥವಾ ಜಾಹೀರಾತುಗಳ ಮೇಲೆ ತೆರಿಗೆ ವಿಧಿಸುವುದು. ಆದ್ದರಿಂದ ಈ ಪ್ರಶ್ನೆಯನ್ನು ಪರಿಶೀಲಿಸಿ ಎಂದು ಮಾನ್ಯ ಮಂತ್ರಿಯವರಲ್ಲಿ ಕೇಳಿಕೊಳ್ಳುತ್ತೇನೆ.

ಮುಂದಿನ ಅಂಶ ಏನಂದರೆ, ವಿದೇಶ ವ್ಯವಹಾರಗಳ ಸಚಿವಾಲಯದಲ್ಲಿ ಪಬ್ಲಿಸಿಟಿ ವಿಭಾಗವಿದೆ. ಅದು ಸರಿಸುಮಾರು ಪ್ರತ್ಯೇಕ ಭಾಗ ಮತ್ತು ಇದನ್ನು ವಿದೇಶ ವ್ಯವಹಾರಗಳ ಸಚಿವಾಲಯವೇ ನೋಡಿಕೊಳ್ಳುತ್ತಿದೆ. ಈ ವಿಭಾಗವನ್ನು ಮತ್ತು ಮಾಹಿತಿ ವಿಭಾಗವನ್ನು ಜೊತೆಗೂಡಿಸುತ್ತಿರುವುದು ತುಂಬಾ ಸಂತೋಷದಾಯಕ ವಿಚಾರವಾಗಿದೆ. ಆದ್ದರಿಂದ ಈ ವಿಭಾಗಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರು ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ವಿನಿಮಯ ಮಾಡಿಕೊಳ್ಳಬಹುದು.

ರೇಡಿಯೋ ವಿಚಾರಕ್ಕೆ ಬಂದರೆ, ನಿರ್ದಿಷ್ಟವಾಗಿ ಬೆಂಗಳೂರಿಗೆ ಸಂಬಂಧಿಸಿದಂತೆ, 1950ರಲ್ಲಿ ಇದನ್ನು ಸೇರಿಸಿಕೊಂಡಾಗಿನಿಂದ ಇವತ್ತಿನವರೆಗೆ ಅಲ್ಲಿ (ಕಿರು ತರಂಗಾಂತರ) ಶಾರ್ಟ್ ವೇವ್ ಟ್ರಾನ್ಸ್‌ಮೀಟರ್ ಸ್ಟೇಷನ್ ಇಲ್ಲ ಎಂದು ಹೇಳಲು ಇಚ್ಛಿಸುತ್ತೇನೆ. ನಾವು 250 ಕಿ.ಮಿ. ಆಚೆ ನಾವು ಕೇಳಲಿಕ್ಕೆ ಆಗುವುದಿಲ್ಲ. 250 ಕಿ.ಮೀಟರ್‌ಗಳಿಗಿಂತ ಆಚೆ ಇರುವವರು ರೇಡಿಯೋದಿಂದ ಏನನ್ನು ಕೇಳಲು

ಆಗುವುದಿಲ್ಲ. ಆದ್ದರಿಂದ, ಬೆಂಗಳೂರು ರೇಡಿಯೋ ಸ್ಟೇಷನ್‌ನ್ನು ಶಾರ್ಟ್‌ವೇವ್ ಟ್ರಾನ್ಸ್ ಮೀಟರ್ ಸ್ಟೇಷನ್ ಆಗಿ ಉನ್ನತ ದರ್ಜೆಗೆ ಏರಿಸಿಬೇಕೆಂದು ಸಚಿವಾಲಯವನ್ನು ಕೋರುತ್ತೇನೆ.

ಮತ್ತೊಂದು ಪ್ರಶ್ನೆಯು ಟೆಲಿವಿಷನ್‌ಗೆ ಸಂಬಂಧಿಸಿದೆ. ದಕ್ಷಿಣ ಭಾಗದವರು ಟೆಲಿವಿಷನ್ ಪಡೆದುಕೊಂಡಿದ್ದಾರೆ ಹಾಗೂ ಇದು ಮದ್ರಾಸ್‌ನಲ್ಲಿರುವುದು ನನಗೆ ಸಂತೋಷವಾಗಿದೆ. ಆದರೆ ಬೆಂಗಳೂರು ಕೇಂದ್ರಸ್ಥಾನದಲ್ಲಿದ್ದು ಕೇರಳ ಮತ್ತು ಮದ್ರಾಸ್ ನಡುವೆ ಮೂಲಪ್ರತಿಯನ್ನು ಪರಿಶೀಲಿಸುವುದು ಇದ್ದರೂ ಮದ್ರಾಸ್‌ನ್ನು ಆಯ್ಕೆ ಮಾಡಿಕೊಳ್ಳಲಾಯಿತು.

ಆದರೆ, ಇದನ್ನು ಮಾಡಲಾಗದಿದ್ದರೂ ಮದ್ರಾಸ್‌ನಿಂದ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲು ಬೆಂಗಳೂರಿನಲ್ಲಿ ಪ್ರಸಾರ ಕೇಂದ್ರವನ್ನಾದರೂ ಸ್ಥಾಪಿಸಬಹುದು. ಇದು ಮಂತ್ರಿಯವರಿಗೆ ನನ್ನ ಮನದಾಳದ ಕೋರಿಕೆಯಾಗಿದೆ. 1950ರಲ್ಲಿ ಮೈಸೂರಿನಿಂದ ಆಕಾಶವಾಣಿಯನ್ನು ವಹಿಸಿಕೊಂಡಾಗ ಅವರು 'ತರಂಗ ರಂಗ' ಎಂಬ ಕಾರ್ಯಕ್ರಮವನ್ನು ನಡೆಸುತ್ತಿದ್ದರು ಆದರೆ ಅದನ್ನು ನಿಲ್ಲಿಸಲಾಗಿದೆ. ಕೇಂದ್ರವು ಎಂಟು ಕಾರ್ಯಕ್ರಮಗಳನ್ನು ರಾಷ್ಟ್ರದ ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಿಸಬೇಕು. ರಾಷ್ಟ್ರದ ವಿವಿಧ ಕ್ಷೇತ್ರದಲ್ಲಿನ ಕಾರ್ಯಚಟುವಟಿಕೆಗಳನ್ನು ತಿಳಿಸುವಂಥ ವಾಲ್ ವಾರ್ತಾ ಪತ್ರಿಕೆ ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಿಸಬೇಕು. ಈಗಾಗಲೇ ಇವುಗಳು ಆರು ಭಾಷೆಗಳಲ್ಲಿ ಪ್ರಕಟವಾಗುತ್ತಿವೆ. ಆದ್ದರಿಂದ ವಾಲ್ ವಾರ್ತಾ ಪ್ರತಿಕೆಗಳನ್ನು ದೇಶದ ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟವಾಗುವಂತೆ ಸರ್ಕಾರವು ನೋಡಿಕೊಳ್ಳಬೇಕು.

ದೇಶದ ಮಕ್ಕಳ ಪ್ರಯೋಜನಕ್ಕಾಗಿ ಬಾಲಭಾರತಿಯನ್ನು ಹಿಂದಿಯಲ್ಲಿ ಪ್ರಕಟಿಸಲಾಗುತ್ತಿದೆ. ಇದನ್ನು ದೇಶದ ಎಲ್ಲಾ ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟಗೊಳ್ಳಬೇಕು; ಇದರಿಂದ ದೇಶದ ಮಕ್ಕಳಿಗೆ ಪ್ರಯೋಜನವಾಗುತ್ತದೆ.

ಪ್ರಸ್ತುತ ಪ್ರಚಾರಾರ್ಥ (ಪಬ್ಲಿಸಿಟಿ) ಕ್ಷೇತ್ರಕ್ಕೆ ಬಂದರೆ, ಅಲ್ಲಿ ನಾಲ್ಕು ಅಥವಾ ಐದು ಜಿಲ್ಲೆಗಳಿಗೆ ಒಬ್ಬರೆ ಪಬ್ಲಿಸಿಟಿ ಅಧಿಕಾರಿಯಿರುವರು. ಅಧಿಕಾರಿಯು ಹೇಗೆ ತಾನೇ ತನ್ನ ಕೆಲಸಕ್ಕೆ ನ್ಯಾಯವನ್ನು ಒದಗಿಸಬಹುದು? ಪ್ರತಿಯೊಂದು ಜಿಲ್ಲೆಗೆ ಒಬ್ಬ ಅಧಿಕಾರಿಯಿದ್ದರೆ, ಅಲ್ಲಿ ತುಂಬಾ ಪ್ರಭಾವಕಾರಿ ಪಬ್ಲಿಸಿಟಿ ಇರುವುದು ಸಾಧ್ಯವಾಗುತ್ತದೆ.

ಹಾಡು ಮತ್ತು ನಾಟಕ ವಿಭಾಗಕ್ಕೆ ಸಂಬಂಧಿಸಿದಂತೆ, ಕಲಾವಿದರು ಬಂದು, ಹಾಡಿದ್ದಕ್ಕೆ 50 ರೂಪಾಯಿಗಳನ್ನು ಕೊಡುತ್ತಿದ್ದಾರೆ ಎಂದು ಕೇಳಿದ್ದೇನೆ. ಇದು ತುಂಬಾ ಕಡಿಮೆಯಾಗಿದ್ದು ಈ ಹಣವು ಒಳ್ಳೆಯ ಕಲಾವಿದರನ್ನು ಆಕರ್ಷಿಸುವುದಿಲ್ಲ. ಅವರಿಗೆ ಸರಿಯಾಗಿ ಕೊಡಬೇಕು. ಅವರಿಗೆ ಕೊಡುತ್ತಿರುವ ಹಣದಲ್ಲಿ ಪ್ರಯಾಣಭತ್ಯೆ ಸೇರಿರುತ್ತದೆ. ಇದು ತುಂಬಾ ಹಾಸ್ಯಾಸ್ಪದವಾಗಿದೆ. ಅವರಿಗೆ ಕೊಡುವ ಭತ್ಯೆಯನ್ನು ಪರಿಷ್ಕರಿಸಬೇಕು ಮತ್ತು ಈ ನೀತಿಯನ್ನು ಪುನಶ್ಚೇತನಗೊಳಿಸಬೇಕು. ಸಚಿವಾಲಯವು ಈ ವಿಷಯನ್ನು ಸಹ ಪರಿಗಣಿಸಬೇಕು.

ಪ್ರೆಸ್‌ಇನ್‌ಫಾರ್‌ಮೇಷನ್ ಬ್ಯುರೋದ ಪ್ರಾದೇಶಿಕ ಕಛೇರಿಯು ಬೆಂಗಳೂರಿನಲ್ಲಿದೆ ಮತ್ತು ಅಲ್ಲಿರುವ ಅಧಿಕಾರಿಯು ನಾಲ್ಕು ರಾಜ್ಯಗಳು ಅಂದರೆ, ಮದ್ರಾಸ್, ಕೇರಳ, ಆಂಧ್ರಪ್ರದೇಶ ಮತ್ತು ಮೈಸೂರಿನ ಪ್ರಭಾರಿ ಅಧಿಕಾರಿಯಾಗಿದ್ದಾರೆ. ಇವರು ತಿಂಗಳಿಗೆ 20ದಿನ ಪ್ರವಾಸದಲ್ಲಿರುತ್ತಾರೆ. ಇವರಿಗೆ ಟೆಲಿಪ್ರಿಂಟರ್ ಲಿಂಕ್ ಇದೆ. ಇವರು 20 ದಿನ ಪ್ರವಾದಲ್ಲಿರುವುದರಿಂದ ಯಾವುದೇ ನ್ಯಾಯವನ್ನು ಹೇಗೆ ಕೊಡುತ್ತಾರೆ? ಕಛೇರಿಯನ್ನು ನೋಡಿಕೊಳ್ಳಲು ಮತ್ತು ಟೆಲಿಪ್ರಿಂಟರ್ ವರ್ಕ್ ಅಟೆಂಡ್‌ಮಾಡಲು ಆ ಸ್ಥಳಕ್ಕೆ ಹೆಚ್ಚುವರಿ ಅಧಿಕಾರಿಯನ್ನು ಕಳುಹಿಸಿಕೊಡಬೇಕು.

ಪಬ್ಲಿಕೇಷನ್ ವಿಭಾಗವು ವಿಕೇಂದ್ರಕರಣಗೊಳ್ಳಬೇಕು. ಪಬ್ಲಿಕೇಷನ್‌ಗೆ ಸಂಬಂಧಿಸಿದಂತೆ ಯಾವಾಗಲಾದರೂ ಪಬ್ಲಿಕೇಷನ್ ಪ್ರಿಂಟ್‌ನಲ್ಲಿದ್ದಾಗ, ಅವರು ಬೆಂಗಳೂರಿನಿಂದ ಪ್ರೂಫ್ ಪಡೆಯಬೇಕು. ಎಡಿಟರ್ ದೆಹಲಿಯಲ್ಲಿರುತ್ತಾರೆ. ಆದ್ದರಿಂದ ಸಮಯ ಪೋಲಾಗುತ್ತದೆ. ಯಾಕೆ ವಿಕೇಂದ್ರಿಕರಣಗೊಳಿಸಬಾರದು ಮತ್ತು ಬೆಂಗಳೂರಿನಿಂದ ಕನ್ನಡ ಪಬ್ಲಿಕೇಷನ್‌ನ್ನು ಏಕೆ ತರಬಾರದು? ಇದರಿಂದ ಒಳ್ಳೆಯ ಉತ್ಪನ್ನ ಮತ್ತು ಮಾರಾಟವಾಗುವುದು. ವಿಕೇಂದ್ರಿಕರಣಗೊಳ್ಳಲೇಬೇಕು.

ಈ ಮಾತುಗಳಿಂದ ಸಚಿವಾಲಯದ ಬೇಡಿಕೆಗಳನ್ನು ಬೆಂಬಲಿಸುತ್ತೇನೆ.

# ಕಾನೂನು ಮತ್ತು ನ್ಯಾಯ

**1971**

**ಶ್ರೀ ಕೊಂಡಜ್ಜಿ ಬಸಪ್ಪ (ಚಿತ್ರದುರ್ಗ)** ಭಾರತದಲ್ಲಿ ವಕ್ಫ್ ಕಾಯ್ದೆಯ ನಿರ್ವಹಣೆಯು ಕೆಲವು ರಾಜ್ಯಗಳಿಗೆ ಅನ್ವಯಿಸುವುದಿಲ್ಲ. ನಿರ್ದಿಷ್ಟವಾಗಿ ಬಿಹಾರ್, ಉತ್ತರಪ್ರದೇಶ, ಪಶ್ಚಿಮ ಬಂಗಾಲ, ಗುಜರಾತ್ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಈ ಕಾಯ್ದೆ ಅನ್ವಯಿಸಲು ನೋಡಬೇಕೆಂದು ನಾನು ಸಚಿವಾಲಯವನ್ನು ಕೇಳಿಕೊಳ್ಳುತ್ತೇನೆ.

1954 ಇಸವಿಯಿಂದ ಈ ಕಾಯ್ದೆ ಜಾರಿಯಲ್ಲಿದ್ದರೂ ಮೈಸೂರು, ಮಧ್ಯಪ್ರದೇಶ, ಒರಿಸ್ಸಾ ಮತ್ತು ದೆಹಲಿ ಕೇಂದ್ರಾಡಾಳಿತ ಪ್ರದೇಶಗಳಲ್ಲಿ ವಕ್ಫ್ ಆಸ್ತಿಯ ಸರ್ವೆ ಇನ್ನು ಮುಗಿದಿಲ್ಲ. ಆದ್ದರಿಂದ, ನಾನು ಮಾನ್ಯ ಮಂತ್ರಿಯವರನ್ನು ಕೇಳಿಕೊಳ್ಳುವುದೇನೆಂದರೆ ಸರ್ವೆ ಕಾರ್ಯವನ್ನು ಶೀಘ್ರವಾಗಿ ಮುಗಿಯುವಂತೆ ನೋಡಿಕೊಳ್ಳಲಿ.

ಜಿಲ್ಲಾ ನ್ಯಾಯಾಧೀಶರ ನಿವೃತ್ತಿ ವಯಸ್ಸಿನ ವಿಷಯಕ್ಕೆ ಬಂದರೆ, ಕೆಲವು ರಾಜ್ಯಗಳಲ್ಲಿ ಕೇವಲ 55 ವರ್ಷ, ಇನ್ನು ಕೆಲವು ರಾಜ್ಯಗಳಲ್ಲಿ ಇದು 58 ವರ್ಷಗಳು ಇದೆ. ನಾನು ಕೇಳಿಕೊಳ್ಳುವುದೇನೆಂದರೆ, ರಾಷ್ಟ್ರಾದ್ಯಂತ ನಿವೃತ್ತಿ ವಯಸ್ಸು ಒಂದೇ ಇರಬೇಕು. ಏಕೆಂದರೆ, ಸುಪ್ರೀಂ ಕೋರ್ಟ್ ನ್ಯಾಯಾಧೀಶರ ನಿವೃತ್ತಿ ವಯಸ್ಸು 65, ಹೈಕೋರ್ಟ್ ನ್ಯಾಯಾಧೀಶರ ನಿವೃತ್ತಿ ವಯಸ್ಸು 62 ಹಾಗೂ ಜಿಲ್ಲಾ ನ್ಯಾಯಾಧೀಶರ ನಿವೃತ್ತಿ ವಯಸ್ಸು 58 ಮತ್ತು ಕೆಲವು ರಾಜ್ಯಗಳಲ್ಲಿ 55 ವರ್ಷಗಳು. ಜಿಲ್ಲಾ ನ್ಯಾಯಾಧೀಶರ ನಿವೃತ್ತಿ ವಯಸ್ಸು ದೇಶದಾದ್ಯಂತ ಸಮಾನವಾಗಿರಬೇಕು. ಏಕೆಂದರೆ ಆರೋಗ್ಯದ ಸಾಮಾನ್ಯ ಸ್ಥಿತಿ ಉತ್ತಮಗೊಂಡಿದೆ ಹಾಗೂ ಜೀವಿತಾವಧಿಯು ಏರುತ್ತಿದೆ. ಅವರುಗಳು ಬಾರ್‌ನಲ್ಲಿ 4 ರಿಂದ 5 ವರ್ಷಗಳ ಕಾಲಸೇವೆಯ ನಂತರ ಮುನ್ಸೀಫ್‌ಗಳಾಗಿ ನೇಮಕಾತಿ ಹೊಂದುವರು.

ನಿವೃತ್ತಿಯಾಗುವುದಕ್ಕೆ ಮುಂಚೆ 20 ರಿಂದ 25 ವರ್ಷಗಳ ಕಾಲ ಮಾತ್ರ ಸೇವೆಯಲ್ಲಿರುತ್ತಾರೆ. ಈ ವಿವಾದಕ್ಕೆ ಬೆಂಬಲವಾಗಿ ಭಾರತದ ಕಾನೂನು ಆಯೋಗವು ತನ್ನ 14 ನೇ ವರದಿ ಭಾಗ 1 ರಲ್ಲಿ ಜಿಲ್ಲಾ ನ್ಯಾಯಾಧೀಶರ ನಿವೃತ್ತಿ ವಯಸ್ಸು 58 ಇರಬೇಕು ಎಂದು ಹೇಳಿದೆ. ನಾನು ಸಚಿವಾಲಯವನ್ನು ಕೇಳಿಕೊಳ್ಳುವುದೇನೆಂದರೆ ಯಾವ ರಾಜ್ಯಗಳಲ್ಲಿ ನಿವೃತ್ತಿಯ ವಯಸ್ಸು 58 ಇಲ್ಲವೋ, ಆ ರಾಜ್ಯಗಳಲ್ಲಿ ಜಿಲ್ಲಾ

ನ್ಯಾಯಾಧೀಶರ ನಿವೃತ್ತಿ ವಯಸ್ಸನ್ನು 58ಕ್ಕೆ ಮಾಡಬೇಕು. ಸರಕಾರೀ ಭಾಷಾ ಆಯೋಗವು 1960 ರಲ್ಲಿ ರಚನೆಯಾಗಿದ್ದರೂ ಕೆಲವು ಕೇಂದ್ರ ಶಾಸನಗಳು ಪ್ರಾದೇಶಿಕ ಭಾಷೆಗಳಲ್ಲಿ ಭಾಷಾಂತರಗೊಂಡಿಲ್ಲ. ಕೇವಲ 25 ಉರ್ದು ಭಾಷಾಂತರಗಳು, ಗುಜರಾತಿ ಭಾಷಾಂತರಗಳು 16 ಮತ್ತು 5 ಭಾಷಾಂತರಗಳು ಒರಿಯಾದಲ್ಲಿ ಮಾಡಲಾಗಿದೆ. ಅಯೋಗವು ಶೀಘ್ರವೇ ಭಾಷಾಂತರ ಮಾಡಲಿಕ್ಕೆ ಆಲೋಚಿಸಲಿ.

ಭಾರತದ ಸಂವಿಧಾನವನ್ನು ಹಿಂದಿ ಮತ್ತು ಇತರೆ ಪ್ರಾದೇಶಿಕ ಭಾಷೆಗಳಿಗೆ ಭಾಷಾಂತರ ಕುರಿತಂತೆ, ಹಿಂದಿ, ಮಲಯಾಳಂ, ಪಂಜಾಬಿ, ಗುಜರಾತಿ, ಒರಿಯಾ ಮತ್ತು ತೆಲಗು ಭಾಷೆಗಳ ಹೊರತಾಗಿ ಇತರೆ ಪ್ರಾದೇಶಿಕ ಭಾಷೆಗಳಲ್ಲಿ ಭಾಷಾಂತರಗೊಂಡಿಲ್ಲ. ಭಾಷಾಂತರವು ಶೀಘ್ರವಾಗಿ ಆಗುವಂತೆ ನೋಡಿಕೊಳ್ಳುವಂತೆ ನಾನು ಸಚಿವಾಲಯವನ್ನು ಕೇಳಿಕೊಳ್ಳುತ್ತೇನೆ.

ಕೊನೆಯ ವಿಷಯಕ್ಕೆ ಬಂದರೆ, ನಾನು ಹೇಳುವುದು ಏನೆಂದರೆ, ಕಾನೂನು ಆಯೋಗದಲ್ಲಿ ಮೂರನೇ ಸದಸ್ಯರನ್ನು ನೇಮಕಾತಿ ಮಾಡಲು ಪ್ರಸ್ತಾವನೆ ಇದೆ. ಪ್ರಸ್ತುತ ಪೂರ್ಣಾವಧಿಯ ಇಬ್ಬರು ಸದಸ್ಯರು ಇದ್ದಾರೆ. ಒಬ್ಬರು ಹೈಕೋರ್ಟ್‌ನ ನ್ಯಾಯಾಧೀಶರು ಮತ್ತು ಇನ್ನೊಬ್ಬರು ಕಾನೂನು ಪ್ರಾಧ್ಯಾಪಕರು. ಪೂರ್ಣಾವಧಿ ಸದಸ್ಯರಾಗಿ ಮೂರನೇ ಸದಸ್ಯರನ್ನು ದೇಶದ ಶ್ರೇಷ್ಠ ನ್ಯಾಯದರ್ಶಿಗಳನ್ನು ನೇಮಕ ಮಾಡುವುದು ಚೆನ್ನಾಗಿರುತ್ತದೆ.

ಈ ಸಲಹೆಗಳೊಂದಿಗೆ ನನ್ನ ಮಾತನ್ನು ಮುಗಿಸುತ್ತೇನೆ.

"ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ ಅಹುದು ಅಹುದೆನಬೇಕು".
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲ ಸಂಗಮ ದೇವನೊಲಿಯನು.

**– ಬಸವಣ್ಣ**

ನೀನೊಲಿದರೆ ಕೊರಡು ಕೊನರುವುದಯ್ಯ
ನೀನೊಲಿದರೆ ಬರಡು ಹಯನಹುದಯ್ಯ
ನೀನೊಲಿದರೆ ವಿಷವು ಅಮೃತವಹುದಯ್ಯ
ನೀನೊಲಿದರೆ ಪ್ರತಿ ಪದಾರ್ಥಗಳು ಇರಲಿಪ್ಪವು.
ಕೂಡಲ ಸುಗಮ ದೇವಾ

— **ಬಸವಣ್ಣ**

# ಕರ್ನಾಟಕ ರಾಜ್ಯ ಪಂಚಾಯತ್ ರಾಜ್ ವರದಿ

ಕೆಲವರನ್ನು ಅವಕಾಶಗಳು ತಾವಾಗಿಯೇ ಹುಡುಕಿಕೊಂಡು ಬರುತ್ತವೆ; ಮತ್ತೆ ಕೆಲವರು ಅವಕಾಶಗಳನ್ನು ತಾವೇ ಹುಡುಕಿಕೊಂಡು ಹೋಗುತ್ತಾರೆ! ಕೊಂಡಜ್ಜಿಯವರು ಮೊದಲ ವರ್ಗಕ್ಕೆ ಸೇರಿದ ಭಾಗ್ಯಶಾಲಿಗಳು. ಅವರು ೧೯೬೨ರಲ್ಲಿ ಸಾರ್ವತ್ರಿಕ ಚುನಾವಣೆಯಲ್ಲಿ ಗೆದ್ದು, ನಿಜಲಿಂಗಪ್ಪ ಮಂತ್ರಿಮಂಡಲದಲ್ಲಿ ಸಹಕಾರ, ಪ್ರಚಾರ ಮತ್ತು ಅಬ್ಕಾರಿ ಇಲಾಖೆಗಳ ಉಪಸಚಿವರಾಗಿದ್ದಾಗ ರಾಜ್ಯ ಸರ್ಕಾರವು ಪಂಚಾಯತ್ ರಾಜ್ ವ್ಯವಸ್ಥೆಯನ್ನು ಕುರಿತ ಒಂದು ಸಮಿತಿ ಯೊಂದನ್ನು ರಚಿಸಿ, ಅದರ ಅಧ್ಯಕ್ಷರನ್ನಾಗಿ ಕೊಂಡಜ್ಜಿಯವರನ್ನು ಮಾಡಿತು. ಈ ಸಮಿತಿಯು ರಾಜ್ಯದಲ್ಲಿ ಪಂಚಾಯತ್ ರಾಜ್ಯ ಕುರಿತ ಒಂದು ಸಮಗ್ರ ವರದಿ ಸಲ್ಲಿಸಬೇಕಾಗಿತ್ತು. ಇದು ಕೊಂಡಜ್ಜಿಯವರಿಗೆ ಬಯಸದೆ ಬಂದ ಭಾಗ್ಯ. ಸಮಿತಿಯು ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದ ಕೆಲವು ಸಲಹೆಗಳನ್ನು ನೀಡುವ ಸ್ವರೂಪದ್ದಾಗಿತ್ತು. ಜನಸೇವೆಗಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದ ಕೊಂಡಜ್ಜಿಯವರಿಗೆ ಇದು ಅತ್ಯಂತ ಪ್ರಿಯವಾದ ಕಾರ್ಯವೇ ಆಗಿದ್ದುದರಿಂದ ಶ್ರೀಯುತರು ಸಂತೋಷದಿಂದ ಒಪ್ಪಿ ಸ್ವೀಕರಿಸಿದರು. ಸಮಿತಿಯ ರಚನೆ ಹೀಗಿದೆ:--

**ಅಧ್ಯಕ್ಷರು :**

೧. ಶ್ರೀ **ಕೊಂಡಜ್ಜಿ** ಬಸಪ್ಪ, ಬಿ.ಎಸ್‌ಸಿ., ಎಲ್‌ಎಲ್.ಬಿ.,
ಸಹಕಾರ ಇಲಾಖೆ ಉಪಸಚಿವರು.

**ಸದಸ್ಯರು :**

೨. ಶ್ರೀ ಎಂ. ಆರ್. ಪಾಟೀಲ್
ವಿಧಾನಸಭಾ ಸದಸ್ಯರು, ಹುಬ್ಬಳ್ಳಿ.

೩. ಶ್ರೀ ವಿ. ಮಸಿಯಪ್ಪ
ವಿಧಾನಸಭಾ ಸದಸ್ಯರು, ಹಿರಿಯೂರು.

೪. ಶ್ರೀ ಎ. ಆರ್. ಬದರೀನಾರಾಯಣ್
ವಿಧಾನ ಪರಿಷತ್ ಸದಸ್ಯರು, ಶಿವಮೊಗ್ಗ.

೫.	ಶ್ರೀ ಕೊಲ್ಲೂರು ಮಲ್ಲಪ್ಪ
ಮಾಜಿ ಶಾಸಕರು ಮತ್ತು ಅಧ್ಯಕ್ಷರು,
ಮೈಸೂರು ರಾಜ್ಯದ 'ಉಣ್ಣೆ ಕೈಮಗ್ಗ ನೇಕಾರರ
ಸಹಕಾರ ಸಂಘ', ಬೆಂಗಳೂರು.

೬.	ಶ್ರೀ ಎಸ್. ಎಸ್. ಮೆಳ್ಳಿಗೇರಿ
ಮಾಜಿ ಡಿ.ಎಲ್.ಬಿ. ಅಧ್ಯಕ್ಷರು
ಬಾಗಲಕೋಟೆ, ಬಿಜಾಪುರ ಜಿಲ್ಲೆ.

೭.	**ಶ್ರೀ ಕೊಪ್ರೇಶ್ ರಾವ್**, ಬಿ.ಎ., ಎಲ್‌ಎಲ್.ಬಿ.
ಅಧ್ಯಕ್ಷರು, ತಾಲೂಕು ಬೋರ್ಡ್, ದೇವದುರ್ಗ.

೮.	**ಶ್ರೀ ನೇರಲೆ ಮಾದಯ್ಯ**
ಮಾಜಿ ವಿಧಾನಸಭಾ ಸದಸ್ಯರು ಮತ್ತು
ತಾಲೂಕು ಬೋರ್ಡ್ ಸದಸ್ಯರು. ನಂಜನಗೂಡು

೯.	**ಶ್ರೀ ಜಿ. ವಿ. ಕೆ. ರಾವ್**, ಭಾ.ಆ.ಸೇ
ಡಿವಿಜಿನಲ್ ಕಮಿಷನರ್
ಬೆಳಗಾವಿ ವಿಭಾಗ.

೧೦.	**ಶ್ರೀ ಎನ್. ಎಸ್. ಭರತ್**
ಸರ್ಕಾರದ ಅರ್ಥ ಇಲಾಖೆಯ ಉಪಕಾರ್ಯದರ್ಶಿ

**ಸದಸ್ಯಕಾರ್ಯದರ್ಶಿ :**

೧೧.	**ಶ್ರೀ ಎಸ್. ರಾಮನಾಥನ್**, ಭಾ.ಆಸೇ.
ಉಪ ಅಭಿವೃದ್ಧಿ ಕಮಿಷನರ್, ಕರ್ನಾಟಕ

ಈ ಸಮಿತಿಯು ರೂಪುಗೊಂಡದ್ದರ ಹಿನ್ನೆಲೆ ಹೀಗಿದೆ :

೧ ನವೆಂಬರ್ ೧೯೫೯ರಂದು ಜಾರಿಗೆ ಬಂದ 'ಮೈಸೂರು ಗ್ರಾಮ ಪಂಚಾಯತಿಗಳ ಮತ್ತು ಸ್ಥಳೀಯ ಸಂಸ್ಥೆಗಳ ಅಧಿನಿಯಮ, ೧೯೫೯'ಕ್ಕೆ ಕೆಲವು ಸೂಕ್ತ ಸಲಹೆಗಳನ್ನೊಳಗೊಂಡ ಗ್ರಾಮೀಣ ಪ್ರದೇಶದ ಜನತೆಗೆ ಹೆಚ್ಚಿನ ಸವಲತ್ತು ಗಳನ್ನು ಒದಗಿಸಿಕೊಡುವ ಹಾಗೂ ಸಮರ್ಥ ರೀತಿಯಲ್ಲಿ ಬಹು ಚುರುಕಿನಿಂದ ಸ್ಪರ್ಧಾ ಮನೋಭಾವದಿಂದ ಗ್ರಾಮೀಣ ಪ್ರದೇಶಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವ ಹಿರಿಯ ಉದ್ದೇಶದಿಂದ ವರದಿಯೊಂದನ್ನು ಸಿದ್ಧಪಡಿಸಲು ರಾಜ್ಯ

ಸರ್ಕಾರಕ್ಕೆ ಸಮಿತಿ ನಿರ್ಮಾಣದ ಅಗತ್ಯ ಕಂಡಿತು. ಇದಕ್ಕೆ ಮುಖ್ಯ ಪ್ರೇರಣೆ ಸಾರ್ವಜನಿಕರಿಂದ ಬಂದ ಹಲವು ಮನವಿಗಳು ಮತ್ತು 'ಮೈಸೂರು ಸಂಪನ್ಮೂಲ ಗಳು ಮತ್ತು ಮಿತವ್ಯಯ ಸಮಿತಿ'ಯು ನೀಡಿದ್ದ ಸ್ಥಳೀಯ ಆಡಳಿತಾಧಿಕಾರವನ್ನು ಗ್ರಾಮ ಪಂಚಾಯತಿಗಳಿಗೆ ವಹಿಸಿಕೊಡಬಹುದು ಎಂಬ ಸಲಹೆ. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು ಸರ್ಕಾರಿ ಆಜ್ಞೆ ಸಂಖ್ಯೆ: ಡಿಆರ್‌ಎಲ್ ೯೯ ವಿಎಡಿ ೬೨, ದಿನಾಂಕ ೧ ಅಕ್ಟೋಬರ್, ೧೯೬೨ರ ಪ್ರಕಾರ ಸಮಿತಿಯನ್ನು ರಚಿಸಿತು. ಸಮಿತಿಯು ತನಗೆ ವಹಿಸಿದ ಜವಾಬ್ದಾರಿಯನ್ನು ನಿಷ್ಠೆಯಿಂದ ತುಂಬಾ ಅಚ್ಚುಕಟ್ಟಾಗಿ ನೆರವೇರಿಸಿ, 'ಪಂಚಾಯತ್ ರಾಜ್ಯ ಸಮಿತಿ ಕುರಿತ ವರದಿ ೧೯೬೩' ಎಂಬ ಶೀರ್ಷಿಕೆಯಲ್ಲಿ ಸರ್ಕಾರಕ್ಕೆ ಸಾದರಪಡಿಸಿತು. ಕಾರಣಾಂತರಗಳಿಂದ ವರದಿ ಜಾರಿಗೆ ಬರದಿದ್ದರೂ, ಅದು ಅನೇಕ ಹಿರಿಯ ಮುತ್ಸದಿಗಳ ಪ್ರಶಂಸೆಗೆ ಪಾತ್ರರಾಗಿರುವುದು ಸಮಿತಿಯ ಶ್ರಮ ಮತ್ತು ಪ್ರತಿಭೆಗಳಿಗೆ ಸಾಕ್ಷಿಯಾಗಿದೆ. ಆ ವರದಿಯ ಸಂಕ್ಷಿಪ್ತ ವಿವರಗಳನ್ನು ಮುಂದೆ ನೋಡಬಹುದು.

**ಹಿನ್ನೆಲೆ :**

ಮೈಸೂರು ಗ್ರಾಮಪಂಚಾಯತಿ ಮತ್ತು ಸ್ಥಳೀಯ ಸಂಸ್ಥೆಗಳು ೧೯೫೯ರ ಅಧಿನಿಯಮವು (೧೯೫೯ರ ಮೈಸೂರು ಅಧಿನಿಯಮ ಸಂ. ೧೦) ಶಾಸನಗೊಂಡ ತರುವಾಯ ಪ್ರಜಾಸತ್ತಾತ್ಮಕ 'ಆಡಳಿತ ವಿಕೇಂದ್ರೀಕರಣ'ವನ್ನು ದೃಷ್ಟಿಯಲ್ಲಿಟ್ಟು ಕೊಂಡು, ೧ ನವೆಂಬರ್ ೧೯೫೯ರಂದು ಮೈಸೂರು ರಾಜ್ಯವು 'ಪಂಚಾಯತ್ ರಾಜ್ಯ' ಎಂಬ ವ್ಯವಸ್ಥೆಯನ್ನು ಜಾರಿಗೆ ತಂದಿತು. ಇದು ೨೧ ಡಿಸೆಂಬರ್ ೧೯೬೦ರಂದು ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ್‌ರವರಿಂದ ವಿಧ್ಯುಕ್ತವಾಗಿ ಉದ್ಘಾಟಿಸಲ್ಪಟ್ಟಿತು. ಈ ಪಂಚಾಯತ್ ರಾಜ್ಯ ವ್ಯವಸ್ಥೆಯು ಅಖಂಡ ಭರತಖಂಡದ ವ್ಯಾಪ್ತಿಯಲ್ಲಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಕ್ಕೆ ಒಂದು ಹೊಸ ಆಯಾಮವನ್ನು ನಿರ್ಮಿಸಿ ಕೊಟ್ಟಂತಾಯಿತು. ಇದು ಹೆಚ್ಚುಕಡಿಮೆ ಬಸವಂತರಾವ್ ಮೆಹ್ತಾ ಸಮಿತಿಯು ೧೯೫೭ರಲ್ಲಿ ಮಾಡಿದ್ದ ಶಿಫಾರಸಿನ ನೇರ ಪರಿಣಾಮವೇ ಆಗಿದ್ದಿತು. ಸಾಮೂಹಿಕ ಪ್ರಗತಿಪರ ಕಾರ್ಯಕ್ರಮದಲ್ಲಿ ತುಂಬು ಉತ್ಸಾಹ ಹಾಗೂ ಸ್ಥಳೀಯ ಸಮಸ್ಯೆಗಳ ಬಗೆಗೆ ವಿಶೇಷ ಪ್ರೇರಣೆ ನೀಡಲು ಅದು ಉತ್ತಮ ಸಾಧನವೆಂದು ಭಾವಿಸಲಾಯಿತು. ಇದು ಸ್ಥಳೀಯ ಕೆಲಸ ಕಾರ್ಯಗಳಲ್ಲಿ ಆಸಕ್ತಿ ಹುಟ್ಟಿಸುವ, ಉಸ್ತುವಾರಿ ನಡೆಸುವ ಹಾಗೂ ಸ್ಥಳೀಯ ಅಗತ್ಯತೆಗಳನ್ನು ಪೂರೈಸಲು ಬೇಕಾಗುವ ಖರ್ಚುವೆಚ್ಚಗಳಿಗೆ ಸಂಬಂಧಿಸಿದ್ದೂ ಆಗಿದ್ದಿತು. ತನ್ಮೂಲಕ ಪ್ರಾತಿನಿಧಿಕ ಮತ್ತು ಪ್ರಜಾಸತ್ತಾತ್ಮಕ ಭಾವನೆಯನ್ನು ಸಂಸ್ಥಾಪಿಸುವ ಉದ್ದೇಶವನ್ನು ಅದು ಇಟ್ಟುಕೊಂಡಿದ್ದಿತು. ಸಾಮೂಹಿಕ ಪ್ರಗತಿಪರ ಕಾರ್ಯಾಚರಣೆಯ ಸ್ಥಳೀಯ ಸಂಸ್ಥೆಗಳಿಗೆ ಸಾಕಷ್ಟು ಪ್ರಮಾಣದ ಅಧಿಕಾರ ನೀಡುವ ಉದ್ದೇಶವನ್ನು ಇಟ್ಟುಕೊಂಡಿತ್ತು. ಅದರಿಂದಾಗಿ ಆ ವರದಿಯು ಸ್ವಾಯತ್ತ ಸ್ಥಿತಿಯಲ್ಲಿ ಅರ್ಥಪೂರ್ಣ ಕಾರ್ಯಗಳನ್ನು ನಿರ್ವಹಿಸಲು ಅಡಿಪಾಯ ಹಾಕಿದಂತಾಯಿತು.

ಸ್ಥಳೀಯ ಸಂಸ್ಥೆಗಳ ಸಮಗ್ರತೆ ಮತ್ತು ಸಂಯೋಜನೆಗಾಗಿ ರಚಿತವಾಗಿದ್ದ ವೆಂಕಟಪ್ಪ ಸಮಿತಿಯು ತನ್ನ ವರದಿಯನ್ನು ೧೨ ಜೂನ್ ೧೯೫೦ರಂದು ಸಲ್ಲಿಸಿತ್ತು. ಸ್ಥಳೀಯ ಸಂಸ್ಥೆಗಳ ಮೇಲ್ವಿಚಾರಣಾ ಸಮಿತಿಯೂ ತನ್ನ ವರದಿಯನ್ನು ೨೮ ಆಗಸ್ಟ್ ೧೯೫೪ರಂದು ಒಪ್ಪಿಸಿತ್ತು. ಸ್ಥಳೀಯ ಆಡಳಿತದ ಕಾನೂನುಬದ್ಧ ಗರಿಷ್ಠ ಸ್ವಾಯತ್ತತೆ ಮತ್ತು ಅಭಿವೃದ್ಧಿ ಯೋಜನೆಗಳ ಅಭಿವೃದ್ಧಿ ಕಾರ್ಯಗಳನ್ನು ತ್ವರಿತಗೊಳಿಸಲು ಬೇರೆ ಬೇರೆ ಅಭಿವೃದ್ಧಿ ಇಲಾಖೆಗಳ ಜೊತೆಯಲ್ಲಿ ಸಹಕರಿಸಬೇಕೆಂದು ಶಿಫಾರಸು ಕೂಡ ಮಾಡಿತ್ತು. ಸ್ಥಳೀಯ ಕ್ಷೇತ್ರಗಳಲ್ಲಿ ವ್ಯಕ್ತವಾಗುವ ಸ್ವಯಂ ಪ್ರೇರಣೆ, ಅನುಭವ ಮತ್ತು ಸೇವಾಮನೋಭಾವ ಹಾಗೂ ಗ್ರಾಮೀಣ ವಲಯದ ಅಭಿವೃದ್ಧಿ ಹಿನ್ನೆಲೆಯಲ್ಲಿ ಈ ಶಿಫಾರಸುಗಳನ್ನು ಮಾಡಲಾಗಿತ್ತು. ಈ ಸಮಿತಿಯು ಸ್ಥಳೀಯ ಸಂಸ್ಥೆಗಳ ಆಡಳಿತಕ್ಕೆ ಎರಡು ಹಂತದ ವ್ಯವಸ್ಥೆಯನ್ನು ಶಿಫಾರಸು ಮಾಡಿತ್ತು: ಒಂದು, ನೇರವಾಗಿ ಚುನಾಯಿತ ಪ್ರತಿನಿಧಿಗಳಿಂದ ಕೂಡಿದ ವ್ಯವಸ್ಥೆ; ಎರಡು, ಗ್ರಾಮಪಂಚಾಯತಿಗಳು ಮತ್ತು ಜಿಲ್ಲಾ ಬೋರ್ಡುಗಳ ಚುನಾಯಿತ ಪ್ರತಿನಿಧಿಗಳಿಂದ ಪರೋಕ್ಷವಾಗಿ ಆಯ್ಕೆಯಾದ ವ್ಯವಸ್ಥೆ. ಸಮಿತಿಯ ಈ ಶಿಫಾರಸು ಗಳನ್ನು ಆಡಳಿತಾಂಗ ಮತ್ತು ಶಾಸಕಾಂಗಗಳು ಒಪ್ಪಿಕೊಂಡು ೧೯೫೨ರ ಜಿಲ್ಲಾ ಬೋರ್ಡ್‌ನ ಅಧಿನಿಯಮವನ್ನು ಜಾರಿಗೊಳಿಸಿದುವು. ಆದರೆ ಈ ನಿಯಮವನ್ನು ಜಾರಿಗೊಳಿಸುವ ಮುನ್ನ ಪರೋಕ್ಷ ಚುನಾವಣಾ ಪ್ರಕ್ರಿಯೆಯ ಬಗ್ಗೆ ಅನುಮಾನಗಳು ವ್ಯಕ್ತವಾದುವು. ಇದರಿಂದಾಗಿ ವಿವಾದಕ್ಕೆಡೆಯುಂಟಾಯಿತು. ಅದನ್ನು ಸರಿಪಡಿಸಲು ಜಿಲ್ಲಾ ಬೋರ್ಡುಗಳನ್ನು ರದ್ದುಗೊಳಿಸಿ, ಅವುಗಳ ಸ್ಥಾನದಲ್ಲಿ ತಾಲೂಕು ಬೋರ್ಡುಗಳನ್ನು ರಚಿಸುವ ಬಗ್ಗೆ ಸಲಹೆ ನೀಡಲಾಯಿತು. ಆದರೆ ಇದರ ಬಗ್ಗೆಯೂ ಅಭಿಪ್ರಾಯ ಭೇದ ಉಂಟಾಗಲು ಚಂದ್ರಶೇಖರಯ್ಯ ಸಮಿತಿ ನೇಮಕ ಗೊಂಡಿತು. ಈ ಸಮಿತಿಯು ಮೂರು ಹಂತದ ವ್ಯವಸ್ಥೆಯನ್ನು ಶಿಫಾರಸು ಮಾಡಿತು:

೧. ಜಿಲ್ಲಾ ಬೋರ್ಡುಗಳು ೨. ತಾಲೂಕು ಬೋರ್ಡುಗಳು ೩.. ಗ್ರಾಮ ಪಂಚಾಯತಿಗಳು.

ಸಮಿತಿಯ ಈ ಶಿಫಾರಸಿಗೆ ಅನುಗುಣವಾಗಿ ತಾಲೂಕು ಬೋರ್ಡುಗಳ ಸದಸ್ಯರಲ್ಲಿ $^{2}/_{3}$ರಷ್ಟು ಸದಸ್ಯರನ್ನು ನೇರ ಚುನಾವಣೆಯ ಮೂಲಕವೂ ಉಳಿದ $^{1}/_{3}$ ಭಾಗದ ಸದಸ್ಯರನ್ನು ಆ ತಾಲೂಕಿನ ಗ್ರಾಮಪಂಚಾಯತಿಗಳು ಮತ್ತು ನಗರಸಭೆ ಗಳಿಂದ ಆಯ್ಕೆಯಾಗುವ ಸದಸ್ಯರಿಗೂ ಮೀಸಲಿರಬೇಕು. ತಾಲೂಕು ಬೋರ್ಡ್ ಸದಸ್ಯರುಗಳು ಜಿಲ್ಲಾ ಬೋರ್ಡುಗಳಿಗೆ ತಮ್ಮಲ್ಲಿಯೇ ಸದಸ್ಯರನ್ನು ಆಯ್ಕೆ ಮಾಡಬಹುದು. ಜಿಲ್ಲಾ ಬೋರ್ಡ್ ಮತ್ತು ತಾಲೂಕು ಬೋರ್ಡ್‌ಗಳನ್ನು ಪ್ರತ್ಯೇಕ ಆಡಳಿತ ಸಂಸ್ಥೆಗಳೆಂದು ಪರಿಭಾವಿಸಿ, ಸಮಿತಿಯು ಅವುಗಳ ಕಾರ್ಯಗಳ ಬಗೆಗೆ ಗೊಂದಲ ತಪ್ಪಿಸಲು ಮತ್ತು ಕಾರ್ಯಕ್ರಮಗಳ ನಿರ್ವಹಣೆಯಲ್ಲಿ ಪುನರಾವರ್ತನೆಯನ್ನು ನಿವಾರಿಸಲು ಪ್ರತ್ಯೇಕ ಕರ್ತವ್ಯಗಳನ್ನು ನಿಗದಿಪಡಿಸಲು ಪ್ರಯತ್ನಿಸಿತ್ತು.

## ಮುಂಬಯಿ – ಕರ್ನಾಟಕದಲ್ಲಿ :

ಇದು ಒಂದು ಘಟ್ಟವಾದರೆ, ಹರಿಹಂಚಾಗಿದ್ದ ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರಚಲಿತವಿದ್ದ ಐತಿಹಾಸಿಕ ಹಿನ್ನೆಲೆಯನ್ನು ತಿಳಿಯುವುದು ಅವಶ್ಯಕ. ರಾಜ್ಯ ಪುನರ್ವಿಂಗಡಣೆಗೆ ಮುಂಚೆ ಮುಂಬಯಿ ಪ್ರಾಂತ್ಯಕ್ಕೆ ಸೇರಿದ್ದ ಬೆಳಗಾವಿ ಉಪವಿಭಾಗದಲ್ಲಿ ೧೯೩೮ರ ಬೊಂಬಾಯಿ ಅಧಿನಿಯಮ ಜಾರಿಯಲ್ಲಿತ್ತು. ಅದರ ಪ್ರಕಾರ ಭಾಗಶಃ ತಾಲೂಕು ಬೋರ್ಡುಗಳನ್ನು ರದ್ದುಗೊಳಿಸಲಾಗಿತ್ತು. ಅದಕ್ಕೆ ಕಾರಣ ಗ್ರಾಮಪಂಚಾಯತಿಗಳನ್ನು ಬಲಪಡಿಸುವುದೇ ಆಗಿದ್ದಿತು. ನಾಮಕರಣ ಪದ್ಧತಿಯನ್ನು ಸಂಪೂರ್ಣ ನಿಷೇಧಿಸುವುದರ ಮೂಲಕ ಜಿಲ್ಲಾ ಬೋರ್ಡುಗಳು ಹೆಚ್ಚು ಪ್ರಾತಿನಿಧ್ಯ ಪಡೆದುವು. ವಿಚಿತ್ರವೆಂದರೆ, ಜಿಲ್ಲಾ ಬೋರ್ಡುಗಳ ಜೊತೆಯಲ್ಲಿ ಸಮಾನಾಂತರವಾಗಿ ಜಿಲ್ಲಾ ಶಾಲಾ ಬೋರ್ಡುಗಳು ಅಸ್ತಿತ್ವದಲ್ಲಿದ್ದುದು ಈ ಶಾಲಾ ಬೋರ್ಡುಗಳು ಪ್ರಾಥಮಿಕ ಶಿಕ್ಷಣದೊಂದಿಗೆ ಸಂಬಂಧವಿರಿಸಿಕೊಂಡ ಸ್ಥಳೀಯ ಸಂಸ್ಥೆಗಳಿಂದ ರಚಿತವಾದದ್ದು. ಅದರೆ ಮುಂದೆ ಬೊಂಬಾಯಿ ಪ್ರಾಥಮಿಕ ಶಿಕ್ಷಣ ಅಧಿನಿಯಮ ೧೯೪೭ರ ಮೂಲಕ ಇದನ್ನು ಬದಲಾಯಿಸಲಾಯಿತು. ಈ ಜಿಲ್ಲಾ ಬೋರ್ಡುಗಳಲ್ಲಿ ಕೆಲವರು ಸದಸ್ಯರು ನಗರ ಸಭೆಗಳಿಂದ ಚುನಾಯಿತರಾಗಿರು ತ್ತಿದ್ದರು. ಉಳಿದ ಸದಸ್ಯರು ಜಿಲ್ಲಾ ಸ್ಥಳೀಯ ಬೋರ್ಡುಗಳ ಸದಸ್ಯರಿಂದ ಚುನಾಯಿತರಾಗುತ್ತಿದ್ದರು. ಬೊಂಬಾಯಿ ಕರ್ನಾಟಕ ವಲಯದ ಗ್ರಾಮಪಂಚಾಯತಿ ಗಳು, ಗ್ರಾಮ ಪಂಚಾಯತಿ ತಿದ್ದುಪದಿ ಅಧಿನಿಯಮ ೧೯೩೩ಕ್ಕೆ ಅನುಗುಣವಾಗಿ ಚುನಾಯಿತ ಸದಸ್ಯರುಗಳಿಂದ ಕೂಡಿರುತ್ತಿದ್ದವು. ೧೯೪೭ರ ತಿದ್ದುಪಡಿಯ ಪ್ರಕಾರ ಅವುಗಳಿಗೆ ಭೂಕಂದಾಯ ಶೇಕಡ ೧೦೦ರಷ್ಟು ಸಂದಾಯವಾಗುತ್ತಿತ್ತು.

## ಹೈದರಾಬಾದ್ – ಕರ್ನಾಟಕದಲ್ಲಿ :

ಹೈದರಾಬಾದ್‌ಕರ್ನಾಟಕ ಪ್ರದೇಶದಲ್ಲಿ ಜಾರಿಯಲ್ಲಿದ್ದ ಹೈದರಾಬಾದ್ ಜಿಲ್ಲಾ ಬೋರ್ಡ್ ಅಧಿನಿಯಮ, ೧೯೪೧ರ ಪ್ರಕಾರ ಚುನಾಯಿತ ಸದಸ್ಯರು ಇರುತ್ತಿದ್ದರು. ಅನಂತರ ಹೈದರಾಬಾದ್ ಜಿಲ್ಲಾ ಬೋರ್ಡ್ ಅಧಿನಿಯಮ ೧೯೫೫ರ ಮೂಲಕ ಯಾವ ಚುನಾಯಿತ ಸಂಸ್ಥೆಗಳೂ ಅಸ್ತಿತ್ವದಲ್ಲಿರದೆ ಜಿಲ್ಲಾ ಕಲೆಕ್ಟರ್ ಅಧ್ಯಕ್ಷತೆಯಲ್ಲಿ ನಾಮಕರಣ ಸದಸ್ಯರುಗಳಿಂದ ಕೂಡಿದ ಸಂಸ್ಥೆಗಳೇ ಕಾರ್ಯ ನಿರ್ವಹಿಸುತ್ತಿದ್ದುವು. ಗ್ರಾಮ ಪಂಚಾಯತಿಗಳು ಹೈದರಾಬಾದ್ ಗ್ರಾಮ ಅಧಿನಿಯಮ ೧೯೫೬ರ ಪ್ರಕಾರ ಅಸ್ತಿತ್ವಕ್ಕೆ ಬಂದುವು. ಅದರ ಪ್ರಗತಿಪರ ಅಂಶಗಳೆಂದರೆ ಗ್ರಾಮಪಂಚಾಯತಿಗಳು ಸಂಪೂರ್ಣವಾಗಿ ಚುನಾಯಿತ ಸದಸ್ಯರಿಂದ ಕೂಡಿದ್ದು, ಗ್ರಾಮ ಸಭೆಗಳ ರಚನೆ ಮತ್ತು ಗ್ರಾಮ ಸಭೆಗಳಿಗೆ ಹೆಚ್ಚಿನ ಕಾರ್ಯಾವಕಾಶಗಳನ್ನು ಒದಗಿಸಿದ್ದು ಹಾಗೂ ಸ್ಥಳೀಯ ಕರಗಳ ಮತ್ತು ಭೂಕಂದಾಯದ ಶೇಕಡ ೧೦೦ರಷ್ಟನ್ನು ಅವುಗಳಿಗೆ ಒದಗಿಸಿದ್ದು, ಜೊತೆಗೆ ೧ ರೂಪಾಯಿ ಭೂಕಂದಾಯದಲ್ಲಿ ೨ ಆಣೆಗಳಷ್ಟನ್ನು ಸರ್ಕಾರದ ಅನುಮತಿಯೊಂದಿಗೆ ಬಳಸಿಕೊಳ್ಳಬಹುದಾದ ಅವಕಾಶ. ಆದರೆ ಎಲ್ಲ ಹಳ್ಳಿಗಳಲ್ಲೂ ಪಂಚಾಯತಿಗಳು ಇಲ್ಲದಿದ್ದುದೇ ವಿಪರ್ಯಾಸ!

## ಮದರಾಸು — ಕರ್ನಾಟಕದಲ್ಲಿ :

ಹಿಂದಿನ ಮದ್ರಾಸ್ ವಿಭಾಗಕ್ಕೆ ಸೇರಿದ್ದ ರಾಜ್ಯದಲ್ಲಿ ಗ್ರಾಮಪಂಚಾಯತಿಗಳು ಮದ್ರಾಸ್ ಪಂಚಾಯಿತಿ ಅಧಿನಿಯಮ, ೧೯೫೦ (೧೯೫೦ರ ನಂ. X) ಪ್ರಕಾರ ಅಸ್ತಿತ್ವ ದಲ್ಲಿದ್ದವು. ಕಾಲಕಾಲಕ್ಕೆ ಪರಿಷ್ಕರಣೆಗೊಂಡ ಮದ್ರಾಸ್ ಜಿಲ್ಲಾ ಬೋರ್ಡ್ ಅಧಿನಿಯಮ ೧೯೨೦ (ನಂ. XIV, ೧೯೨೦) ಅನ್ನು ಅನುಸರಿಸಿಕೊಂಡು ಜಿಲ್ಲಾ ಬೋರ್ಡ್‌ಗಳು ಮುಂದುವರಿಯುತ್ತಿದ್ದವು. ಆದರೆ ೧ ಡಿಸೆಂಬರ್ ೧೯೫೨ರವರೆಗಿದ್ದ ಮದ್ರಾಸ್ ಜಿಲ್ಲಾ ಬೋರ್ಡ್‌ಗಳ ತಿದ್ದುಪಡಿ ಅಧಿನಿಯಮ ೧೯೫೨ (ನಂ. VII, ೧೯೫೨)ನ್ನು ಮತ್ತೆ ೧ ಜುಲೈ ೧೯೫೩ರವರೆಗೆ ವಿಸ್ತರಿಸಲಾಯಿತು. ಅನಂತರದಲ್ಲಿ ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳು ಹಿಂದಿನ ಮೈಸೂರು ರಾಜ್ಯಕ್ಕೆ ಸೇರಿದ್ದರಿಂದ ಮೈಸೂರು ರಾಜ್ಯದ ಜಿಲ್ಲಾ ಬೋರ್ಡುಗಳಿಗೆ ಸಂಬಂಧಪಟ್ಟ ಸಮಾನ ನೀತಿಯನ್ನು ಜಾರಿಗೆ ತರುವ ಉದ್ದೇಶದಿಂದ ೧೯೫೩ರ ಮದ್ರಾಸ್ ಅಧಿನಿಯಮ (ನಂ. V, ೧೯೫೩), ಮೈಸೂರು (ನಂ. II, ೧೯೫೪)ರ ಪ್ರಕಾರ ತಿದ್ದುಪಡಿಯಾಯಿತು. ಅಧಿನಿಯಮವು ೧೯೫೩ರ ತಿದ್ದುಪಡಿಯ ಅನುಸರಣೆಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಗೆ ವಿರ್ಶೇ ವಿಶೇಷಾಧಿಕಾರಿಯನ್ನು ನೇಮಕ ಮಾಡಲಾಯಿತು. ಈ ವ್ಯವಸ್ಥೆಯು ಹೊಸದಾದ ಅಧಿನಿಯಮ ೧೯೫೯ ಜಾರಿಗೆ ಬರುವವರೆಗೂ ಅಸ್ತಿತ್ವದಲ್ಲಿತ್ತು. ಅಂದಿನವರೆಗೆ ಪಂಚಾಯತಿಗೆ ಸಂಬಂಧಿಸಿದಂತೆ ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮದ್ರಾಸ್ ಗ್ರಾಮ ಪಂಚಾಯತಿ ಅಧಿನಿಯಮ ೧೯೫೦ರ ಪ್ರಕಾರ ಕಾರ್ಯ ನಿರ್ವಹಿಸಿಕೊಂಡು ಬಂದವು.

## ಕೊಡಗಿನಲ್ಲಿ :

ಹಿಂದೆ ಕೇಂದ್ರಾಡಳಿತ ಭಾಗದ 'ಸಿ' ರಾಜ್ಯಕ್ಕೆ ಸೇರಿದ್ದ ಕೊಡಗು ಜಿಲ್ಲೆಯಲ್ಲಿ ೧೯೫೬ರಲ್ಲಿ ಕೊಡಗು ಪಂಚಾಯತ್ ಅಧಿನಿಯಮ ಜಾರಿಗೆ ಬಂದಿತು. ಪ್ರಾಂತ ರಚನೆ ತುಂಬಾ ಸನ್ನಿಹಿತವಾಗಿದ್ದುದರಿಂದ ಮುಂದಿನ ಮೈಸೂರು ಗ್ರಾಮ ಪಂಚಾಯತಿಗಳ ಮತ್ತು ಸ್ಥಳೀಯ ಬೋರ್ಡುಗಳ ಅಧಿನಿಯಮ ೧೯೫೯ ಜಾರಿಗೆ ಬರುವವರೆಗೂ ಕೊಡಗು ಗ್ರಾಮ ಪಂಚಾಯತಿ ಅಧಿನಿಯಮ ೧೯೨೬ ಅಸ್ತಿತ್ವದಲ್ಲಿತ್ತು. ಆವರೆಗೆ ಯಾವುದೇ ತಾಲೂಕು ಅಭಿವೃದ್ಧಿ ಬೋರ್ಡ್ ಕೊಡಗು ಜಿಲ್ಲೆ ಯಲ್ಲಿರಲಿಲ್ಲ. ೧೯೦೧ರಲ್ಲಿ ಅಸ್ತಿತ್ವದಲ್ಲಿದ್ದ ಜಿಲ್ಲಾ ಬೋರ್ಡ್ ೫೦ ವರ್ಷಗಳಿಗೂ ಮಿಕ್ಕು ಕೆಲಸ ಮಾಡಿತು. ೧೯೫೩ರಲ್ಲಿ ರದ್ದಾಯಿತು. ಆವರೆಗೆ ಕೊಡಗಿನಲ್ಲಿ ಕೇವಲ ಮೂರು ಗ್ರಾಮ ಪಂಚಾಯತಿಗಳು ಮಾತ್ರ ಕಾರ್ಯನಿರತವಾಗಿದ್ದವು.

## ವರದಿ ನಿರ್ಮಿತಿಯ ಸೂತ್ರಧಾರರಾಗಿ :

ಮೇಲೆ ಕಾಣಿಸಿದ ಕಾನೂನಿಗೆ ಸಂಬಂಧಿಸಿದ ಹಲಬಗೆಯ ಅಂಶಗಳು ಓದಿನಿಂದ ಗಳಿಸಿದ ಅನುಭವಗಳು. ಆದರೆ ಮತ್ತೊಂದಿದೆ, ಅದು ವಾಸ್ತವಿಕ ಜಗತ್ತಿನಿಂದ ಮಾತ್ರ ಪಡೆದುಕೊಳ್ಳಬಹುದಾದ ಸ್ವಾನುಭವ. ಅದು ಬಹು ಮೌಲಿಕ ಹಾಗೂ ಸದೃಢವಾದುದು. ಅದನ್ನು ಸಾಧಕ ತನ್ನ ಸುತ್ತಣ ಸಮಾಜವೆಂಬ ಶಾಲೆಗೇ ಹೋಗಿ ಕಲಿಯಬೇಕು. ಕಾನೂನು ತಜ್ಞ, ಪರಿಣತ ನ್ಯಾಯವಾದಿ, ಗ್ರಾಮೀಣ ಬದುಕನ್ನು ಚೆನ್ನಾಗಿ ಕಂಡುಂಡ ಪೂರ್ಣಾನುಭವಿ ಕೊಂಡಜ್ಜಿಯವರು ತಮ್ಮ ಸಮಿತಿಯ ಸದಸ್ಯರ ಜೊತೆಯಲ್ಲಿ ಕರ್ನಾಟಕ ಮತ್ತು ಕರ್ನಾಟಕೇತರ ರಾಜ್ಯಗಳಲ್ಲಿ ಪ್ರವಾಸ ಕೈಗೊಂಡರು. ಅವುಗಳಲ್ಲಿನ ಆಡಳಿತಕ್ಕೆ ಸಂಬಂಧಪಟ್ಟ, ಕಾನೂನು ತೊಡಕುಗಳನ್ನು ಗಮನಿಸಿದರು. ಜೊತೆಗೆ ಕನ್ನಡ ನಾಡಿನ ಅನೇಕ ಹಳ್ಳಿಗಳನ್ನು ಕಾಲ್ನಡಿಗೆ, ಗ್ರಾಮೀಣ ಬದುಕಿನ ಪರಿಸ್ಥಿತಿಯನ್ನು ಮನಗಂಡರು. ಆ ಎಲ್ಲ ಅನುಭವಗಳನ್ನು ವರದಿಯನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ದುಡಿಸಿಕೊಂಡರು. ಅವುಗಳನ್ನು ಸಂಕ್ಷಿಪ್ತವಾಗಿ ಒಂದೆರಡೆಡೆಗಳಲ್ಲಿ ವಿವರಿಸಿದ್ದಾರೆ. ಅವರು ಹೀಗೆ ಹೇಳುತ್ತಾರೆ:

'ನಮ್ಮ ಪ್ರವಾಸ ಸಂದರ್ಭದಲ್ಲಿ ತಾಲೂಕು ಬೋರ್ಡುಗಳು ಮತ್ತು ಪಂಚಾಯತಿಗಳ ರಚನೆ ಮತ್ತು ವ್ಯವಸ್ಥೆಗಳನ್ನು ಕುರಿತು ನಾವು ಅನೇಕ ವ್ಯಕ್ತಿಗಳನ್ನು ಮತ್ತು ಸಂಸ್ಥೆಗಳನ್ನು ಭೇಟಿ ಮಾಡಿ ಪ್ರಶ್ನಿಸಿದಾಗ ಹಲವು ಅಭಿಪ್ರಾಯಗಳು ವ್ಯಕ್ತವಾದುವು. ನಮ್ಮ ಪ್ರಶ್ನೆಗಳಿಗೆ ಉತ್ತರವಿತ್ತ ಕೆಲವರು ಸದ್ಯದ ತಾಲೂಕು ಅಭಿವೃದ್ಧಿ ಬೋರ್ಡ್ ರಚನೆ ತೃಪ್ತಿಕರವಾಗಿಲ್ಲ. ಇದು ಬದಲಾವಣೆಯನ್ನು ಬಯಸುತ್ತದೆ. ಪಂಚಾಯತಿಗಳಿಗೂ ತಾಲೂಕು ಅಭಿವೃದ್ಧಿ ಬೋರ್ಡ್‌ಗಳಿಗೂ ಸಾವಯವ ಸಂಬಂಧವನ್ನು ಕಲ್ಪಿಸುವುದು ಉತ್ತಮ ಎಂದು ಸಲಹೆ ಮಾಡಿದರು. ಸ್ಪಷ್ಟ ಹೇಳಬೇಕೆಂದರೆ ಇಂದು ಪ್ರತಿಯೊಂದು ಪಂಚಾಯತ್ ರಾಜ್ಯವು ಸ್ವತಂತ್ರ ಸಂಸ್ಥೆಯಾಗಿ ಉಳಿದಿಲ್ಲ. ತಾಲೂಕು ಅಭಿವೃದ್ಧಿ ಬೋರ್ಡ್ ಮತ್ತು ಪಂಚಾಯತ್ ರಾಜ್‌ಗಳ ನಡುವೆ ಸೌಹಾರ್ದದ ಸೂತ್ರವೇ ಇಲ್ಲ. ಅವು ಗ್ರಾಮೀಣಾಭಿವೃದ್ಧಿಯ ಇತರ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಬೆರೆತುಹೋಗಿವೆ. ಯೋಜನೆ ಮತ್ತು ಅಭಿವೃದ್ಧಿಗಳಿಗೆ ಸಂಬಂಧಿಸಿದಂತೆ ಸುಸಂಬದ್ಧವೂ, ಸೌಹಾರ್ದಯುತವೂ ಆದ ಬಾಂಧವ್ಯವನ್ನು ಮೇಲೆ ಕಾಣಿಸಿದ ಎರಡೂ ಸಂಸ್ಥೆಗಳು ಬೆಳೆಸಿಕೊಳ್ಳುವುದು ಯೋಗ್ಯ. ಪಂಚಾಯತಿಗಳು ತಾಲೂಕು ಬೋರ್ಡ್ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಏಜೆಂಟರಂತೆ ಇವೆ. ತಾಲೂಕು ಅಭಿವೃದ್ಧಿ ಬೋರ್ಡ್ ಕಾರ್ಯಚಟುವಟಿಕೆಗಳು ಮತ್ತು ಧೋರಣೆಗಳಲ್ಲಿ ಪಂಚಾಯತಿಗಳು ತಮ್ಮ ಪ್ರಾತಿನಿಧ್ಯವನ್ನು ಶಕ್ತಿಯುತವಾಗಿಸಿಕೊಳ್ಳುವ ಅವಶ್ಯಕತೆ ಇದೆ. ಸಾಮುದಾಯಿಕ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಯೋಜನೆಗಳನ್ನು ರೂಪಿಸುವ ಸಂದರ್ಭದಲ್ಲಿ ಗ್ರಾಮೀಣ ಜನತೆಯ ಮೂಲಭೂತ ಆಶೆ ಆಶೋತ್ತರಗಳ ಮೇಲೆ ಬೆಳಕು ಚೆಲ್ಲುವಂಥವುಗಳ ಕಡೆ ಹೆಚ್ಚು ಗಮನವಿರುವುದು ಸೂಕ್ತ.

'ಈ ಎಲ್ಲ ಅಭಿಪ್ರಾಯಗಳನ್ನು ತನ್ನ ಗಮನದಲ್ಲಿಟ್ಟುಕೊಂಡು ಸಮಿತಿಯು ಬಹು ಎಚ್ಚರಿಕೆಯಿಂದ ಆಲೋಚಿಸಿ, ಚಿಂತಿಸಿ ಪಂಚಾಯತಿಗಳಿಗೂ, ತಾಲೂಕು ಅಭಿವೃದ್ಧಿ ಬೋರ್ಡುಗಳಿಗೂ ನಡುವೆ ಉತ್ತಮ ಸಂಬಂಧವಿರಬೇಕೆಂಬುದನ್ನು ಮನಗಂಡಿತು. ನಿರ್ವಹಣೆಯ ನಿಕಾಯವೊಂದು ಜಿಲ್ಲಾಮಟ್ಟದಲ್ಲಿರುವಂತೆಯೂ, ತಾಲೂಕು ಬೋರ್ಡ್ ಅಧ್ಯಕ್ಷರುಗಳು ಅದರಲ್ಲಿ ಭಾಗಿಗಳಾಗಬೇಕೆಂತಲೂ VIನೆಯ ಅಧ್ಯಾಯದಲ್ಲಿ ಶಿಫಾರಸು ಮಾಡಲಾಗಿದೆ. ತಾಲೂಕು ಬೋರ್ಡುಗಳಲ್ಲಿ ಗ್ರಾಮ ಪಂಚಾಯತಿಗಳು ಪ್ರತಿನಿಧಿಸುವ ಒಂದು ಮಧ್ಯಮ ಹಂತವನ್ನು ನಿರ್ಮಿಸಿದಂತಾಗುತ್ತದೆ ಎಂದು ಅಭಿಪ್ರಾಯಪಟ್ಟೆವು. ಒಟ್ಟಿನಲ್ಲಿ ಸದ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲೂಕು ಅಭಿವೃದ್ಧಿ ಬೋರ್ಡಿನ ರಚನೆಯಲ್ಲಿ ಪಂಚಾಯತಿಗಳಿಗೂ ತಾಲೂಕು ಬೋರ್ಡುಗಳಿಗೂ ಒಂದು ಸೌಹಾರ್ದಯುತ ಸಂಬಂಧವನ್ನು ಏರ್ಪಡಿಸುವ ಬದಲಾವಣೆಯನ್ನು ಒದಗಿಸುವುದು ನಮ್ಮ ಅಭಿಮತವಾಯಿತು!'

ಈ ರೀತಿ ದೈಹಿಕ, ಮಾನಸಿಕ ಶ್ರಮಗಳ ಜೊತೆಯಲ್ಲಿ ಕೊಂಡಜ್ಜಿಯವರು ತಮ್ಮ ವರದಿಯನ್ನು ಸಿದ್ಧಪಡಿಸುವ ವೇಳೆಯಲ್ಲಿ ಸಂಬಂಧಪಟ್ಟ ವಿವಿಧ ಇಲಾಖೆಗಳ ಅಧಿಕಾರಿಗಳು, ರಾಜ್ಯದ ವಿವಿಧ ಪ್ರದೇಶಗಳ ಅಧಿಕಾರೇತರ ಪ್ರತಿನಿಧಿಗಳು ಮತ್ತು ಅಗತ್ಯ ಕಂಡಲ್ಲಿ ಸಾರ್ವಜನಿಕರ ಅಭಿಪ್ರಾಯಗಳನ್ನೂ ಮುಕ್ತ ಮನಸ್ಸಿನಿಂದ ಸ್ವೀಕರಿಸಿ, ಅವುಗಳ ಸಾರಸಂಗ್ರಹವನ್ನು ತಮ್ಮ ಈ ವರದಿಯಲ್ಲಿ ತರುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಅದನ್ನೀಗ ಆದ್ಯಂತ ಅವಲೋಕಿಸಬಹುದು.

| ಕ್ರ. ಸಂ. | ಪ್ಯಾರಾ ನಂಬರಿನ ಉಲ್ಲೇಖ | ಶಿಫಾರಸು |
|---|---|---|
| 1. | 2.12 | ರಾಜ್ಯದ ಚಟುವಟಿಕೆಗಳನ್ನು ರಾಜ್ಯವಲಯ ಮತ್ತು ಸ್ಥಳೀಯ ವಲಯಗಳ ಚಟುವಟಿಕೆಗಳೆಂದು ವರ್ಗೀಕರಿಸಬೇಕು. ಸ್ಥಳೀಯ ಸಂಸ್ಥೆಗಳಿಗೆ ಸೂಕ್ತಮಟ್ಟದಲ್ಲಿ ಅನುಷ್ಠಾನಗೊಳಿಸಲು ವಹಿಸಿಕೊಡತಕ್ಕದ್ದು. |
| 2. | 2.12 | ಈಗ ಅಸ್ತಿತ್ವದಲ್ಲಿರುವ ಜಿಲ್ಲಾಭಿವೃದ್ಧಿ ಪರಿಷತ್ತುಗಳ ಸ್ಥಾನದಲ್ಲಿ ಅಧಿಕಾರೇತರ ಅಧ್ಯಕ್ಷರನ್ನೊಳಗೊಂಡ ಜಿಲ್ಲಾ ಪರಿಷತ್ ಎಂಬ ಕಾರ್ಯನಿರ್ವಾಹಕ ಮಂಡಲಿಯು ಅಸ್ತಿತ್ವಕ್ಕೆ ಬರತಕ್ಕದ್ದು. ಈ ಜಿಲ್ಲಾ ಪರಿಷತ್ತು, ಜಿಲ್ಲಾ ಮಟ್ಟದ ಎಲ್ಲ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನ ಗೊಳಿಸುವ ಅಧಿಕಾರವನ್ನು ತಾಲೂಕಾಭಿವೃದ್ಧಿ ಮಂಡಲಿಗಳಿಗೆ ಮಾರ್ಗದರ್ಶನ ನೀಡುವ ಹಾಗೂ ಮೇಲ್ವಿಚಾರಣೆ ನಡೆಸುವ ಅಧಿಕಾರವನ್ನೂ ಹೊಂದಿರುತ್ತದೆ. ಅಂತೆಯೇ ಜಿಲ್ಲಾ ಮಟ್ಟದ ಅಡಿಯಲ್ಲಿರುವ ತಾಲೂಕಾಭಿವೃದ್ಧಿ ಮಂಡಲಿಗಳ ಹಾಗೂ ಪಂಚಾಯತಿಗಳ ತಾಂತ್ರಿಕ ಸಿಬ್ಬಂದಿ ಯನ್ನು ಒಳಗೊಂಡು ಜಿಲ್ಲೆಯ ಸಮಗ್ರ ಅಭಿವೃದ್ಧಿ ಯೋಜನೆಗಳ ಬಗೆಗೆ ಸಂಪೂರ್ಣ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ಹೊಂದಿರುತ್ತದೆ. |
| 3. | 2.13 | ಜಿಲ್ಲಾ ಮಟ್ಟದಲ್ಲಿ ಅಸ್ತಿತ್ವದಲ್ಲಿರುವ ಕಾರ್ಯನಿರ್ವಾಹಕ ಮಂಡಲಿಯು ಸದ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲೂಕು ಬೋರ್ಡುಗಳ ಪ್ರಾಮುಖ್ಯತೆಯನ್ನು ಕಡೆಗಣಿಸತಕ್ಕುದಲ್ಲ. ಅದಕ್ಕೆ ಬದಲು ಈ ಮಂಡಲಿಗಳಿಗೆ ಇನ್ನೂ ಹೆಚ್ಚಿನ ಯೋಜನೆಗಳ ಅನುಷ್ಠಾನದ ಹೊಣೆಯನ್ನು ವರ್ಗಾಯಿಸ ತಕ್ಕದ್ದು. ಅಂದರೆ ಈ ತಾಲೂಕಾಭಿವೃದ್ಧಿ ಮಂಡಲಿಗಳು ಜಿಲ್ಲಾ ಪರಿಷತ್ತು ಆಯೋಜಿಸುವ ಎಲ್ಲ ಕಾರ್ಯಕ್ರಮ ಗಳನ್ನು ಅನುಷ್ಠಾನಗೊಳಿಸುವ ಏಜನ್ಸಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು. |
| 4. | 2.15 | ಸದ್ಯದಲ್ಲಿ ಅಸ್ತಿತ್ವದಲ್ಲಿರುವ ತಾಲೂಕು ಅಭಿವೃದ್ಧಿ ಮಂಡಲಿಗಳು ಪಂಚಾಯತಿಗಳು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳ ನಡುವೆ ಉತ್ತಮ ಬಾಂಧವ್ಯವನ್ನು ರೂಪಿಸಿಕೊಳ್ಳತಕ್ಕದ್ದು. |
| 5. | 2.17 | ತಾಲೂಕು ಕೇಂದ್ರವು ಅಭಿವೃದ್ಧಿ ಆಡಳಿತದ ಒಂದು ಘಟಕವಾಗಿ ಮುಂದುವರಿಯತಕ್ಕದ್ದು. ಸಮುದಾಯ ಅಭಿವೃದ್ಧಿ ಮಂಡಲಿಗೆ ಪಂಚಾಯತ್ |

ಸಮಿತಿಗಳ ಆವಶ್ಯಕತೆ ಇರುವುದಿಲ್ಲ. ಯಾವುದೇ ತಾಲೂಕಿನ ವ್ಯಾಪ್ತಿಯಲ್ಲಿ ಎರಡಕ್ಕಿಂತ ಹೆಚ್ಚು ಸಮುದಾಯಾಭಿವೃದ್ಧಿ ಮಂಡಲಿಗಳಿರ ತಕ್ಕುದಲ್ಲ. ನಾಲ್ಕು ಬ್ಲಾಕ್‌ಗಳಿರುವ ತಾಲೂಕುಗಳನ್ನು ಈ ಕೆಳಕಂಡಂತೆ ವಿಭಾಗಿಸತಕ್ಕದ್ದು. ಅಂದರೆ ವಿಭಜಿತ ಎರಡು ಬ್ಲಾಕುಗಳ ವ್ಯಾಪ್ತಿಯು ಒಂದಕ್ಕೊಂದು ಪೂರಕವಾಗಿರ ಬೇಕು. ಅಂತೆಯೇ ಮೂರು ಬ್ಲಾಕ್‌ಗಳನ್ನು ಒಳಗೊಂಡ ತಾಲೂಕುಗಳನ್ನು ತಲಾ ಒಂದೂವರೆ ಬ್ಲಾಕ್‌ಗಳಂತೆ ಎರಡು ತಾಲೂಕುಗಳಾಗಿ ವಿಭಜಿಸತಕ್ಕದ್ದು. ಯಾವುದೇ ಬ್ಲಾಕ್ ಒಂದು ತಾಲೂಕಿಗಿಂತ ಹೆಚ್ಚಿನ ವ್ಯಾಪ್ತಿಯನ್ನು ಒಳಗೊಂಡಿದ್ದರೆ, ಅದನ್ನು ಒಂದು ಸಮಗ್ರ ತಾಲೂಕು ಎಂದು ಪರಿಗಣಿಸತಕ್ಕದ್ದು.

6. 2.19 ಪಂಚಾಯತ್ ಸಂಸ್ಥೆಗಳ ಅಧಿಕಾರಾವಧಿಯು ಐದು ವರ್ಷ ಗಳವರೆಗೆ ಇರಬೇಕು. ಇವುಗಳ ಚುನಾವಣೆಯು ಲೋಕಸಭೆ ಮತ್ತು ವಿಧಾನಸಭೆಗಳ ಸಾರ್ವತ್ರಿಕ ಚುನಾವಣೆಗಳಿಗೆ ಎರಡೂವರೆ ವರ್ಷಗಳ ಮೊದಲು ಅಥವಾ ಆ ಚುನಾವಣೆಗಳು ನಡೆದ ಎರಡೂವರೆ ವರ್ಷಗಳ ನಂತರ ನಡೆಯುವುದು ಸೂಕ್ತ.

7. 3.4 ಈ ಹಿನ್ನೆಲೆಯಲ್ಲಿ ಸದ್ಯದಲ್ಲಿರುವ ಗ್ರಾಮಗಳ ಗುಂಪುಗಳನ್ನು ಪುನರ್‌ಪರಿಶೀಲಿಸುವ ಅಗತ್ಯತೆ ಇದೆ. ವಿಶೇಷವಾಗಿ ೧೫೦೦ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಮಲೆನಾಡು ಪ್ರದೇಶದ ರೆವಿನ್ಯೂ ಗ್ರಾಮಗಳಿಗೆ ಪ್ರತ್ಯೇಕ ಪಂಚಾಯಿತಿಗಳನ್ನು ರಚಿಸಿಕೊಡತಕ್ಕದ್ದು.

8. 3.5 ಗ್ರಾಮಗಳ ಪುನರ್ವಿಂಗಡಣೆಯ ಕಾರ್ಯವನ್ನು ಮುಂಬರುವ ಪಂಚಾಯತ್ ರಾಜ್ ಚುನಾವಣೆಗೆ ಮುಂಚೆ ಮಾಡಬೇಕು. ಹೀಗೆ ಮಾಡುವಾಗ ಗ್ರಾಮ ಪಂಚಾಯತಿಗಳು ಮತ್ತು ತಾಲೂಕಾಭಿವೃದ್ಧಿ ಮಂಡಲಿಗಳೊಡನೆ ಚರ್ಚಿಸಿ ಈ ಕಾರ್ಯವನ್ನೆಸಗುವಂತೆ ಸರ್ಕಾರವು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ನಿರ್ದೇಶನವನ್ನೂ ನೀಡಬೇಕು. ಉದ್ದೇಶಿತ ಗ್ರಾಮಗಳ ಪುನರ್ವಿಂಗಡಣೆಯ ಸಂಬಂಧದಲ್ಲಿ ಸಂಪರ್ಕ ಸೌಲಭ್ಯ ಹಾಗೂ ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಒಂದು ರೆವಿನ್ಯೂ ಗ್ರಾಮವನ್ನು ಸೇರಿಸುವ ಅಥವಾ ಬಿಡುವ ನಿರ್ಧಾರವನ್ನು ತೆಗೆದುಕೊಳ್ಳ ಬೇಕು. ಹಾಗೂ ಒಂದು ಗ್ರಾಮಕ್ಕೆ ಪ್ರತ್ಯೇಕ ಪಂಚಾಯತಿ ಯನ್ನು ರೂಪಿಸುವ ಬಗೆಗೆ ನಿರ್ಣಯ ತೆಗೆದುಕೊಳ್ಳಬೇಕು. ೧೫೦೦ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಒಂದು ಗ್ರಾಮಕ್ಕೆ ಪ್ರತ್ಯೇಕ ಪಂಚಾಯತಿಯನ್ನು ರಚಿಸಬೇಕೆಂಬ ಮನವಿಗಳು ಬಂದ ಸಂದರ್ಭದಲ್ಲಿ ಸೆಕ್ಷನ್ ೩ರ ಪರಂತುಕದಲ್ಲಿ ಸರ್ಕಾರವು ಹೊಂದಿರುವ

ಅಧಿಕಾರವನ್ನು ಉದಾರ ಹಾಗೂ ಮುಕ್ತವಾಗಿ ಬಳಸಿ, ಅಂತಹ ಪಂಚಾಯತಿ ರಚನೆಯ ತೀರ್ಮಾನವನ್ನು ಕೈಗೊಳ್ಳಬೇಕು. ಆದರೆ ೫೦೦ಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಯಾವುದೇ ರೆವಿನ್ಯೂ ಗ್ರಾಮಕ್ಕೆ ಪ್ರತ್ಯೇಕ ಪಂಚಾಯತಿಯನ್ನು ರಚಿಸದಂತೆ ನೋಡಿಕೊಳ್ಳತಕ್ಕದ್ದು.

9. 3.6 ಯಾವುದೇ ಗ್ರಾಮಕ್ಕೆ ಪ್ರತ್ಯೇಕ ಪಂಚಾಯತಿಯನ್ನು ರಚಿಸಿದ ಬಗ್ಗೆ ಯಾವುದೇ ಪ್ರದೇಶವನ್ನು ಒಂದು ಗ್ರಾಮ ಎಂದು ಘೋಷಿಸುವ ಅಧಿಸೂಚನೆಯನ್ನು ಹೊರಡಿಸುವ ಅಧಿಕಾರವು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಇರತಕ್ಕದ್ದು. ಅಂತೆಯೇ ತಾಲೂಕು ಅಭಿವೃದ್ಧಿ ಮಂಡಲಿಗಳ ಸಮಾಲೋಚನೆಯೊಂದಿಗೆ ಯಾವುದೇ ಗ್ರಾಮವನ್ನು ಸೇರಿಸುವ ಅಥವಾ ಬಿಡುವ ಅಧಿಕಾರವೂ ಸಹ ಜಿಲ್ಲಾಧಿಕಾರಿಗಳಿಗೇ ಇರತಕ್ಕದ್ದು.

10. 3.7 ಪಂಚಾಯತಿಗಳ ಸ್ಥಾನಗಳ ಸಾಮರ್ಥ್ಯವು ಈ ಕೆಳಕಂಡಂತಿರುವುದು.

(ಅ) ಜನಸಂಖ್ಯೆ ೫೦೦ ಅಥವಾ ೫೦೦ಕ್ಕಿಂತ ಕಡಿಮೆ ಇಲ್ಲದ ಹಾಗೂ ೧೫೦೦ಕ್ಕೆ ಹೆಚ್ಚಿಲ್ಲದ ಸನ್ನಿವೇಶದಲ್ಲಿ...

9 ಸ್ಥಾನಗಳು

(ಆ) ಜನಸಂಖ್ಯೆ ೧೫೦೦ ಮತ್ತು ಅದಕ್ಕಿಂತ ಹೆಚ್ಚು, ಆದರೆ ೩,೦೦೦ವನ್ನು ಮೀರದ ಸನ್ನಿವೇಶದಲ್ಲಿ...

11 ಸ್ಥಾನಗಳು

(ಇ) ಜನಸಂಖ್ಯೆ ೩,೦೦೦ ಮತ್ತು ಅದಕ್ಕಿಂತ ಹೆಚ್ಚು ಆದರೆ ೫೦೦೦ವನ್ನು ಮೀರದೆ ಇರುವ ಸನ್ನಿವೇಶದಲ್ಲಿ...

13 ಸ್ಥಾನಗಳು

(ಈ) ಜನಸಂಖ್ಯೆ ೫೦೦೦ ಮತ್ತು ಅದಕ್ಕಿಂತ ಹೆಚ್ಚು ಆದರೆ ೧೦,೦೦೦ವನ್ನು ಮೀರಿರದ ಸನ್ನಿವೇಶದಲ್ಲಿ...

15 ಸ್ಥಾನಗಳು

11. 3.8 ಯಾವುದೇ ಕಾರಣದಿಂದ ಪಂಚಾಯತಿಯ ಒಂದು ಸ್ಥಾನವೂ ಚುನಾವಣೆಯ ಮೂಲಕ ಭರ್ತಿಯಾಗದ ಸಂದರ್ಭದಲ್ಲಿ ಆಡಳಿತ ಸಮಿತಿ ಅಥವಾ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಈ ಅಧಿನಿಯಮದಲ್ಲಿ ಅವಕಾಶವಿರತಕ್ಕದ್ದು. ಎರಡನೆಯ ಸಲದ ಚುನಾವಣೆಯ ಸಂದರ್ಭದಲ್ಲಿಯೂ ಪಂಚಾಯತಿಗೆ ಒಬ್ಬ ಸದಸ್ಯನೂ ಆಯ್ಕೆಯಾಗದಿದ್ದ ಪಕ್ಷದಲ್ಲಿ ಅಧಿನಿಯಮದಲ್ಲಿ ಈ ಅವಕಾಶವಿರತಕ್ಕದ್ದು.

5749-15

12. 3.9 ನೂತನ ಚುನಾವಣೆಯ ಸಂದರ್ಭದಲ್ಲಿ ಸ್ಥಾನಗಳು ಭರ್ತಿ ಯಾಗದೆ ಉಳಿದಾಗ ಕಾನೂನಿನ ಚೌಕಟ್ಟಿನಲ್ಲಿ ಆ ಸ್ಥಾನಗಳಿಗೆ ಸಹ ಸದಸ್ಯರನ್ನು ನೇಮಕ ಮಾಡಿಕೊಳ್ಳುವ ಅಧಿಕಾರವು ಪಂಚಾಯತಿಗಳಿಗಿರತಕ್ಕದ್ದೇ ಹೊರತು ಜಿಲ್ಲಾಧಿಕಾರಿಗಳಿಗಲ್ಲ.

13. 3.10 ಯಾವುದೇ ಒಂದು ಸ್ಥಾನವು ಖಾಲಿ ಉಳಿದುದಕ್ಕೆ ಕಾರಣವನ್ನು ಕೊಡುವಾಗ, 'ಸಾಮಾನ್ಯ ಸ್ಥಾನ' ಮತ್ತು 'ಸಾಂದರ್ಭಿಕ ಸ್ಥಾನ' ಎಂಬ ಪದಗಳಲ್ಲಿ ಕರಾರುವಾಕ್ಕಾಗಿ ಹೇಳತಕ್ಕದ್ದು.

14. 3.12 ಪಂಚಾಯಿತಿಯ ಓರ್ವ ಸದಸ್ಯನು ಪಂಚಾಯತಿಯ ರಜೆಯ ಮೇಲಲ್ಲದೆ ಮತ್ತು ನಾಲ್ಕು ತಿಂಗಳುಗಳಿಗೂ ಹೆಚ್ಚು ಕಾಲ ಗ್ರಾಮವನ್ನು ಬಿಟ್ಟುಹೋಗಿದ್ದರೆ ಮತ್ತು ಪಂಚಾಯತಿಯ ಸಭೆಗಳಿಗೆ ನಿರಂತರ ಮೂರು ತಿಂಗಳುಗಳ ಕಾಲ ಗೈರು ಹಾಜರಾಗಿದ್ದರೆ ಅಂತಹ ಸದಸ್ಯನನ್ನು ಸದಸ್ಯತ್ವಕ್ಕೆ ಅನರ್ಹ ನೆಂದು ನಿರ್ಧರಿಸುವ ಅವಕಾಶವು ಮೈಸೂರು ಗ್ರಾಮ ಪಂಚಾಯತಿ ಮತ್ತು ಸ್ಥಳೀಯ ಬೋರ್ಡುಗಳ ೧೯೫೯ರ ಸೆಕ್ಷನ್ II(2) (iv)ರಲ್ಲಿರತಕ್ಕದ್ದು.

15. 3.15 ಗ್ರಾಮಸಭೆಯ ಸದಸ್ಯರಾಗಿ ಸೇರ್ಪಡೆಯಾಗುವವರ ಹೆಸರು ಗಳು ಆ ಗ್ರಾಮದ ಮತದಾರರ ಪಟ್ಟಿಯಲ್ಲಿರಬೇಕು. ಈ ಕೆಳಕಂಡ ವಿಷಯಗಳನ್ನು ಪರಿಗಣಿಸಲು ಗ್ರಾಮಸಭೆಯು ಕನಿಷ್ಠ ಪಕ್ಷ ವರ್ಷಕ್ಕೆ ಎರಡು ಬಾರಿ ಸೇರತಕ್ಕದ್ದು.

(ಅ) ವಾರ್ಷಿಕ ಲೆಕ್ಕಪತ್ರ ಮತ್ತು ಆಡಳಿತ ವರದಿಗಳು.

(ಆ) ಕಳೆದ ಹಣಕಾಸು ವರ್ಷದ ಆಡಳಿತಕ್ಕೆ ಸಂಬಂಧಪಟ್ಟ ನಡಾವಳಿಗಳ ವರದಿ.

(ಇ) ವಾರ್ಷಿಕ ಆಯವ್ಯಯ ಅಥವಾ ಕಾರ್ಯಕ್ರಮಗಳಲ್ಲಿ ಸೇರ್ಪಡೆಯಾಗದ ಕಾರ್ಯಕ್ರಮಗಳು ಅಥವಾ ಯಾವುದಾದರೂ ಹೊಸ ಕಾರ್ಯಕ್ರಮಗಳು.

(ಈ) ಸದ್ಯದಲ್ಲಿರುವ ತೆರಿಗೆಯನ್ನು ಹೆಚ್ಚಿಸುವ ಅಥವಾ ಹೊಸ ತೆರಿಗೆಯನ್ನು ವಿಧಿಸುವ ಪ್ರಸ್ತಾವಗಳು.

16. 3.16 ಪಂಚಾಯಿತಿಸಭೆಯ ಕೋರಂಅನ್ನು ಆ ಪಂಚಾಯತಿಯ ಒಟ್ಟು ಸದಸ್ಯರ ಮೂರನೇ ಒಂದು ಭಾಗದಷ್ಟು ಇರುವಂತೆ ನಿಗದಿಪಡಿಸತಕ್ಕದ್ದು.

| | | |
|---|---|---|
| 17. | 3.17 | ಗ್ರಾಮ ಪಂಚಾಯತಿಗಳ ಮೇಲೆ ಸಹಕಾರಿ ಸಂಘಗಳ ಶಾಸನಬದ್ಧ ಪ್ರಾತಿನಿಧ್ಯವು ಇರುವ ಅಗತ್ಯ ಇಲ್ಲ. ಆದರೆ ಸೇವಾ ಸಹಕಾರ ಸಂಘದ ಅಧ್ಯಕ್ಷನನ್ನು ಪಂಚಾಯತಿಯ ಉತ್ಪಾದನಾ ಸಮಿತಿಯ ಒಬ್ಬ ಸಹ ಸದಸ್ಯನನ್ನಾಗಿ ತೆಗೆದು ಕೊಳ್ಳಬಹುದು. |
| 18. | 3.18 | ಅಸ್ತಿತ್ವದಲ್ಲಿರುವ ವ್ಯಾಖ್ಯಾನದ ಪ್ರಕಾರ 'ಜನ ವಾಸಿಸುವ ಪ್ರದೇಶ' ಎನ್ನುವ ಪದವು ಒಳಗೊಂಡಿರುವ ಸಂದೇಹವನ್ನು ಪರಿಹರಿಸುವ ಸಲುವಾಗಿ ಪ್ರಸ್ತುತ ಆಕ್ಯುಪೈಯ್ ಎಂಬ ಪದಕ್ಕೆ ತಿದ್ದುಪಡಿ ಸೂಚಿಸತಕ್ಕದ್ದು. |
| 19. | 3.19 | ಒಂದು ಗ್ರಾಮಠಾಣದ ವ್ಯಾಪ್ತಿಯಲ್ಲಿ ಕೈಗೊಳ್ಳುವ ಯಾವುದೇ ಕಟ್ಟಡದ ನಿರ್ಮಾಣ, ಮರು ನಿರ್ಮಾಣ ಅಥವಾ ವಿಸ್ತರಣೆಗೆ ಸಂಬಂಧಿಸಿದಂತೆ ಮೈಸೂರು ಪಂಚಾಯತಿಗಳ ೧೯೬೦ರ ಕಟ್ಟಡ ನಿರ್ಮಾಣ ಹತೋಟಿಯ ೭ನೆಯ ನಿಯಮದ ಅನ್ವಯ ಸಡಿಲಗೊಳಿಸಲು ಅವಕಾಶವಿರ ತಕ್ಕದ್ದು. ಜೊತೆಗೆ ಯಾವುದೇ ಗ್ರಾಮದ ವ್ಯಾಪ್ತಿ ಅಥವಾ ಹೊಸ ಬಡಾವಣೆಗಳ ಸಂಬಂಧದಲ್ಲೂ ಇದೇ ನಿಯಮವು ಅನ್ವಯವಾಗತಕ್ಕದ್ದು. |
| 20. | 4.7 | ನ್ಯಾಯ ಪಂಚಾಯತಿ ಅಧ್ಯಯನ ಸಮಿತಿಯ ಬಹುಪಾಲು ಶಿಫಾರಸುಗಳನ್ನು ಅಂಗೀಕರಿಸಬಹುದು. ಈ ಸಂಬಂಧ ಪ್ರತ್ಯೇಕ ಶಾಸನವನ್ನು ಜಾರಿಗೊಳಿಸುವ ಬದಲು ನ್ಯಾಯ ಪಂಚಾಯತಿಗಳ ಬಗ್ಗೆ ಒಂದು ಪ್ರತ್ಯೇಕ ಅಧ್ಯಯನವನ್ನು ಪ್ರಸ್ತುತ ಅಧಿನಿಯಮದಲ್ಲಿ ಅಳವಡಿಸಬಹುದು. |
| 21. | 4.8 | ಪಂಚಾಯತಿಯ ಸದಸ್ಯರನ್ನು ಒಳಗೊಂಡು, ಸಂಬಂಧಪಟ್ಟ ಗ್ರಾಮನಿವಾಸಿಗಳಿಗೆ ನ್ಯಾಯ ಪಂಚಾಯತಿಯ ಸದಸ್ಯತ್ವದ ಅವಕಾಶ ಇರುವಂತೆ ಪರಿಬಂಧಿಸತಕ್ಕದ್ದು. ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ ನ್ಯಾಯಪಂಚಾಯತಿಗಳನ್ನು ರಚಿಸತಕ್ಕದ್ದು. ಆದರೆ ಈ ರಚನೆಯು ನ್ಯಾಯ ಪಂಚಾಯತಿ ಅಧ್ಯಯನ ತಂಡದ ಶಿಫಾರಸುಗಳ ಅನ್ವಯ ಇರಬೇಕಾಗಿಲ್ಲ. |
| 22. | 4.9 | ಪ್ರತಿಯೊಂದು ಗ್ರಾಮ ಪಂಚಾಯಿತಿಗೂ ಸಂಬಂಧಪಟ್ಟ ಪಂಚಾಯತಿ ವ್ಯಾಪ್ತಿಯ ಐದು ಜನರನ್ನು ನ್ಯಾಯ ಪಂಚಾಯತಿಗೆ ಸದಸ್ಯರಾಗಿ ಚುನಾಯಿಸತಕ್ಕದ್ದು. ಈ ಸದಸ್ಯರು ೩೦ ವರ್ಷಗಳ ಒಳಗಿನ ವಯಸ್ಕರಾಗಿದ್ದು, ಸ್ಥಳೀಯ ಭಾಷೆಯನ್ನು ಸರಾಗವಾಗಿ ಓದುವ ಮತ್ತು ಬರೆಯುವ ಸಾಮರ್ಥ್ಯವನ್ನು ಹೊಂದಿರತಕ್ಕದ್ದು. ಈ ಐದು ಸ್ಥಾನಗಳಲ್ಲಿ ಒಂದು ಸ್ಥಾನವು ಪರಿಶಿಷ್ಟ ಜಾತಿಗಳಿಗೂ ಮತ್ತು ಒಂದು ಸ್ಥಾನವು ಮಹಿಳೆಯರಿಗೂ ಮೀಸಲಿರತಕ್ಕದ್ದು. |

23. 4.10 ನ್ಯಾಯ ಪಂಚಾಯತಿ ಸದಸ್ಯರ ಅಧಿಕಾರಾವಧಿಯು, ಅವರನ್ನು ಚುನಾಯಿಸಿದ ಪಂಚಾಯತಿಯ ಅಧಿಕಾರದ ಅವಧಿಯು ಮುಗಿಯುವವರೆಗೆ ಮುಂದುವರಿಯತಕ್ಕದ್ದು.

24. 4.11 ಸಿವಿಲ್ ದಾವೆಗಳ ಸಂಬಂಧದಲ್ಲಿ ಆರ್ಥಿಕ ಮಿತಿಯನ್ನು ಒಂದು ನೂರು ರೂಪಾಯಿಗಳಿಗೆ ನಿಗದಿಪಡಿಸಬಹುದು ಮತ್ತು ಸಂಬಂಧಪಟ್ಟ ಪಾರ್ಟಿಗಳ ಅನುಮತಿಯ ಮೇರೆ ಈ ಮೊತ್ತವು ೫೦೦ರವರೆಗೂ ಇರಬಹುದು.

25. 4.12 ನ್ಯಾಯ ಪಂಚಾಯತಿಗಳ ಅಧ್ಯಯನ ತಂಡದ ಶಿಫಾರಸಿನ ಮೇರೆಗೆ ನ್ಯಾಯ ಪಂಚಾಯತಿಗಳು ಕೈಗೆತ್ತಿಕೊಳ್ಳಬೇಕಾದ ಅಪರಾಧಗಳನ್ನು ಪರಿಗಣಿಸತಕ್ಕದ್ದು. ಆದರೂ ಜಿಲ್ಲೆಯ ಹೆಚ್ಚುವರಿ ಮ್ಯಾಜಿಸ್ಟ್ರೇಟರು ನ್ಯಾಯ ಪಂಚಾಯತಿಗಳು ಕೈಗೆತ್ತಿಕೊಳ್ಳಬಹುದಾದ ಮೊಕದ್ದಮೆಗಳ ಬಗ್ಗೆ ಪ್ರಕಟಣೆ ಯನ್ನು ಹೊರಡಿಸಬಹುದು.

26. 4.13 ದಾವೆ ಮತ್ತು ಅಪರಾಧಗಳ ಸಂಬಂಧದಲ್ಲಿ 'ಭಾರತೀಯ ಕಾಲಮಿತಿ ಅಧಿನಿಯಮ'ದಲ್ಲಿ ಪ್ರಸ್ತಾಪಿಸಿರುವ ಕಾಲಮಿತಿಗೆ ಬದ್ಧವಾಗಿರತಕ್ಕದ್ದು.

27. 4.14 ನ್ಯಾಯ ಪಂಚಾಯತಿಗಳು ಮೈಸೂರು ಗ್ರಾಮ ಪಂಚಾಯತಿ ಗಳ ಮತ್ತು ಸ್ಥಳೀಯ ಬೋರ್ಡ್‌ಗಳ ಅಧಿನಿಯಮದನ್ವಯ ಈ ಕೆಳಕಂಡ ಅಪರಾಧಗಳನ್ನು ಅಧಿವಿಚಾರಣೆಗೆ ಒಳಪಡಿಸ ಬಹುದು :

(1) ಅನುಮತಿ ಇಲ್ಲದೆ ಯಾವುದೇ ಕಟ್ಟಡವನ್ನು ಕಟ್ಟುವುದು ಅಥವಾ ಮರುನಿರ್ಮಾಣ ಮಾಡುವುದು.

(2) ಖಾಲಿ ನಿವೇಶನಗಳು, ಹುಲ್ಲುಗಾವಲುಗಳು ಹಾಗೂ ಸಾರ್ವಜನಿಕ ರಸ್ತೆಗಳಿಗೆ ಅಡೆತಡೆ ಮತ್ತು ಒತ್ತುವರಿ.

(3) ಒಂದು ಆವರಣ ಅಥವಾ ಅದರ ಭಾಗವನ್ನು ಹಾಳು ಮಾಡುವ ಅಥವಾ ವಿರೂಪಗೊಳಿಸುವ ಒಂದು ಅಥವಾ ಅನೇಕ ಪ್ರಯತ್ನಗಳು.

(4) ಕಾನೂನಿಗೆ ವ್ಯತಿರಿಕ್ತವಾದ ಕ್ರಮಗಳು.

(5) ಬೈಲಾಗಳಿಗೆ ವಿರುದ್ಧವಾದ ಕಾರ್ಯಗಳು.

28. 4.17 ನ್ಯಾಯಪಂಚಾಯತಿಗಳು ಮೈಸೂರು ಕಡ್ಡಾಯ ಪ್ರಾಥಮಿಕ ಶಿಕ್ಷಣ ಅಧಿನಿಯಮದಡಿ ಈ ಕೆಳಕಂಡ ಅಪರಾಧಗಳನ್ನು ಅಧಿವಿಚಾರಣೆಗೆ ಒಳಪಡಿಸಬಹುದು:

(1) ಅಂಗೀಕೃತ ಶಾಲೆಗೆ ಮಗುವನ್ನು ಕಳುಹಿಸದಿರುವುದು.

(2) ಅಂಗೀಕೃತ ಶಾಲೆಗೆ ಹೋಗದಂತೆ ಮಗುವನ್ನು ಕೆಲಸಕ್ಕೆ ಹಚ್ಚುವುದು.

29. 5.4 ಪಂಚಾಯತ್ ರಾಜ್ ಸಂಸ್ಥೆಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ ಅವುಗಳ ಗಾತ್ರವು ಚಿಕ್ಕ ಮತ್ತು ಚೊಕ್ಕವಾಗಿರತಕ್ಕದ್ದು.

30. 5.5 ತಾಲೂಕು ಅಭಿವೃದ್ಧಿ ಮಂಡಲಿಯು ಭಾಗಶಃ ನೇರ ಚುನಾವಣೆ ಮತ್ತು ಭಾಗಶಃ ಪರೋಕ್ಷ ಚುನಾವಣೆಯ ಮೂಲಕ ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿರ ತಕ್ಕದ್ದು. ಪರೋಕ್ಷ ಚುನಾವಣೆಯ ಮೂಲಕ ಆಯ್ಕೆಯಾದ ಸದಸ್ಯರು ಪಂಚಾಯತಿಗಳನ್ನು ಪ್ರತಿನಿಧಿಸುತ್ತಾರೆ.

31. 5.6 ತಾಲೂಕು ಅಭಿವೃದ್ಧಿ ಮಂಡಲಿಗೆ ನಿಗದಿಪಡಿಸಿರುವ ಪರೋಕ್ಷ ಚುನಾಯಿತ ಪ್ರತಿನಿಧಿಗಳು ಸಂಬಂಧಪಟ್ಟ ತಾಲೂಕಿನ ಎಲ್ಲ ಪಂಚಾಯತಿಗಳ ಸದಸ್ಯರಾಗಿರತಕ್ಕದ್ದು.

32. 5.8 ತಾಲೂಕು ಅಭಿವೃದ್ಧಿ ಮಂಡಲಿಯ ಸದಸ್ಯರ ಸಾಮರ್ಥ್ಯವನ್ನು ಈ ಕೆಳಕಂಡಂತೆ ನಿರ್ಧರಿಸತಕ್ಕದ್ದು:

(ಅ) 60,000ಕ್ಕೆ ಮೀರದ ಜನಸಂಖ್ಯೆಗೆ...

15 ಸ್ಥಾನಗಳು

(ಆ) 60,000ಕ್ಕೂ ಹೆಚ್ಚು, ಆದರೆ 90,000ವನ್ನು ಮೀರದ ಜನಸಂಖ್ಯೆಗೆ...

17 ಸ್ಥಾನಗಳು

(ಇ) 90,000 ಮತ್ತು ಅದಕ್ಕಿಂತ ಹೆಚ್ಚಿನ, ಆದರೆ 1,30,000 ಮೀರದ ಜನಸಂಖ್ಯೆಗೆ...

19 ಸ್ಥಾನಗಳು

(ಈ) 1,30,000 ಮತ್ತು ಅದಕ್ಕಿಂತ ಹೆಚ್ಚಿನ, ಆದರೆ 1,75,000 ಮೀರದ ಜನಸಂಖ್ಯೆಗೆ ...

21 ಸ್ಥಾನಗಳು

(ಉ) 1,75,000 ಮತ್ತು ಅದಕ್ಕಿಂತ ಹೆಚ್ಚಿನ, ಆದರೆ 2,25,000 ಮೀರದ ಜನಸಂಖ್ಯೆಗೆ ...

23 ಸ್ಥಾನಗಳು

(ಊ) 2,50,000 ಮತ್ತು ಅದಕ್ಕಿಂತ ಹೆಚ್ಚಿನ ಜನಸಂಖ್ಯೆಗೆ...

25 ಸ್ಥಾನಗಳು

ಒಟ್ಟು ಸದಸ್ಯರ ಪೈಕಿ ಪರಿಪೂರ್ಣ ಬಹುಮತಕ್ಕೆ ಬೇಕಾಗುವಷ್ಟು ಸದಸ್ಯರನ್ನು ನೇರವಾಗಿ ವಯಸ್ಕರ ಮತದಾನ ಪದ್ಧತಿಯ ಮೂಲಕ ಮತ್ತು ಉಳಿದ ಸದಸ್ಯರನ್ನು ಪರೋಕ್ಷವಾಗಿ ತಾಲೂಕಿನ ಪಂಚಾಯತಿ ಸದಸ್ಯರ ಮೂಲಕ ಆಯ್ಕೆ ಮಾಡತಕ್ಕದ್ದು. ನೇರ ಚುನಾವಣೆಗಾಗಿ ತಾಲೂಕಿನ ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು, ಪ್ರಾದೇಶಿಕ ಕ್ಷೇತ್ರಗಳ ಆಧಾರದ ಮೇಲೆ ಆಯ್ಕೆ ಮಾಡತಕ್ಕದ್ದು. ಹಾಗೆ ಆಯ್ಕೆ ಮಾಡಿಕೊಂಡ ಸ್ಥಾನಗಳು ಎರಡಕ್ಕಿಂತ ಕಡಿಮೆ ಮತ್ತು ಮೂರಕ್ಕಿಂತ ಹೆಚ್ಚು ಇರಬಾರದು. ಪರೋಕ್ಷ ಚುನಾವಣೆಯ ಸಂದರ್ಭದಲ್ಲಿ ಏಕಸದಸ್ಯ ಆಡಳಿತ ಕ್ಷೇತ್ರ ವನ್ನು ಆಧಾರವಾಗಿಟ್ಟುಕೊಂಡು, ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡು ರಚಿಸತಕ್ಕದ್ದು.

33. 5.9 ನೇರ ಚುನಾವಣೆಯ ಮೂಲಕ ಆಯ್ಕೆಯಾಗುವಲ್ಲಿ ಮಹಿಳೆಯರಿಗೆ ಮತ್ತು ಪರಿಶಿಷ್ಟ ಜಾತಿಗಳಿಗೆ ಮೀಸಲಾತಿ ಇರತಕ್ಕದ್ದು. ಪರಿಶಿಷ್ಟ ಜಾತಿಗಳಿಗೆ ಸ್ಥಾನಗಳನ್ನು ಮೀಸಲಿಡುವ ಸಂದರ್ಭದಲ್ಲಿ ತಾಲೂಕು ಅಭಿವೃದ್ಧಿ ಮಂಡಲಿಯ ಒಟ್ಟು ಸ್ಥಾನಗಳು ಮತ್ತು ಸದರಿ ತಾಲೂಕಿನ ಪರಿಶಿಷ್ಟ ಜಾತಿಗಳ ಜನಸಂಖ್ಯೆಗೆ ಅನುಗುಣವಾಗಿ ಅವುಗಳ ಆಯ್ಕೆಯಾಗುವಂತೆ ನೋಡಿಕೊಳ್ಳತಕ್ಕದ್ದು. ಹಾಗೆ ನಿರ್ಧರಿಸಿದ ಸ್ಥಾನ ಸಂಖ್ಯೆ ಒಂದೇ ಒಂದು ಇದ್ದ ಪಕ್ಷದಲ್ಲಿ ಅಂತಹ ಮೀಸಲಾತಿಯನ್ನು ನೇರ ಚುನಾವಣೆ ರೀತಿಯಲ್ಲಿ ಚುನಾಯಿಸತಕ್ಕದ್ದು. ಅಂತಹ ಸ್ಥಾನಗಳ ಸಂಖ್ಯೆ ಎರಡು ಅಥವಾ ಮೂರು ಇದ್ದಲ್ಲಿ ಮೀಸಲಾತಿಯು ನೇರ ಚುನಾವಣಾ ರೀತಿಯಲ್ಲಿ ಒಂದು ಸ್ಥಾನಕ್ಕೆ ಸೀಮಿತವಾಗ ತಕ್ಕದ್ದು. ಸ್ಥಾನಗಳು ನಾಲ್ಕು ಇದ್ದಲ್ಲಿ ಎರಡು ಸ್ಥಾನಗಳನ್ನು ನೇರ ಆಯ್ಕೆಗೂ, ಇನ್ನೆರಡು ಸ್ಥಾನಗಳನ್ನು ಪರೋಕ್ಷ ಆಯ್ಕೆಗೂ ಹಂಚತಕ್ಕದ್ದು. ಮಹಿಳಾ ಸದಸ್ಯರ ಸ್ಥಾನಗಳ ಸಂಖ್ಯೆಯು ಎರಡಕ್ಕಿಂತ ಹೆಚ್ಚು ಇರಬಾರದು. ಮಹಿಳಾ ಸದಸ್ಯ ಸ್ಥಾನ ಒಂದೇ ಇದ್ದಾಗ, ಅದು ನೇರ ಚುನಾವಣೆ ವರ್ಗಕ್ಕೆ ಸೇರುತ್ತದೆ. ಇಲ್ಲಿಯೂ ಸಹ ಎರಡು ಮಹಿಳಾ ಸ್ಥಾನಗಳು ಇದ್ದಲ್ಲಿ, ಒಂದು ಸ್ಥಾನವನ್ನು ನೇರ ಚುನಾವಣೆಯ ವರ್ಗಕ್ಕೂ ಮತ್ತೊಂದು ಸ್ಥಾನವನ್ನು ಪರೋಕ್ಷ ಚುನಾವಣೆಯ ವರ್ಗಕ್ಕೂ ಸೇರಿಸತಕ್ಕದ್ದು.

34. 5.10 ತಾಲೂಕು ಸಮಿತಿಯ ಅಧ್ಯಕ್ಷನು ತಾಲೂಕು ಅಭಿವೃದ್ಧಿ ಮಂಡಳಿಯ ಓರ್ವ ಸದಸ್ಯನಾಗಿ ಇರಬಹುದು. ಆದರೆ ಆತನಿಗೆ ತಾಲೂಕು ಅಭಿವೃದ್ಧಿ ಮಂಡಲಿಯಲ್ಲಿ ಮತ ಚಲಾಯಿಸುವ ಹಕ್ಕು ಇರುವುದಿಲ್ಲ.

35. 5.11 ತಾಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷನಿಗೆ ಪ್ರತಿ ತಿಂಗಳಿಗೆ ಒಂದು ನೂರ ಐವತ್ತು ರೂಪಾಯಿಗಳ ಗೌರವ ಧನವನ್ನೂ ಮತ್ತು ಒಂದು ನೂರು ರೂಪಾಯಿಗಳ ನಿಗದಿತ ಪ್ರಯಾಣ ಭತ್ಯೆಯನ್ನೂ ಕೊಡಬಹುದು.

36. 6.3 ಜಿಲ್ಲಾ ಪರಿಷತ್ತು ಒಂದು ಮಂಡಲಿ ಆಧಾರಿತ ಸಂಸ್ಥೆ ಯಾಗಿದ್ದು, ಅದು ಗಮನಾರ್ಹ ರೀತಿಯಲ್ಲಿ ನೇರ ಚುನಾವಣೆಯಿಂದ ರೂಪುಗೊಂಡಿರಬೇಕು. ಅದು 35,000 ದಿಂದ 50,000ರದವರೆಗಿನ ಜನಸಂಖ್ಯೆಗೆ ಒಂದರಂತೆ, ಸೂತ್ರದನ್ವಯ ನೇರ ಚುನಾಯಿತ ಪ್ರತಿನಿಧಿತ್ವಕ್ಕೆ ಬದ್ಧ ವಾಗಿರತಕ್ಕದ್ದು.

37. 6.4 ಒಂದು ಜಿಲ್ಲೆಯನ್ನು 35,000ದಿಂದ 50,000ದವರೆಗಿನ ಕ್ರಮದಲ್ಲಿ ಜನಸಂಖ್ಯೆಯು ಆಧಾರದ ಮೇಲೆ ಚುನಾವಣಾ ವಿಭಾಗಗಳಾಗಿ ವಿಂಗಡಿಸತಕ್ಕದ್ದು. ಜನಸಂಖ್ಯೆಯ ಸಾಂದ್ರತೆ ಹೆಚ್ಚು ಇರುವ ಜಿಲ್ಲೆಗಳಲ್ಲಿ ಅಂದಾಜು 50,000 ಜನ ಸಂಖ್ಯೆ ಮತ್ತು ಜನಸಂಖ್ಯೆ ವಿರಳವಾಗಿರುವ ಜಿಲ್ಲೆಗಳಲ್ಲಿ 35,000ದಿಂದ 40,000 ಅಥವಾ ೪೫,೦೦೦ಕ್ಕೆ ಒಂದರಂತೆ ಯಾವುದು ಸೂಕ್ತವೊ ಅದರಂತೆ ಚುನಾವಣಾ ವಿಭಾಗ ಗಳನ್ನು ಮಾಡತಕ್ಕದ್ದು. ಆದರೆ ಯಾವುದೇ ಸಂದರ್ಭದಲ್ಲಿ ಒಂದು ಜಿಲ್ಲೆಯ ನೇರ ಚುನಾಯಿತ ಸದಸ್ಯರ ಸಂಖ್ಯೆಯು ೬ಕ್ಕೆ ಕಡಿಮೆ ಮತ್ತು 32ಕ್ಕೆ ಹೆಚ್ಚು ಇರತಕ್ಕದ್ದಲ್ಲ. ನೇರ ಚುನಾವಣೆಯ ಮೂಲಕ ಆಯ್ಕೆಗೊಂಡ ಸದಸ್ಯರ ಸಂಖ್ಯೆ ಮತ್ತು ಜಿಲ್ಲೆಯ ತಾಲೂಕು ಅಭಿವೃದ್ಧಿ ಮಂಡಲಿಗಳ ಸದಸ್ಯರ ಸಂಖ್ಯೆಯ ಸಮೀಕರಣ ಸಂದರ್ಭದಲ್ಲಿ ಬೆಸಸಂಖ್ಯೆ ಯಲ್ಲಿರಬೇಕು.

38. 6.7 ಸದ್ಯದಲ್ಲಿ ಅಸ್ತಿತ್ವದಲ್ಲಿರುವ ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗಳನ್ನು ಒಂದು ಜಿಲ್ಲೆಯಾಗಿ ಪರಿಗಣಿಸ ಬಹುದು.

39. 6.9 ಲೋಕಸಭಾ ಸದಸ್ಯರು ಮತ್ತು ರಾಜ್ಯ ವಿಧಾನಸಭಾ ಸದಸ್ಯರು ಜಿಲ್ಲಾ ಪರಿಷತ್ತುಗಳ ಹಾಗೂ ತಾಲೂಕು ಅಭಿವೃದ್ಧಿಮಂಡಲಿಗಳ ಸದಸ್ಯರಾಗಿರತಕ್ಕದ್ದು. ಆದರೂ ಆ ಚುನಾಯಿತ ಪ್ರತಿನಿಧಿಗಳು ಈ ಮಂಡಲಿಗಳ ಸಂಪರ್ಕವನ್ನು ಹೊಂದಿದ್ದುಮತ ಚಲಾಯಿಸುವ ಹಕ್ಕು ಅಥವಾ ಕಚೇರಿಯ ಅಧಿಕಾರವನ್ನು ಹೊರತುಪಡಿಸಿ ಈ ಸಂಸ್ಥೆಗಳ ಸದಸ್ಯರಾಗಿ ಇರಬಹುದು.

40. 6.10 ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷನು ಜಿಲ್ಲಾ ಪರಿಷತ್ತಿನ ಸಹ ಸದಸ್ಯನಾಗಿರಬಹುದು.

| | | |
|---|---|---|
| 41. | 6.11 | ಜಿಲ್ಲಾ ಪರಿಷತ್ತುಗಳಲ್ಲಿ ಪುರಸಭೆಗಳ ಪ್ರಾತಿನಿಧ್ಯದ ಅಗತ್ಯತೆ ಇರುವುದಿಲ್ಲ. ಆದರೂ ಪರಸ್ಪರ ಆಸಕ್ತ ವಿಷಯಗಳ ಚರ್ಚೆಗೆ ಸಂಬಂಧಿಸಿದ ಸಭೆಗಳಿಗೆ ಪುರಸಭಾ ಅಧ್ಯಕ್ಷರನ್ನು ಆಹ್ವಾನಿಸುವ ಅಧಿಕಾರವು ಜಿಲ್ಲಾ ಪರಿಷತ್ ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳ ಅಧ್ಯಕ್ಷರುಗಳಿಗೆ ಇರಬಹುದು. |
| 42. | 6.12 | ಜಿಲ್ಲಾ ಪರಿಷತ್ ಅಧ್ಯಕ್ಷರು ತಿಂಗಳಿಗೆ ೫೦೦ ರೂಪಾಯಿಗಳ ಮನೆ ಬಾಡಿಗೆಯ ಗೌರವಧನವನ್ನು ಪಡೆಯಬಹುದು. ಮತ್ತು ಬಾಡಿಗೆ ಮನೆಯಲ್ಲಿ ವಾಸವಾಗಿರದ ಸಂದರ್ಭದಲ್ಲಿ ಅವನ ಅಧಿಕಾರದ ಅವಧಿಯ ತನಕ, ಒಂದು ಸುಸಜ್ಜಿತ ಮನೆಗೆ ಕೊಡುವಷ್ಟು ಬಾಡಿಗೆಯ ಮೊತ್ತವನ್ನು ಸರ್ಕಾರವು ತನ್ನ ಸಾಮಾನ್ಯ ಇಲ್ಲವೇ ವಿಶೇಷ ಆಜ್ಞೆಯ ಮೂಲಕ ನಿರ್ಧರಿಸಬಹುದು. |
| 43. | 6.13 | ಜಿಲ್ಲಾ ಪರಿಷತ್ತಿನ ಉಪಾಧ್ಯಕ್ಷನಿಗೆ ತಿಂಗಳಿಗೆ ೩೦೦ ರೂಪಾಯಿಗಳ ಮನೆ ಬಾಡಿಗೆಯ ಗೌರವಧನವನ್ನು ಕೊಡತಕ್ಕದ್ದು. |
| 44. | 6.14<br>6.15 | ಜಿಲ್ಲೆಯ ಜಿಲ್ಲಾಧಿಕಾರಿಯು ಜಿಲ್ಲಾ ಪರಿಷತ್ತಿನ ಸದಸ್ಯ ಅಥವಾ ಅದರ ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿ ಇರಬೇಕಾಗಿಲ್ಲ. ಅದಕ್ಕೆ ಬದಲು ಆತನ ಸೇವೆಯನ್ನು ಇತರ ಉದ್ದೇಶಗಳಿಗಾಗಿಜಅಂದರೆ ರಾಜ್ಯವಲಯದ ಯೋಜನೆಗಳ ಸಂಘಟಕನನ್ನಾಗಿ ಜಿಲ್ಲಾಮಟ್ಟದಲ್ಲಿ ಬಳಸಿಕೊಳ್ಳಬಹುದು. ಜಿಲ್ಲಾಮಟ್ಟದಲ್ಲಿ ಸರ್ಕಾರದ ಕಣ್ಣು ಕಿವಿಗಳಂತಿರುವ ಜಿಲ್ಲಾಧಿಕಾರಿಯ ಮೂಲಕ ಜಿಲ್ಲಾ ಪಂಚಾಯತ್ ರಾಜ್ಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಸ್ವತಂತ್ರ ವರದಿಗಳನ್ನು ತರಿಸಿಕೊಳ್ಳಬಹುದು. |
| 45. | 7.1 | ಪಂಚಾಯತ್ ರಾಜ್ ಸಂಸ್ಥೆಗಳ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ಆದಷ್ಟುಮಟ್ಟಿಗೆ ಸಂದಿಗ್ಧತೆಗೆ ಎಡೆಗೊಡ ದಂತೆ ಹಾಗೂ ಅನಗತ್ಯ ಕರ್ತವ್ಯ ನಿರ್ವಹಣೆಯಲ್ಲಿ ಚರ್ವಿತ ಚರ್ವಣವಾಗದಂತೆ ಅಥವಾ ಒಬ್ಬರಿಂದೊಬ್ಬರು ಜವಾಬ್ದಾರಿ ಗಳಿಂದ ನುಸುಳಿಕೊಳ್ಳದಂತೆ ಅವುಗಳನ್ನು ರೂಪಿಸತಕ್ಕದ್ದು. |
| 46. | 7.2 | ಸರ್ಕಾರಕ್ಕೆ ಸಂಬಂಧಪಟ್ಟ ಕಾರ್ಯಯೋಜನೆಗಳು ತೃಪ್ತಿಕರ ವಾಗಿಲ್ಲ ಎಂಬ ಬಗ್ಗೆ ವಿಶೇಷ ಕಾರಣಗಳು ಕಂಡುಬಂದ ಸಂದರ್ಭದಲ್ಲಿ, ಅಂತಹ ಕಾರ್ಯಗಳನ್ನು ಈ ಸಂಸ್ಥೆಗಳಿಗೆ ಏಜನ್ಸಿ ಆಧಾರದ ಮೇಲೆ ಕಾರ್ಯಗತಗೊಳಿಸಲು ವಹಿಸಲೂಬಹುದು. |
| 47. | 7.3 | ಪಂಚಾಯತ್ ರಾಜ್ ಸಂಸ್ಥೆಗಳ ಕರ್ತವ್ಯಗಳನ್ನು ನಿರ್ಬಂಧಿತ ಹಾಗೂ ಅನಿರ್ಬಂಧಿತ ಹೊಣೆ ಹೊತ್ತ ಮತ್ತು ವಿವೇಚನೆಗೆ ಬಿಟ್ಟವುಗಳೆಂದು |

ವಿಭಜಿಸುವ ಅಗತ್ಯವಿರುವುದಿಲ್ಲ. ಸಾಮಾನ್ಯವಾಗಿ, ಪಂಚಾಯತಿಗಳು ನೈರ್ಮಲ್ಯೀಕರಣ ಮತ್ತು ಆರೋಗ್ಯ ಸೌಲಭ್ಯಗಳಿಂದ ಕೂಡಿದ ಕಾಮಗಾರಿಗಳು, ಕೃಷಿ, ಪಶುಸಂಗೋಪನೆ, ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟು ಜನರ ಹಾಗೂ ಹಿಂದುಳಿದ ವರ್ಗಗಳ ಕ್ಷೇಮಾಭ್ಯುದಯವನ್ನು ಕುರಿತಂತೆ ಕಾರ್ಯಸಾಧ್ಯವಾದ ಅವಕಾಶಗಳನ್ನು ಪೂರೈಸುವ ಜವಾಬ್ದಾರಿಯನ್ನು ಹೊಂದಿರುತ್ತವೆ. ಮೇಲ್ಕಂಡ ಯೋಜನೆಗಳ ಹೊಣೆಗಳನ್ನು ನಿರ್ವಹಿಸಲಾಗದ ಸಂದರ್ಭಗಳಲ್ಲಿ ಅವುಗಳ ಅನುಷ್ಠಾನದ ಹೊಣೆಯನ್ನು ವಿಜನ್ಸಿ ಆಧಾರದ ಮೇಲೆ ವರ್ಗಾಯಿಸಬಹುದು. ಉಳಿದ ಕರ್ತವ್ಯಗಳನ್ನು ಅಧಿನಿಯಮದ 44, 45 ಮತ್ತು 46ನೆಯ ಸೆಕ್ಷನ್‌ಗಳಲ್ಲಿ ನಮೂದಿಸಿರುವ ಕರ್ತವ್ಯಗಳನ್ನು ನಿರ್ವಹಿಸ ಬಹುದು.

48. 7.4 ಪಂಚಾಯತಿಗಳು ಈ ಕೆಳಕಂಡ ಸಮಿತಿಗಳನ್ನು ರಚಿಸಿಕೊಳ್ಳ ಬಹುದು.

(1) ಕೃಷಿ, ಪಶುಸಂಗೋಪನೆ ಮತ್ತು ಕೈಗಾರಿಕೆಗಳ ನಿರ್ವಹಣಾ ಕಾರ್ಯಗಳಿಗೆ ಸಂಬಂಧಿಸಿದ ಒಂದು ಉತ್ಪಾದನಾ ಸಮಿತಿ.

(2) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡುಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಕಾರ್ಯ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದ ಒಂದು ಸಮಿತಿ.

(ಅ) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟು ಗಳು ಮತ್ತು ಇತರ ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ ಸಾಂಸ್ಕೃತಿಕ ಮತ್ತು ಇತರ ವಿಷಯಗಳು.

(ಆ) ಈ ವರ್ಗದ ಜನರನ್ನು ಸಾಮಾಜಿಕ ಅಸಮಾನತೆ ಮತ್ತು ಇತರ ಎಲ್ಲ ವಿಧವಾದ ಶೋಷಣೆಗಳಿಂದ ರಕ್ಷಣೆ.

(3) ಶಿಕ್ಷಣ, ಸಾರ್ವಜನಿಕ ಆರೋಗ್ಯ, ಲೋಕೋಪ ಯೋಗಿ ಕಾಮಗಾರಿಗಳು ಮತ್ತು ಇತರ ಪಂಚಾಯತಿ ಕರ್ತವ್ಯಗಳ ನಿರ್ವಹಣೆಗೆ ಒಂದು ಸೌಕರ್ಯ ಸಮಿತಿ.

49. 7.5 ಮೇಲ್ಕಂಡ ಪ್ರತಿಯೊಂದು ಸಮಿತಿಯಲ್ಲೂ ಅಧ್ಯಕ್ಷ ಮತ್ತು ಪದನಿಮಿತ್ತ ಅಧ್ಯಕ್ಷನನ್ನು ಒಳಗೊಂಡಂತೆ ೩ ಸದಸ್ಯರಿಗೆ ಕಡಿಮೆಯಿಲ್ಲದ ಮತ್ತು ೫ ಸದಸ್ಯರಿಗೆ ಹೆಚ್ಚಿಲ್ಲದ ಒಂದು ಸೌಕರ್ಯಗಳ ಸಮಿತಿ ಇರಬೇಕು.

| | | |
|---|---|---|
| 50. | 7.6 | ಪ್ರತಿಯೊಂದು ಸಮಿತಿಯೂ ರೈತ ಸಂಘಗಳು, ಮಹಿಳಾ ಮಂಡಲಿಗಳು, ಯುವಕ ಸಂಘಗಳು ಮತ್ತು ಇತರ ಅಂತಹ ಸಂಸ್ಥೆಗಳ ಸದಸ್ಯರನ್ನೂ ಸಹ ಸದಸ್ಯರನ್ನಾಗಿ ಮಾಡಿ ಕೊಳ್ಳಲು ಅಧಿಕಾರ ಹೊಂದಿರುತ್ತದೆ. |
| 51. | 7.7 | ಗ್ರಾಮಪಂಚಾಯತಿಯ ಅಧ್ಯಕ್ಷನ ಕರ್ತವ್ಯಗಳ ಕುರಿತು ಅಧಿನಿಯಮದಲ್ಲಿ ವಿಶೇಷವಾಗಿ ಉಲ್ಲೇಖಿಸಬಹುದು. |
| 52. | 7.8 | ಪಂಚಾಯತಿ ವ್ಯಾಪ್ತಿಯಲ್ಲಿ ವಾಸಿಸುವವರಿಗೆ ಅನುಕೂಲಕರವಾದ ಆರೋಗ್ಯ, ಶಿಕ್ಷಣ, ರಕ್ಷಣೆ, ಸೌಲಭ್ಯ, ಸಂಪರ್ಕ, ಸಾಮಾಜಿಕ ಅಥವಾ ಆರ್ಥಿಕ ಸವಲತ್ತುಗಳ ಬಗ್ಗೆ ಪಂಚಾಯತಿಗಳು ಅವಕಾಶ ಮಾಡಿಕೊಂಡು, ಈ ಕಾರ್ಯಗಳನ್ನು ಅನುಷ್ಠಾನಗೊಳಿಸಬಹುದು. |
| 52ಎ | 7.11 | ಜಿಲ್ಲಾ ಪರಿಷತ್ತುಗಳಿಗೆ ವಹಿಸಿರುವ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ತಾಲೂಕು ಅಭಿವೃದ್ಧಿ ಮಂಡಲಿಗಳು ನಿರ್ವಹಿಸುವ ಹೊಣೆ ಹೊತ್ತು, ಅವುಗಳಿಗೆ ಸಂಬಂಧಿಸಿದಂತೆ ಪ್ರಾಥಮಿಕ ಶಿಕ್ಷಣದ ಮೇಲ್ವಿಚಾರಣೆ, ಪ್ರಾಥಮಿಕ ಶಾಲಾ ಪ್ರವೇಶ, ಸಿಬ್ಬಂದಿಯ ಮೇಲಿನ ಆಡಳಿತ ಹಿಡಿತ, ತಾಲೂಕು ವ್ಯಾಪ್ತಿಯೊಳಗೆ ವರ್ಗಾವಣೆಗಳು ಮುಂತಾದವುಗಳ ನಿರ್ವಹಣೆಯನ್ನು ಈ ತಾಲೂಕು ಅಭಿವೃದ್ಧಿ ಮಂಡಲಿಗಳಿಗೆ ವಹಿಸಿಕೊಡತಕ್ಕದ್ದು. |
| 53. | 7.10 | ತಾಲೂಕು ಅಭಿವೃದ್ಧಿ ಮಂಡಲಿಗಳ ಕರ್ತವ್ಯಗಳನ್ನು ನಿರ್ಬಂಧಿತ ಮತ್ತು ಅನಿರ್ಬಂಧಿತ ಎಂದು ವಿಭಜಿಸುವ ಅಗತ್ಯವಿರುವುದಿಲ್ಲ. |
| 54. | 7.13 | ತಾಲೂಕು ಅಭಿವೃದ್ಧಿ ಮಂಡಲಿಗಳ ಸಾಮಾಜಿಕ ಕ್ಷೇಮಾಭ್ಯುದಯ ಕಾರ್ಯಕ್ರಮಗಳು ಸರಿಯಾಗಿ ಅನುಷ್ಠಾನಗೊಳ್ಳುತ್ತಿವೆಯೆ, ಆ ಸಂಬಂಧ ಒದಗಿಸಿರುವ ಅನುದಾನವು ನಿರ್ದಿಷ್ಟ ಕಾರ್ಯಗಳಿಗೆ ವೆಚ್ಚವಾಗುತ್ತಿದೆಯೆ ಮತ್ತು ಅದಕ್ಕನುಗುಣವಾದ ಕಾಗದಪತ್ರಗಳನ್ನು ಕ್ರಮವಾಗಿ ಇಡಲಾಗಿದೆಯೆ ಮತ್ತು ಈ ಯೋಜನೆಗಳ ಸೌಲಭ್ಯಗಳು ಅರ್ಹ ಜನರಿಗೆ ತಲುಪುತ್ತಿವೆಯೆ ಎಂಬುದನ್ನು ಪರಿಶೀಲಿಸಿ, ಮೇಲ್ವಿಚಾರಣೆ ಮಾಡಲು ಜಿಲ್ಲಾ ಪರಿಷತ್ ಮಟ್ಟದಲ್ಲಿ ಒಂದು ಪ್ರತ್ಯೇಕ ಸಮಿತಿ ಇದ್ದು ಮೇಲ್ಕಂಡ ವಿಷಯಗಳಿಗೆ ವಿಶೇಷ ಗಮನವನ್ನು ಕೊಡತಕ್ಕದ್ದು. ಜಿಲ್ಲಾ ಪರಿಷತ್ತು ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಮಟ್ಟ ದಲ್ಲಿರುವ ಈ ಮೇಲ್ವಿಚಾರಕ ಸಮಿತಿಯ ಕಾರ್ಯದರ್ಶಿ ಗಳಾಗಿ ಅನುಕ್ರಮವಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಮತ್ತು ತಾಲೂಕು ಸಮಾಜ ಕಲ್ಯಾಣ ಮೇಲ್ವಿಚಾರಕರು ಇರತಕ್ಕದ್ದು. |

55. 7.14 ತಾಲೂಕು ಅಭಿವೃದ್ಧಿ ಮಂಡಲಿಗಳಿಗೆ ಬಿಡುಗಡೆ ಮಾಡಿದ ನಿಧಿಯನ್ನು ಅದು ಬಿಡುಗಡೆಯಾದ ಎರಡು ತಿಂಗಳೊಳಗೆ ಸಂಬಂಧಪಟ್ಟ ಕಾರ್ಯಗಳಿಗೆ ವಿತರಣೆ ಮಾಡಬೇಕು. ತಪ್ಪಿದಲ್ಲಿ ತಾಲೂಕು ಅಭಿವೃದ್ಧಿ ಮಂಡಲಿಗಳ ಕಾರ್ಯ ನಿರ್ವಾಹಕ ಅಧಿಕಾರಿಗಳು ಈ ನಿಧಿಯು ಕೈಬಿಟ್ಟು ಹೋಗ ದಂತೆ ಸೂಕ್ತ ವಿತರಣೆ ಮಾಡಲು ಅನುಮತಿ ನೀಡತಕ್ಕದ್ದು.

56 7.15 ತಾಲೂಕು ಅಭಿವೃದ್ಧಿ ಮಂಡಲಿಗಳು ಸಮುದಾಯ ಅಭಿವೃದ್ಧಿ ಯೋಜನೆಗಳು ಅಂದರೆ ಒಂದು ಅಥವಾ ಹೆಚ್ಚಿನ ಗ್ರಾಮಗಳಿಗೆ ಅನುಕೂಲವಾಗುವಂತೆ ಕೂಡುರಸ್ತೆಗಳು, ಕುಡಿಯುವ ನೀರು ಮೊದಲಾದ ಕೆಲಸ ಕಾರ್ಯಗಳನ್ನು ಕೈಗೊಳ್ಳತಕ್ಕದ್ದು. ಜೊತೆಗೆ ಒಟ್ಟು ತಾಲೂಕು ಹಿತದೃಷ್ಟಿಯ ಎಲ್ಲ ಸರ್ಕಾರಿ ಯೋಜನೆಗಳನ್ನೂ ಕಾರ್ಯರೂಪಕ್ಕೆ ತರುವ ಹೊಣೆಗಾರಿಕೆಯು ತಾಲೂಕು ಅಭಿವೃದ್ಧಿ ಮಂಡಲಿಗಳ ಮೇಲಿದೆ. ಕೃಷಿ, ಶಿಕ್ಷಣ, ಸಮಾಜ ಕಲ್ಯಾಣ, ಆರೋಗ್ಯ ಮತ್ತು ಗ್ರಾಮ ನೈರ್ಮಲ್ಯ, ಗ್ರಾಮ ಕೈಗಾರಿಕೆಗಳು, ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳು, ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ, ಗ್ರಾಮೀಣ ನೀರು ಪೂರೈಕೆ, ಸಣ್ಣ ನೀರಾವರಿ, ಮೀನುಗಾರಿಕೆ ಇತ್ಯಾದಿ ಕೆಲಸಗಳು ಈ ಮಂಡಲಿಗಳ ಮುಖ್ಯ ಕಾರ್ಯವ್ಯಾಪ್ತಿಯಲ್ಲಿ ಸೇರುತ್ತವೆ. ಒಟ್ಟಿನಲ್ಲಿ, ತಾಲೂಕಿನ ಸರ್ವತೋಮುಖ ಆರ್ಥಿಕಾಭಿವೃದ್ಧಿಯನ್ನು ಸಾಧಿಸುವುದು ಇವುಗಳ ಜವಾಬ್ದಾರಿಯಾಗಿದೆ.

57. 7.18 ತಾಲೂಕು ಅಭಿವೃದ್ಧಿ ಮಂಡಲಿಯು ಚುನಾವಣೆಯ ಮೂಲಕ ಈ ಕೆಳಕಂಡ ಸಮಿತಿಗಳನ್ನು ರಚಿಸಬಹುದು:-

(1) ಸ್ಥಾಯಿ ಸಮಿತಿಯ ಕಾರ್ಯವ್ಯಾಪ್ತಿಯು:

(ಅ) ಆಯವ್ಯಯ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದಿತ ನೀತಿಗಳನ್ನು ಕೂಲಂಕಶವಾಗಿ ಪರಿಶೀಲಿಸಿ, ಮಂಡಲಿಗೆ ಒಪ್ಪಿಸತಕ್ಕದ್ದು.

(ಆ) ತಾಲೂಕಿನಲ್ಲಿ ಸಂಭವಿಸಬಹುದಾದ ಅನಿರೀಕ್ಷಿತ ಅವಘಡಗಳ ಸಂಬಂಧದಲ್ಲಿ ಸಂಪರ್ಕ, ಗ್ರಾಮೀಣ ವಸತಿ, ತುರ್ತು ಪರಿಹಾರಗಳನ್ನು ಕೈಗೆತ್ತಿಕೊಳ್ಳಬೇಕು.

(ಇ) ಯೋಜನೆಗಳು ಮತ್ತು ಕಾರ್ಯಕ್ರಮಗಳಿಗೆ ಆರ್ಥಿಕ ಮತ್ತು ಆಡಳಿತಾತ್ಮಕ ಮಂಜೂರಾತಿಯನ್ನು ನೀಡತಕ್ಕದ್ದು.

(ಈ) ಸಮಿತಿಯ ದೃಷ್ಟಿಯಲ್ಲಿ ತಾಲೂಕಿನ ಸಮಗ್ರ ಅಭಿವೃದ್ಧಿಯ ಸಲುವಾಗಿ ಒಂದು ಕೆಲಸವನ್ನು ಕೈಗೊಳ್ಳಬೇಕು ಅಥವಾ ನಿಲ್ಲಿಸಬೇಕು ಅಥವಾ ಅದಕ್ಕೆ ನೀಡಿರುವ ಹಣವನ್ನು ಹೆಚ್ಚಿಸಬೇಕು ಅಥವಾ ಮೊಟಕುಗೊಳಿಸಬೇಕು ಎಂಬ ನಿರ್ಧಾರವನ್ನು ತೆಗೆದುಕೊಳ್ಳುವುದು. ಆದರೆ ಸ್ಥಾಯಿ ಸಮಿತಿಯ ಸಲಹೆಗಳು ಮಂಡಲಿಯ ಆಜ್ಞೆಗೆ ಯಾವುದೇ ರೀತಿಯಲ್ಲಿ ವ್ಯತಿರಿಕ್ತವಾಗಿ ಇರಬಾರದು.

(2) ಶಿಕ್ಷಣ ಮತ್ತು ಆರೋಗ್ಯ ಸಮಿತಿ :

(ಅ) ಮಂಡಲಿಯು ವಹಿಸಬಹುದಾದ ಶಿಕ್ಷಣ ಮತ್ತು ಅದಕ್ಕೆ ಸಂಬಂಧಪಟ್ಟ ಶೈಕ್ಷಣಿಕ ಕರ್ತವ್ಯಗಳು ಮತ್ತು ಕಾರ್ಯಕ್ರಮಗಳು.

(ಆ) ಸಾರ್ವಜನಿಕ ಆರೋಗ್ಯ, ಆಸ್ಪತ್ರೆಗಳು, ಆರೋಗ್ಯ ಕೇಂದ್ರಗಳು, ನೈರ್ಮಲ್ಯ, ನೀರು ಪೂರೈಕೆ, ರೋಗ ನಿರೋಧಕ ಮತ್ತು ಕುಟುಂಬ ಕಲ್ಯಾಣ ವಿಷಯಗಳು.

(3) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಕ್ಷೇಮಾಭ್ಯುದಯಕ್ಕೆ ಸಂಬಂಧಪಟ್ಟ ಕರ್ತವ್ಯಗಳ ನಿರ್ವಹಣೆ.

(ಅ) ಈ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಇತರ ಅಂತಹ ಕೆಲಸಗಳು.

(ಆ) ಈ ವರ್ಗಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವುದು ಮತ್ತು ಶೋಷಣೆಗೆ ಒಳಗಾಗುವುದನ್ನು ತಡೆಯುವುದು.

(ಇ) ಅಸ್ಪೃಶ್ಯತೆಯ ನಿವಾರಣೆ.

(4) ಈ ಕೆಳಕಂಡ ಕೆಲಸಗಳನ್ನೊಳಗೊಂಡ ಒಂದು ಉತ್ಪಾದನಾ ಸಮಿತಿ:

(ಅ) ಕೃಷಿ
(ಆ) ಪಶುಸಂಗೋಪನೆ
(ಇ) ಸಹಕಾರ
(ಈ) ಗ್ರಾಮೀಣ ಕೈಗಾರಿಕೆಗಳು, ಮತ್ತು
(ಉ) ಮತ್ತಿತರ ಸೌಲಭ್ಯಗಳನ್ನೊಳಗೊಂಡ ಕಾರ್ಯಕ್ರಮಗಳು.

58. 7.20 ಶಿಕ್ಷಣ ಮತ್ತು ಆರೋಗ್ಯ ಸಮಿತಿಗಳನ್ನು ಹೊರತುಪಡಿಸಿ ಉಳಿದ ಎಲ್ಲ ಸಮಿತಿಗಳಿಗೂ ತಾಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷನು ಪದನಿಮಿತ್ತ ಸದಸ್ಯ ಹಾಗೂ ಸಮಿತಿಗಳಿಗೆ ಅಧ್ಯಕ್ಷನಾಗಿಯೂ, ಆ ಎರಡು ಸಮಿತಿಗಳಿಗೆ ತಾಲೂಕು ಅಭಿವೃದ್ಧಿ ಮಂಡಲಿಯ ಉಪಾಧ್ಯಕ್ಷನು ಸದಸ್ಯ ಹಾಗೂ ಅಧ್ಯಕ್ಷನಾಗಿಯೂ ಇರತಕ್ಕದ್ದು.

59. 7.22 ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಜಿಲ್ಲಾ ಪರಿಷತ್ತು ವಹಿಸುವ ಎಲ್ಲ ಕಾರ್ಯಗಳಿಗೂ ಶಿಕ್ಷಣ ಸಮಿತಿಯು ಹಾಜರಾಗಬಹುದು.

60. 7.23 ಈ ಎಲ್ಲ ಸಮಿತಿಗಳು ಪ್ರತಿ ಎರಡೂವರೆ ವರ್ಷಕ್ಕೊಮ್ಮೆ ಪುನರ್ ರಚಿತಗೊಳ್ಳಬಹುದು.

61. 7.24 ತಾಲೂಕು ಅಭಿವೃದ್ಧಿ ಮಂಡಲಿಯು ಆರೋಗ್ಯ, ಶಿಕ್ಷಣ, ಅಥವಾ ಧರ್ಮಾರ್ಥ ಪರಿಹಾರಗಳಿಗೆ ಸಂಬಂಧಿಸಿದ ವೆಚ್ಚವನ್ನು ತನ್ನ ಹಣಕಾಸು ವ್ಯಾಪ್ತಿಯಲ್ಲಿ ವೆಚ್ಚ ಮಾಡ ಬಹುದು. ಆದರೆ ಈ ವೆಚ್ಚಕ್ಕೆ ಜಿಲ್ಲಾ ಪರಿಷತ್ತಿನ ಪೂರ್ವಭಾವಿ ಮಂಜೂರಾತಿಯನ್ನು ಪಡೆದುಕೊಂಡಿರಬೇಕು.

62. 7.25 ತಾಲೂಕಿನ ಒಟ್ಟು ಜನತೆಯ ಅಥವಾ ಅದರ ಯಾವುದೇ ಒಂದು ಭಾಗದ ಜನತೆಯ ಸೌಕರ್ಯಕ್ಕೆ ಅಗತ್ಯವಾದ ಆರೋಗ್ಯ, ರಕ್ಷಣೆ, ಶಿಕ್ಷಣ, ಸಾಮಾಜಿಕ, ಆರ್ಥಿಕ, ಅಥವಾ ಸಾಂಸ್ಕೃತಿಕ ಸೌಲಭ್ಯಗಳಿಗೆ ಸಂಬಂಧಿಸಿದ ಪ್ರಮುಖ ಯೋಜನೆಗಳನ್ನು ಅಥವಾ ಕಾರ್ಯಕ್ರಮಗಳನ್ನು ಕೈಗೊಳ್ಳತಕ್ಕದ್ದು.

63. 7.27 ತಾಲೂಕು ಅಭಿವೃದ್ಧಿ ಮಂಡಲಿ ಅಥವಾ ಇತರ ಸಮಿತಿಗಳು ಕೈಗೊಳ್ಳುವ ತೀರ್ಮಾನಗಳು ವ್ಯವಸ್ಥಿತ ಕಾರ್ಯರೂಪಕ್ಕೆ ಬರುತ್ತಿವೆಯೆ ಎಂಬುದರ ಮೇಲ್ವಿಚಾರಣೆಯ ಹೊಣೆಯು ತಾಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷನ ಮೇಲಿರು ತ್ತದೆ. ಅಧ್ಯಕ್ಷನು ಯಾವುದೇ ಮಾಹಿತಿಯನ್ನು, ಆದಾಯ ವಸ್ತು ಹಾಗೂ ಸ್ಥಿರಾಸ್ತಿಯ ಬಗೆಗಿನ ಟಿಪ್ಪಣಿಯನ್ನು ಕೇಳುವ ಹಕ್ಕನ್ನು ಹೊಂದಿರುತ್ತಾನೆ. ತಾಲೂಕು ಅಭಿವೃದ್ಧಿಯ ಎಲ್ಲ ಕಾಗದ ಪತ್ರಗಳೂ ಅವನ ಗಮನಕ್ಕೆ ಬರತಕ್ಕದ್ದು.

64. 7.30 ತಾಲೂಕಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಯ ಕಾರ್ಯ ಸಾಮರ್ಥ್ಯದ ಬಗ್ಗೆ ತಾಲೂಕು ಅಭಿವೃದ್ಧಿ ಮಂಡಲಿಯ ಅಧ್ಯಕ್ಷನ ಅಭಿಪ್ರಾಯವನ್ನು ಪಡೆದು ಜಿಲ್ಲಾ ಪರಿಷತ್ತಿನ ಕಾರ್ಯ ನಿರ್ವಹಣಾಧಿಕಾರಿಯು ಕ್ಷೇತ್ರಾಭಿವೃದ್ಧಿ ಅಧಿಕಾರಿಯ ರಹಸ್ಯ ವರದಿಯನ್ನು ಬರೆಯಬಹುದು.

65. 7.31 ಸದ್ಯದಲ್ಲಿರುವ ಕ್ಷೇತ್ರಾಭಿವೃದ್ಧಿ ಅಧಿಕಾರಿ ಎನ್ನುವ ಹುದ್ದೆಯನ್ನು ತಾಲೂಕು ಅಭಿವೃದ್ಧಿ ಅಧಿಕಾರಿ ಎಂದು ಬದಲಾಯಿಸಬಹುದು.

66. 7.32 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ವಹಿಸಿರುವ ಅಧಿಕಾರ ವ್ಯಾಪ್ತಿಯೊಳಗೆ ತಾಲೂಕು ಅಭಿವೃದ್ಧಿ ಅಧಿಕಾರಿಯು ತಾಲೂಕಿನಲ್ಲಿ ತನ್ನ ಕೈ ಕೆಳಗೆ ಕೆಲಸ ಮಾಡುವ ಸಿಬ್ಬಂದಿಯ ಕೆಲಸ ಕಾರ್ಯಗಳ ಮೇಲ್ವಿಚಾರಣೆ ಮಾಡಬೇಕು. ಮತ್ತು ನಿಯಂತ್ರಣವನ್ನು ಇಟ್ಟುಕೊಳ್ಳ ಬೇಕು. ಜೊತೆಗೆ ತಾಲೂಕು ಅಭಿವೃದ್ಧಿ ಮಂಡಲಿಗೆ ಸಂಬಂಧಿಸಿದ ಇತರ ಆಡಳಿತಾತ್ಮಕ ವಿಷಯಗಳ ಬಗ್ಗೆಯೂ ಮೇಲ್ವಿಚಾರಣೆಯ ಹಕ್ಕನ್ನು ಈ ಅಧಿಕಾರಿಯು ಹೊಂದಿರ ತಕ್ಕದ್ದು.

67. 7.33 ತಾಲೂಕು ಅಭಿವೃದ್ಧಿ ಮಂಡಲಿಯ ಸಾಮರ್ಥ್ಯಕ್ಕೆ ಮೀರಿದ ಅಥವಾ ಒಂದಕ್ಕಿಂತ ಹೆಚ್ಚು ತಾಲೂಕಿನ ವ್ಯಾಪ್ತಿಯಿದ್ದ ಸಂದರ್ಭದಲ್ಲಿ ಅಂತಹ ಕಾರ್ಯಯೋಜನೆಗಳ ನಿರ್ವಹಣೆ ಯನ್ನು ಜಿಲ್ಲಾ ಪರಿಷತ್ತಿಗೇ ವಹಿಸಿಕೊಡತಕ್ಕದ್ದು.

68. 7.34 ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಆಡಳಿತ ಮತ್ತು ನಿರ್ವಹಣೆಯ ಜವಾಬ್ದಾರಿಯು ಜಿಲ್ಲಾ ಪರಿಷತ್ತಿಗೇ ಇರತಕ್ಕದ್ದು.

69. 7.36 ಹಾಗೆಯೇ, ಪ್ರೌಢಶಿಕ್ಷಣಕ್ಕೆ ಸಂಬಂಧಿಸಿದ ಆಡಳಿತ ಮತ್ತು ನಿರ್ವಹಣೆಯೂ ಸಹ ಜಿಲ್ಲಾ ಪರಿಷತ್ತಿನಲ್ಲೇ ಇರತಕ್ಕದ್ದು.

70. 7.37 ಜಿಲ್ಲಾ ಪರಿಷತ್ತಿಗೆ ವರ್ಗಾವಣೆ ಮಾಡಬಹುದಾದಂತಹ ಉದ್ದೇಶಿತ ಕಾರ್ಯಚಟುವಟಿಕೆಗಳ ಸಂಬಂಧದಲ್ಲಿ ಅಗತ್ಯ ಅಧಿಕಾರ, ಸಂಪನ್ಮೂಲ, ಹಣಕಾಸು ಹಾಗೂ ಆಡಳಿತ ಸಿಬ್ಬಂದಿಗೆ ಸಂಬಂಧಪಟ್ಟ ಕಾರ್ಯಕ್ರಮದೊಂದಿಗೇ ವರ್ಗ ವಾಗತಕ್ಕದ್ದು.

71. 7.38 ಜಿಲ್ಲೆಗೆ ಸಂಬಂಧಿಸಿದ ಅಭಿವೃದ್ಧಿ ಯೋಜನೆಗಳನ್ನು ಜಿಲ್ಲಾ ಪರಿಷತ್ತು ಸಿದ್ಧಪಡಿಸಿ, ಕೆಳಮಟ್ಟದಲ್ಲಿ ಅವು ಅನುಷ್ಠಾನದ ಸಂಬಂಧದಲ್ಲಿ ಸಮನ್ವಯ ಮತ್ತು ಸಂಯೋಜನೆಗಳ ರೂಪಿಸುವ ಹೊಣೆಯನ್ನು ಹೊಂದಿರುತ್ತವೆ. ಜಿಲ್ಲಾ ಪರಿಷತ್ತಿನ ಪ್ರಮುಖ ಕರ್ತವ್ಯಗಳು ಈ ಕೆಳಕಂಡಂತಿರುತ್ತವೆ:

(1) ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಅಗತ್ಯವಾದ ಎಲ್ಲ ಆಧುನಿಕ ಉಪಕರಣಗಳನ್ನು ಅಳವಡಿಸಿ ಕೊಂಡು ಕೃಷಿಯನ್ನು ಒಂದು ಪ್ರಮುಖ ಉತ್ಪಾದನಾ ಕ್ಷೇತ್ರವನ್ನಾಗಿ ಮಾಡಲು.

(2) ಬೀಜ ಉತ್ಪಾದನಾ ಕೇಂದ್ರಗಳ ನಿರ್ವಹಣೆ ಮತ್ತು ಅನುಭವಗಳ ಸಂಗ್ರಹಣೆ.

(3) ಜಿಲ್ಲಾ ಪಶುವೈದ್ಯ ಶಾಲೆಗಳನ್ನೊಳಗೊಂಡು ತಾಲೂಕು ಪಶುವೈದ್ಯ ಶಾಲೆಗಳ ಸ್ಥಾಪನೆ ಮತ್ತು ನಿರ್ವಹಣೆ.

(4) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಸಂವರ್ಧನೆ.

(5) ಜಿಲ್ಲೆಯ ಮುಖ್ಯರಸ್ತೆಗಳು ಮತ್ತು ಇತರ ರಸ್ತೆಗಳು ಮತ್ತು ಅವುಗಳ ಮೇಲಿನ ಸೇತುವೆಗಳ ನಿರ್ಮಾಣ, ರಿಪೇರಿ ಹಾಗೂ ನಿರ್ವಹಣೆ.

(6) ಸಿವಿಲ್ ಆಸ್ಪತ್ರೆಗಳನ್ನೊಳಗೊಂಡಂತೆ ತಾಲೂಕು ಕೇಂದ್ರಗಳ ಆಸ್ಪತ್ರೆಗಳು ಮತ್ತು ಇತರ ಔಷಧದ ಅಂಗಡಿಗಳಿಗೆ ಹಾಗೂ ಸಿವಿಲ್ ಆಸ್ಪತ್ರೆಗಳಿಗೆ ಸಮನಾದ ಆಸ್ಪತ್ರೆಗಳ ನಿರ್ವಹಣೆ.

(7) ಗ್ರಾಮಗಳ ನಿವೇಶನಗಳ ವಿಸ್ತರಣೆ ಮತ್ತು ಅಭಿವೃದ್ಧಿ.

(8) ೨೫೦ ಎಕರೆಗಳಿಗೆ ಕಡಿಮೆ ಇಲ್ಲದ ಅಚ್ಚುಕಟ್ಟನ್ನು ಹೊಂದಿರುವ ಸಣ್ಣ ನೀರಾವರಿ ಕೆರೆಗಳ ನಿರ್ಮಾಣ, ಪುನರ್‌ರಚನೆ ಮತ್ತು ನಿರ್ವಹಣೆ.

(9) ಗ್ರಾಮೀಣ ಮತ್ತು ಗುಡಿ ಕೈಗಾರಿಕೆಗಳ ಅಭಿವೃದ್ಧಿ.

(10) ಜಿಲ್ಲೆಗಿಂತ ಕಡಿಮೆ ವ್ಯಾಪ್ತಿಯುಳ್ಳ ಹಾಗೂ ಕಾರ್ಯ ನಿರ್ವಾಹಕ ಬಂಡವಾಳವು ೫೫ ಲಕ್ಷಕ್ಕಿಂತ ಹೆಚ್ಚಿಲ್ಲದ ಬಂಡವಾಳವನ್ನು ಹೊಂದಿರುವ ಸಹಕಾರಿ ಸಂಘಗಳ ನೋಂದಣಿ.

(11) ಎಲ್ಲಾ ವಿಧವಾದ ಸಹಕಾರಿ ಸಂಘಗಳಿಗೆ ಪ್ರೋತ್ಸಾಹ ಮತ್ತು ವಿಸ್ತರಣೆ.

(12) ಪ್ರಾಥಮಿಕ ಶಾಲೆಗಳ ಸ್ಥಾಪನೆ ಮತ್ತು ಮೇಲ್ವಿಚಾರಣೆ.

(13) ಪ್ರೌಢಶಾಲೆಗಳ ಸ್ಥಾಪನೆ, ನಿರ್ವಹಣೆ ಮತ್ತು ಮೇಲ್ವಿಚಾರಣೆ.

(14) ಜಿಲ್ಲಾ ಪರಿಷತ್ ವ್ಯಾಪ್ತಿಯಲ್ಲಿರುವ ಸಣ್ಣ ನೀರಾವರಿ ಕೆರೆಗಳಲ್ಲಿ ಮೀನುಗಾರಿಕೆಯ ಅಭಿವೃದ್ಧಿ.

72. 7.40 ಜಿಲ್ಲಾ ಪರಿಷತ್ತು ಕೆಳಕಂಡ ಸಮಿತಿಗಳನ್ನು ಹೊಂದಿರ ಬಹುದು:-

(1) ಜಿಲ್ಲಾ ಪರಿಷತ್ತಿಗೆ ಸಂಬಂಧಿಸಿದಂತೆ ಆಯವ್ಯಯ ಸಿದ್ಧತೆ, ಆದಾಯ ಹೆಚ್ಚಿಸಲು ಪ್ರಸ್ತಾವಗಳ ಪರಿಷ್ಕರಣೆ, ಖರ್ಚು ವೆಚ್ಚಗಳ ತಃಖ್ತೆಯ ಪರಿಶೀಲನೆಜಾಇಪ್ಪಗಳನ್ನು ಸಿದ್ಧಪಡಿಸುವಾಗ ಜಿಲ್ಲಾ ಪರಿಷತ್ತಿನ ಹಣಕಾಸು ಸಾಮರ್ಥ್ಯವನ್ನು ದೃಷ್ಟಿ ಯಲ್ಲಿಟ್ಟುಕೊಂಡು ವೆಚ್ಚವನ್ನು ಸರಿದೂಗಿಸುವ ಮೇಲ್ವಿಚಾರಣೆಯ ಕಡೆಗೆ ಗಮನಹರಿಸಬೇಕು.

(2) ಕೃಷಿ ಉತ್ಪಾದನೆ, ಪಶುಸಂಗೋಪನೆ, ನೀರಾವರಿ, ಭೂಸಾರ ಸಂರಕ್ಷಣೆ, ಕಾಂಟೂರ್ ಬಾಂದುಗಳು, ಗ್ರಾಮೀಣ ಮತ್ತು ಗುಡಿಕೈಗಾರಿಕೆಗಳು, ಸಹಕಾರ ಮತ್ತು ಸಣ್ಣ ಉಳಿತಾಯ ಯೋಜನೆ ಮುಂತಾದವು ಗಳ ನಿರ್ವಹಣೆಗೆ ಒಂದು ಉತ್ಪಾದನಾ ಸಮಿತಿ.

(3) ಶಿಕ್ಷಣ ಮತ್ತಿತರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಪರಿಷತ್ತು ವಹಿಸುವ ಕಾರ್ಯಕ್ರಮಗಳ ಅನುಷ್ಠಾನ ಮತ್ತು ನಿರ್ವಹಣೆಗೆ ಒಂದು ಶೈಕ್ಷಣಿಕ ಸಮಿತಿ.

(4) ಸಂಪರ್ಕ, ಕಟ್ಟಡಗಳು, ಗ್ರಾಮೀಣ ವಸತಿ, ಸಣ್ಣ ನೀರಾವರಿ, ಪ್ರಕೃತಿ ವಿಕೋಪದ ವಿರುದ್ಧ ಪರಿಹಾರ, ಆರೋಗ್ಯ ಸೇವೆ, ಆಸ್ಪತ್ರೆಗಳು, ನೀರು ಸರಬರಾಜು ಸೌಕರ್ಯ, ಕುಟುಂಬ ಕಲ್ಯಾಣ ಇತ್ಯಾದಿ ಕಾರ್ಯ ಕ್ರಮಗಳ ನಿರ್ವಹಣೆ ಮತ್ತು ನಿರ್ದೇಶನಕ್ಕಾಗಿ ಲೋಕೋಪಯೋಗಿ ಮತ್ತು ಆರೋಗ್ಯ ಸೇವೆಗಳ ಸಮಿತಿ.

(5) ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ ಹಿತರಕ್ಷಣೆ ಗಾಗಿ ಒಂದು ಕ್ಷೇಮಾಭಿವೃದ್ಧಿ ಸಮಿತಿ.

ಈ ಸಮಿತಿಯು :

(ಅ) ಈ ವರ್ಗಗಳ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಮತ್ತಿತರ ವಿಷಯ ಗಳ ಬಗ್ಗೆ ಗಮನ ಹರಿಸುವುದು.

(ಆ) ಈ ವರ್ಗಗಳನ್ನು ಸಾಮಾಜಿಕ ಅನ್ಯಾಯಗಳಿಂದ ರಕ್ಷಿಸುವುದು ಮತ್ತು ಇತರ ಎಲ್ಲ ಶೋಷಣೆಗಳಿಗೆ ಒಳಗಾಗದಂತೆ ನೋಡಿಕೊಳ್ಳುವುದು.

(ಇ) ಈ ವರ್ಗಗಳ ಜನರಿಗೆ ಎಲ್ಲ ಬಗೆಯ ಸೌಲಭ್ಯಗಳನ್ನು ಒದಗಿಸುವುದು.

(ಈ) ಅಸ್ಪೃಶ್ಯತೆಯ ನಿವಾರಣೆ.

73. 7.42 ಶೈಕ್ಷಣಿಕ ಸಮಿತಿಯನ್ನು ಹೊರತುಪಡಿಸಿ, ಮೇಲ್ಕಂಡ ಎಲ್ಲ ಸಮಿತಿಗಳಿಗೂ ಜಿಲ್ಲಾ ಪರಿಷತ್ತಿನ ಅಧ್ಯಕ್ಷನು ಪದನಿಮಿತ್ತ ಸದಸ್ಯ ಹಾಗೂ ಅಧ್ಯಕ್ಷನಾಗಿಯೂ, ಉಪಾಧ್ಯಕ್ಷನು ಶೈಕ್ಷಣಿಕ ಸಮಿತಿಯ ಸದಸ್ಯ ಹಾಗೂ ಅಧ್ಯಕ್ಷನಾಗಿಯೂ ಇರತಕ್ಕದ್ದು.

74. 7.43 ರಾಜ್ಯ ಸರ್ಕಾರ ಅಥವಾ ಸಾರ್ವಜನಿಕ ಇಲಾಖೆಯ ನಿರ್ದೇಶಕನ ವ್ಯಾಪ್ತಿಗೆ ಹೊರತಾದ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಈ ಸಮಿತಿಯಲ್ಲಿ ಒಳಗೊಳ್ಳುವುವು.

75. 7.44 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಈ ಎಲ್ಲ ಸಮಿತಿಗಳ ಕಾರ್ಯದರ್ಶಿಯಾಗಿರುತ್ತಾನೆ. ಸದ್ಯದಲ್ಲಿ ಅಸ್ತಿತ್ವದಲ್ಲಿರುವ ಜಿಲ್ಲಾಭಿವೃದ್ಧಿ ಸಹಾಯಕ ಹುದ್ದೆಯನ್ನು ಜಿಲ್ಲಾಪರಿಷತ್ತಿನ ಕಾರ್ಯ ನಿರ್ವಹಣಾಧಿಕಾರಿ ಮತ್ತು ಸಹಾಯಕ ಕಾರ್ಯದರ್ಶಿ ಎಂದು ಕರೆಯಬಹುದು. ಜಿಲ್ಲೆಯ ವಿವಿಧ ಇಲಾಖೆಗಳ ಜಿಲ್ಲಾಧಿಕಾರಿಗಳು ಅವರ ಇಲಾಖೆಗಳ ಜಂಟಿ ಕಾರ್ಯದರ್ಶಿಗಳಾಗಿ ಈ ಸಮಿತಿಗಳಲ್ಲಿ ಕಾರ್ಯ ನಿರ್ವಹಿಸಬಹುದು.

76. 4.45 ಜಿಲ್ಲಾ ಪರಿಷತ್ತಿನ ವಿವಿಧ ಸಮಿತಿಗಳ ಠರಾವುಗಳು ಮತ್ತು ತೀರ್ಮಾನಗಳ ಅನುಷ್ಠಾನ ಕಾರ್ಯದಲ್ಲಿ ಮುಖ್ಯ ನಿರ್ವಹಣಾಧಿಕಾರಿಯ ಮೇಲೆ ಆಡಳಿತ ಮೇಲ್ವಿಚಾರಣೆಯ ಹಕ್ಕನ್ನು ಜಿಲ್ಲಾ ಪರಿಷತ್ತಿನ ಅಧ್ಯಕ್ಷನು ಹೊಂದಿರುತ್ತಾನೆ. ಜೊತೆಗೆ ಜಿಲ್ಲಾ ಪರಿಷತ್ತು ವಹಿಸಿರುವ ಇತರ ಎಲ್ಲ ಹಕ್ಕುಗಳನ್ನೂ ಚಲಾಯಿಸುವ ಅಧಿಕಾರ ಹೊಂದಿರುತ್ತಾನೆ.

77. 7.48 ಜಿಲ್ಲಾ ಪರಿಷತ್ತು ಈ ಕೆಳಕಂಡ ಆಡಳಿತಾತ್ಮಕ ಅಧಿಕಾರಗಳನ್ನು ಚಲಾಯಿಸಬಹುದು:-

(1) ಹಣಕಾಸಿನ ಅವಕಾಶವಿರುವ ಸಂದರ್ಭದಲ್ಲಿ ಶೈಕ್ಷಣಿಕ ಅಥವಾ ಆರೋಗ್ಯ ಪರಿಹಾರ ಕಾರ್ಯಗಳಿಗಾಗಿ ತನ್ನ ಮಿತಿಗೆ ಹೊರತಾದ ಮೂಲದಿಂದ ಹಣವನ್ನು ವೆಚ್ಚ ಮಾಡಬಹುದು.

(2) ಸಂಬಂಧಪಟ್ಟ ಪ್ರದೇಶದ ಜನತೆಯ ಆರೋಗ್ಯ, ರಕ್ಷಣೆ, ಶಿಕ್ಷಣ, ಸೌಲಭ್ಯ, ಸಾಮಾಜಿಕ, ಆರ್ಥಿಕ ಅಥವಾ ಸಾಂಸ್ಕೃತಿಕ ಒಳಿತಿಗಾಗಿ ಯಾವುದೇ ಕಾರ್ಯ ಕ್ರಮವನ್ನು ಕೈಗೊಳ್ಳಲು ಅವಕಾಶ ಕಲ್ಪಿಸುವುದು.

5749 - 16

(3) ಗ್ರಾಮ ಪಂಚಾಯತಿಗಳು, ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳಿಗೆ ಸಂಬಂಧಿಸಿದಂತೆ, ಸ್ಥಳೀಯ ಸರ್ಕಾರಗಳ ಸಹಾಯದೊಂದಿಗೆ ರಾಷ್ಟ್ರ, ರಾಜ್ಯ ಅಥವಾ ಅಂತರರಾಜ್ಯ ಮಟ್ಟದ ವಸ್ತುಪ್ರದರ್ಶನಗಳು, ಸೆಮಿನಾರುಗಳು ಮತ್ತು ಸಮ್ಮೇಳನಗಳನ್ನು ಏರ್ಪಡಿಸುವ ಸಂಸ್ಥೆಗಳಿಗೆ ಕೊಡುಗೆ ನೀಡುವುದು.

(4) ಮೇಲ್ಕಂಡ ಸಂಸ್ಥೆಗಳ ಚಟುವಟಿಕೆಗಳ ಬಗ್ಗೆ ಜಿಲ್ಲೆಯ ವ್ಯಾಪ್ತಿಯಲ್ಲಿ ಏರ್ಪಡಿಸುವ ಕಾರ್ಯ ಚಟುವಟಿಕೆಗಳಿಗೆ ಆರ್ಥಿಕ ಹಾಗೂ ಮತ್ತಿತರ ನೆರವನ್ನು ಒದಗಿಸುವುದು.

78. 7.50 ಜಿಲ್ಲಾ ಪರಿಷತ್ತಿನ ವ್ಯಾಪ್ತಿಯಲ್ಲಿ ಬರುವ ಅಧಿಕಾರಿಗಳು ಮತ್ತು ಸಿಬ್ಬಂದಿ ಮತ್ತು ಅಲ್ಲಿನ ಆಡಳಿತ ವಿಷಯಗಳು ಹಾಗೂ ಲೆಕ್ಕಪತ್ರ ಮತ್ತು ಕಾಗದಪತ್ರಗಳ ಮೇಲಿನ ಮೇಲ್ವಿಚಾರಣೆಯನ್ನು ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯು ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು. ಜೊತೆಗೆ, ಜಿಲ್ಲಾ ಪರಿಷತ್ತಿನ ಮಿಕ್ಕ ಎಲ್ಲ ಆಡಳಿತ ವಿಷಯಗಳ ಮೇಲ್ವಿಚಾರಣೆಯ ಅಧಿಕಾರವು ಸಹ ಈ ಅಧಿಕಾರಿಗೇ ಇರುತ್ತದೆ.

79. 8.8 ಪಂಚಾಯತಿಗಳ ಮನೆಗಂದಾಯವನ್ನು ಆಸ್ತಿಯ ಬಾಡಿಗೆ ಮೌಲ್ಯಕ್ಕೆ ಬದಲಾಗಿ, ಆ ಆಸ್ತಿಯ ಒಟ್ಟು ಮೌಲ್ಯವನ್ನು (ಕ್ಯಾಪಿಟಲ್ ವ್ಯಾಲ್ಯು) ದೃಷ್ಟಿಯಲ್ಲಿಟ್ಟುಕೊಂಡು ವಿಧಿಸ ಬಹುದು.

80. 8.9 ಪಂಚಾಯತಿಯ ವ್ಯಾಪ್ತಿಯಲ್ಲಿರುವ ಹುಲ್ಲುಗಾವಲುಗಳಲ್ಲಿ ಜಾನುವಾರುಗಳನ್ನು ಮೇಯಿಸಲು ಒಂದು ನಿರ್ದಿಷ್ಟ ಶುಲ್ಕವನ್ನು ವಿಧಿಸಬಹುದು. ಹಾಗೆಯೇ ಸಾರ್ವಜನಿಕ ಕಕ್ಕಸುಗಳು ಹಾಗೂ ಖಾಲಿ ನಿವೇಶನಗಳು, ಕಾಂಪೌಂಡು ಗಳನ್ನು ಸ್ವಚ್ಛಗೊಳಿಸುವ ಕಾರ್ಯವನ್ನು ಪಂಚಾಯತಿ ಏಜನ್ಸಿಯು ಮಾಡುತ್ತಿರುವ ಸಂದರ್ಭದಲ್ಲಿ ಆ ಕೆಲಸಕ್ಕೂ ವಿಶೇಷ ತೆರಿಗೆಯನ್ನು ವಿಧಿಸಬಹುದು.

81. 8.10 ಪಂಚಾಯತಿಗಳ ವ್ಯಾಪ್ತಿಯಲ್ಲಿ ಇರುವ ಕಾರ್ಖಾನೆಗಳು ಅಗತ್ಯವಾದ ಎಲ್ಲ ಸೌಲಭ್ಯಗಳನ್ನು ಒದಗಿಸುತ್ತಿದ್ದಲ್ಲಿ ರಾಜ್ಯ ಸರ್ಕಾರದ ಅನುಮತಿಯೊಂದಿಗೆ ಪಂಚಾಯತಿಯು ಕಾರ್ಖಾನೆಗಳೊಂದಿಗೆ ಒಂದು ಒಪ್ಪಂದವನ್ನು ಮಾಡಿ ಕೊಂಡು, ಆ ಪ್ರದೇಶದಲ್ಲಿ ಅದು ವಿಧಿಸುತ್ತಿರುವ ಕೆಲವು ಅಥವಾ ಹೆಚ್ಚಿನ ತೆರಿಗೆಗಳ ಬಾಬ್ತು, ಒಂದೇ ಮೊತ್ತದ ಹಣವನ್ನು ತೆಗೆದುಕೊಳ್ಳಬಹುದು.

82. 8.11 ಪಂಚಾಯತಿಗಳ ವ್ಯಾಪ್ತಿಯಲ್ಲಿ ಬರುವ ಇನ್ನಿತರ ಸಂಸ್ಥೆ ಗಳಿಂದಲೂ ಆ ಪ್ರದೇಶದಲ್ಲಿ ತಾನು ವಿಧಿಸುತ್ತಿರುವ ತೆರಿಗೆ ಗಳಿಗಾಗಿ ಒಂದು ನಿರ್ದಿಷ್ಟ ಮೊತ್ತದ ಹಣವನ್ನು ಸ್ವೀಕರಿಸಬಹುದು.

83. 8.12 ಸ್ಥಿರಾಸ್ತಿಗಳ ವರ್ಗಾವಣೆಯ ಸಂದರ್ಭದಲ್ಲಿ ಹೆಚ್ಚಿನ ಸ್ಟ್ಯಾಂಪ್ ಶುಲ್ಕ ರೂಪದಲ್ಲಿ ವಿಧಿಸುವ ಶುಲ್ಕವನ್ನು ತೆಗೆದು ಕೊಳ್ಳುವುದನ್ನು ತಾಲೂಕು ಅಭಿವೃದ್ಧಿ ಮಂಡಳಿಗಳಿಗೆ ಕಡ್ಡಾಯಗೊಳಿಸತಕ್ಕದ್ದು.

84. 8.14 ಸ್ಥಳೀಯ ತೆರಿಗೆ, ಆರೋಗ್ಯ ತೆರಿಗೆ, ಶಿಕ್ಷಣ ತೆರಿಗೆ ಮೊದಲಾದ ವಿವಿಧ ತೆರಿಗೆಗಳನ್ನು ಸಂಗ್ರಹಿಸುವುದಕ್ಕೆ ಬದಲಾಗಿ ರಾಜ್ಯ ಮತ್ತು ಸ್ಥಳೀಯ ರೆವಿನ್ಯೂ ಮಂಡಲಿಗಳು ವಿಧಿಸುತ್ತಿರುವ ಆರೋಗ್ಯ ತೆರಿಗೆಯನ್ನು ಆಧಾರವಾಗಿಟ್ಟು ಕೊಂಡು ಭೂತೆರಿಗೆ, ಅಬ್ಕಾರಿ ತೆರಿಗೆ ಮತ್ತಿತರ ತೆರಿಗೆಗಳನ್ನು ಈ ಕೆಳಕಂಡಂತೆ ವಿಧಿಸಬಹುದು:-

| | | | |
|---|---|---|---|
| | | ಆರೋಗ್ಯ ತೆರಿಗೆ | 99 ಪೈಸೆ |
| | | ಶಿಕ್ಷಣ ತೆರಿಗೆ | 19 ಪೈಸೆ |
| | | ಭೂಕಂದಾಯ ಮತ್ತು ಅದರಲ್ಲಿ ನೀರಿನ ದರವೂ ಸೇರ್ಪಡೆಯಾಗಿದ್ದಲ್ಲಿ ಸ್ಥಳೀಯ ತೆರಿಗೆಯಾಗಿ ನೀರಿನ ತೆರಿಗೆ | 12 ಪೈಸೆ |
| | | **ಒಟ್ಟು** | **40 ಪೈಸೆ** |

85. 8.15 ಜಿಲ್ಲೆಯಲ್ಲಿ ಪ್ರಾಣಿಗಳನ್ನು ಮಾರುವುದು ಮತ್ತು ಕೊಳ್ಳುವುದಕ್ಕೆ ಮಾರುಕಟ್ಟೆಗಳನ್ನು ಜಿಲ್ಲಾ ಪರಿಷತ್ತು ನಿರ್ಧರಿಸಬಹುದು. ಈ ಆವರಣಗಳಲ್ಲಿ ಮಾರಾಟಕ್ಕಾಗಿ ಬರುವ ಪ್ರಾಣಿಗಳ ಮೇಲೆ ತಾಲೂಕು ಅಭಿವೃದ್ಧಿ ಮಂಡಲಿಗಳು ತೆರಿಗೆಯನ್ನು ವಿಧಿಸಲು ತಕ್ಕಂತೆ ಈ ಮಾರುಕಟ್ಟೆ ಪ್ರದೇಶ ಗಳನ್ನು ಜಿಲ್ಲಾ ಪರಿಷತ್ತು ನಿರ್ಧರಿಸಬಹುದು. ಮಿಕ್ಕ ಎಲ್ಲಾ ವಿಚಾರಗಳಲ್ಲೂ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಜಿಲ್ಲಾ ಪರಿಷತ್ತು ಒಳಗೊಂಡಿರುತ್ತದೆ.

86. 8.16 ಧಾರ್ಮಿಕ ಸಂಸ್ಥೆಗಳು ಅಥವಾ ಇತರ ತಾತ್ಕೂರ್ತಿಕ ಸಂಸ್ಥೆಗಳು ನಡೆಸುವ ದನಗಳ ಜಾತ್ರೆಗಳ ವಿಚಾರದಲ್ಲಿ ನಮ್ಮ ಶಿಫಾರಸುಗಳ ಹಿನ್ನೆಲೆಯಲ್ಲಿ ಸರ್ಕಾರದೊಡನೆ ಪರಿಶೀಲಿಸಿ, ಆ ಜಾತ್ರೆಗಳಿಂದ ಬರುವ ತೆರಿಗೆಗಳು ತಾಲೂಕು ಬೋರ್ಡುಗಳು ಅಥವಾ ಜಿಲ್ಲಾ ಪರಿಷತ್ತುಗಳಿಗೆ ಹೋಗುವಂತೆ ನೋಡಿಕೊಳ್ಳತಕ್ಕದ್ದು.

87. 8.19 ಸರ್ಕಾರವು ವಿಧಿಸುವ ಸ್ಥಳೀಯ ತೆರಿಗೆಗಳಲ್ಲದೆ ವಿಶೇಷ ತೆರಿಗೆಗಳನ್ನು ವಿಧಿಸುವ ಅಧಿಕಾರವನ್ನೂ ಪಂಚಾಯತಿ ಅಥವಾ ತಾಲೂಕು ಅಭಿವೃದ್ಧಿ ಮಂಡಲಿ ಅಥವಾ ಜಿಲ್ಲಾ ಪರಿಷತ್ತುಗಳು ಹೊಂದಿರಬಹುದು. ಆದರೆ ಇಂತಹ ವಿಶೇಷ ತೆರಿಗೆಗಳು ಸರಾಸರಿ ಒಂದು ನೂರು ಪೈಸೆಗಳಿಗಿಂತ ಹೆಚ್ಚಾಗದಂತೆ ನಿರ್ಧರಿಸಬಹುದು.

88. 8.20 ಸರ್ಕಾರವು ಸಂಗ್ರಹಿಸುವ ೪೦ ಪೈಸೆ ತೆರಿಗೆಯಲ್ಲದೆ ೨೦ ಪೈಸೆಯನ್ನು ಮೀರದಷ್ಟು ತೆರಿಗೆಯನ್ನು ಪಂಚಾಯತ್ ರಾಜ್ ಸಂಸ್ಥೆಗಳು ವಿಧಿಸಬಹುದು.

89. 8.21 ವಿಶೇಷ ತೆರಿಗೆಯ ಹೊಣೆಯು ಪ್ರಮುಖವಾಗಿ ವ್ಯವಸಾಯ ಗಾರರ ಮೇಲೆಯೇ ಬೀಳುವುದರಿಂದ ಮನೆಗಂದಾಯ ಅಥವಾ ವೃತ್ತಿ ತೆರಿಗೆಯಂತಹ ಇತರ ಬಾಬುಗಳ ಮೇಲೆ ಪಂಚಾಯತಿಗಳು ಹೆಚ್ಚಿನ ತೆರಿಗೆಯನ್ನು ವಿಧಿಸಲು ಅವಕಾಶ ಮಾಡಬಹುದಾದುದರಿಂದ ಗ್ರಾಮದ ಎಲ್ಲ ವರ್ಗದ ಜನತೆಯ ಮೇಲೂ ಸಮಾನವಾದ ತೆರಿಗೆಯನ್ನು ವಿಧಿಸಿ ದಂತಾಗುತ್ತದೆ.

90. 8.22 ಜಿಲ್ಲಾ ಪರಿಷತ್ತು ಯಾತ್ರಾ ತೆರಿಗೆಯನ್ನು ವಿಧಿಸಬಹುದು. ಆದಾಗ್ಯೂ ಅಂತಹ ಯಾತ್ರೆಗಳ ಸಂಬಂಧದಲ್ಲಿ ಯಾತ್ರಾರ್ಥಿ ಗಳು ಹೋಗುವ ಜಾತ್ರೆ ಮತ್ತು ಉತ್ಸವಗಳಲ್ಲಿ ಅವರಿಗೆ ಅಗತ್ಯವಾದ ಸೌಲಭ್ಯಗಳನ್ನು ಒದಗಿಸಲು ತಾಲೂಕು ಅಭಿವೃದ್ಧಿ ಮಂಡಲಿಗಳು ಅಥವಾ ಪಂಚಾಯಿತಿಗಳು ಶಕ್ಯ ವಾಗಿವೆಯೆ ಎಂಬುದನ್ನು ಗಮನಿಸಿ ಈ ತೆರಿಗೆಯನ್ನು ವಿಧಿಸುವ ಅಧಿಕಾರವನ್ನು ಅವುಗಳಿಗೆ ನೀಡಬಹುದು.

91. 9.6 ವರ್ಷದಲ್ಲಿ ತೆರಿಗೆಯ ಸಂಗ್ರಹದ ವೆಚ್ಚವನ್ನು ಹೊರತುಪಡಿಸಿ ಭೂಕಂದಾಯವನ್ನು ಈ ಕೆಳಕಂಡಂತೆ ಪಂಚಾಯತಿ ರಾಜ್ಯ ಸಂಸ್ಥೆಗಳು ಸಂಗ್ರಹಿಸಬಹುದು:-

| | |
|---|---|
| ಪಂಚಾಯಿತಿಗಳು | ಶೇಕಡ ೩೦ |
| ತಾಲೂಕು ಅಭಿವೃದ್ಧಿ ಮಂಡಲಿಗಳು | ಶೇಕಡ ೩೫ |
| ಜಿಲ್ಲಾ ಪರಿಷತ್ತುಗಳು | ಶೇಕಡ ೨೦ |

ಉಳಿದ ಶೇಕಡ ೧೫ರಷ್ಟನ್ನು ರಾಜ್ಯ ಸಮಾನೀಕರಣ ನಿಧಿಗೆ ಕೊಡತಕ್ಕದ್ದು. ಈ ಹಣವನ್ನು ಭೂಕಂದಾಯಕ್ಕೆ ಸಂಬಂಧಿಸಿ ದಂತೆ ಕೊಡಬೇಕಾಗುವ ಅಮಾನತು ಅಥವಾ ಮಾಫಿ ಉದ್ದೇಶಗಳಿಗಾಗಿ ಪ್ರಮುಖವಾಗಿ ಬಳಸಬೇಕು. ಈ ಹಣವನ್ನು ಹಣಕಾಸಿನ ವಿಚಾರದಲ್ಲಿ ದುಃಸ್ಥಿತಿಯಲ್ಲಿರುವ

ಪಂಚಾಯತಿರಾಜ್ಯ ಸಂಸ್ಥೆಗಳಿಗೆ ನೀಡಿ ಅವುಗಳ ದುರ್ಬಲ ಸಂಪನ್ಮೂಲಗಳನ್ನು ವೃದ್ಧಿಪಡಿಸಿ ಆರ್ಥಿಕ ಸಮತೋಲನ ವನ್ನು ರಕ್ಷಿಸಿಕೊಳ್ಳಲು ಬಳಸಬಹುದು. ಈ ಶೇಕಡ ೧೫ರಷ್ಟನ್ನು ಕೆಳಕಂಡಂತೆ ಹಂಚಬಹುದು.

| | |
|---|---|
| ಪಂಚಾಯತಿಗಳು | ಶೇಕಡ ೫ |
| ತಾಲೂಕು ಅಭಿವೃದ್ಧಿ ಮಂಡಲಿಗಳು | ಶೇಕಡ ೫ |
| ಜಿಲ್ಲಾ ಪರಿಷತ್ತುಗಳು | ಶೇಕಡ ೫ |

92. 9.7 ಒಟ್ಟು ತೆರಿಗೆಯಲ್ಲಿ ಒಂದು ರೂಪಾಯಿಗೆ ೪೦ ಪೈಸೆಯನ್ನು ಜಿಲ್ಲಾ ಪರಿಷತ್ತಿಗೆ ಕೊಡತಕ್ಕದ್ದು.

93. 9.8 ರೆವಿನ್ಯೂ ಭೂಮಿಗಳ ಮೇಲೆ ವಿಧಿಸುವ ಅಧಿಕ ಕರವು ತಾತ್ಕಾಲಿಕವಾಗಿದ್ದು ಆದಷ್ಟು ಬೇಗ ಇಡೀ ರಾಜ್ಯದಲ್ಲಿ ಭೂಕಂದಾಯ ಪುನರ್ವಿಮರ್ಶಾ ಕಾರ್ಯವನ್ನು ಕೈಗೆತ್ತಿ ಕೊಳ್ಳುವುದು ಅತ್ಯಂತ ಅಗತ್ಯವಾಗಿದೆ. ಕೃಷಿ ಭೂಮಿಗಳ ಮೇಲಿನ ಕಂದಾಯವನ್ನು ಮರು ನಿಷ್ಕರ್ಷೆ ಮಾಡುವುದ ರಿಂದ ಪ್ರತಿ ಒಂದು ರೂಪಾಯಿಯ ಮೇಲೆ ವಿಧಿಸುವ ೪೦ ಪೈಸೆಯು ತೆರಿಗೆಯಲ್ಲಿ ನೂರಕ್ಕೆ ನೂರರಷ್ಟು ಅಧಿಕವಾಗಿ ಸಮದೂಗಿಸುತ್ತದೆ. ಆದ್ದರಿಂದ, ಮರುತೆರಿಗೆ ವಿಧಿಸುವಾಗ ಸದ್ಯದಲ್ಲಿ ವಿಧಿಸುತ್ತಿರುವ ಒಂದು ರೂಪಾಯಿಗೆ ೪೦ ಪೈಸೆ ತೆರಿಗೆಯನ್ನು ೨೦ ಪೈಸೆಗೆ ಇಳಿಸಬಹುದು.

94 9.9 ತಾಲೂಕು ಅಭಿವೃದ್ಧಿ ಮಂಡಲಿಗಳು ವಹಿಸಿಕೊಂಡು ನಿರ್ವಹಿಸುತ್ತಿರುವ ಗ್ರಾಮೀಣ ರಸ್ತೆಗಳ ಮೇಲೆ ಪ್ರತಿ ಮೈಲಿಗೆ ಇನ್ನೂರು ರೂಪಾಯಿ ತೆರಿಗೆ ಇರತಕ್ಕದ್ದು.

95. 9.10 ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅವುಗಳ ನಿರ್ವಹಣೆಯ ಶೇಕಡ ೭೫ರಷ್ಟನ್ನು ಸರ್ಕಾರವು ಭರಿಸಬೇಕು, ಉಳಿದ ಮೊತ್ತವನ್ನು ಸ್ಥಳೀಯ ಸಂಸ್ಥೆಗಳು ಭರಿಸಬೇಕು. ಪ್ರೌಢ ಶಿಕ್ಷಣ ವಿಚಾರದಲ್ಲಿ ಅವುಗಳಿಗೆ ನೀಡುವ ಅನುದಾನವನ್ನು, ಅನುದಾನ ಸಂಹಿತೆಯನ್ವಯ ನಿಯಂತ್ರಿಸಬಹುದು. ಆಸ್ಪತ್ರೆಗಳು ಮತ್ತು ಆರೋಗ್ಯ ಘಟಕಗಳಿಗೆ ಶೇಕಡ ೬೦ರಷ್ಟನ್ನು ನಿರ್ವಹಣಾ ವೆಚ್ಚವಾಗಿ ಸರ್ಕಾರವೂ ಮತ್ತು ಉಳಿದ ಹಣವನ್ನು ಸ್ಥಳೀಯ ಸಂಸ್ಥೆಗಳೂ ಒದಗಿಸಬೇಕು. ಪಶುವೈದ್ಯ ಶಾಲೆಗಳಿಗೆ ಶೇಕಡ ೭೫ರಷ್ಟನ್ನು ನಿರ್ವಹಣಾ ವೆಚ್ಚವಾಗಿ ಸರ್ಕಾರವೂ, ಉಳಿದ ಹಣವನ್ನು ಸ್ಥಳೀಯ ಸಂಸ್ಥೆಗಳೂ ಭರಿಸಬಹುದು.

96. 9.11 ಈ ಶಿಫಾರಸುಗಳಿಂದ ರಾಜ್ಯ ಹಣಕಾಸು ಪರಿಸ್ಥಿತಿಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಬಹುದಾದ್ದರಿಂದ ಕೇಂದ್ರ ಸರ್ಕಾರದಿಂದ ಸೂಕ್ತ ಹಣಕಾಸು ನೆರವನ್ನು ಪಡೆಯಲು ಮುಂದಿನ ಹಣಕಾಸು ಆಯೋಗದಲ್ಲಿ ಕೈಗೆತ್ತಿಕೊಳ್ಳಬಹುದು.

97. 9.12 ಪಂಚಾಯಿತಿ ರಾಜ್ಯ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ಮೂರನೇ ದರ್ಜೆಯ ನೌಕರರ ಸಂಬಳ ಸಾರಿಗೆ ಮತ್ತಿತರ ವೆಚ್ಚಗಳಿಗಾಗಿ ಸರ್ಕಾರವು ಜಿಲ್ಲಾ ಪರಿಷತ್ತುಗಳಿಗೆ ಆ ವೆಚ್ಚದ ಸರಾಸರಿ ಶೇಕಡ ೭೫ರಷ್ಟು ಹಣವನ್ನು ಪ್ರತಿವರ್ಷ ಈ ವರ್ಗದ ನೌಕರರ ಸಂಬಳ ಮತ್ತು ಭತ್ಯಗಳಿಗಾಗಿ ನೀಡಬಹುದು. ಈ ಮಂಡಳಿಗಳ ಪ್ರಥಮ ಮತ್ತು ದ್ವಿತೀಯ ದರ್ಜೆಯ ಸಿಬ್ಬಂದಿಯ ಸಂಬಳಗಳನ್ನು ಸರ್ಕಾರವೇ ಭರಿಸತಕ್ಕದ್ದು. ನಾಲ್ಕನೇ ದರ್ಜೆಯ ನೌಕರರ ಸಂಬಳಗಳನ್ನು ಸ್ಥಳೀಯ ಸಂಸ್ಥೆಗಳು ತಮ್ಮ ನಿಧಿಯಿಂದಲೇ ತೆಗೆದು ಕೊಡತಕ್ಕದ್ದು.

98. 9.13 ಸರ್ಕಾರವು ವಿಧಿಸಿರುವ ತೆರಿಗೆಗಳ ಜೊತೆಗೆ ಸ್ಥಳೀಯ ಸಂಸ್ಥೆಗಳು ವಿಶೇಷ ತೆರಿಗೆಗಳನ್ನು ವಿಧಿಸುವುದನ್ನು ಪ್ರೋತ್ಸಾಹಿಸುವ ಸಲುವಾಗಿ ಸರ್ಕಾರವು ಈ ಸಂಸ್ಥೆಗಳಿಗೆ ಅನುರೂಪ ಅನುದಾನಗಳನ್ನು ಮಂಜೂರು ಮಾಡಬಹುದು. ತೆರಿಗೆ ವಿಧಿಸುವ ಸಾಮರ್ಥ್ಯವು ಪ್ರಾಕೃತಿಕ ಅನುಕೂಲ ಅಥವಾ ಅನಾನುಕೂಲಗಳಿಂದ ಜಿಲ್ಲೆಯಿಂದ ಜಿಲ್ಲೆಗೆ, ತಾಲೂಕಿನಿಂದ ತಾಲೂಕಿಗೆ ಅಥವಾ ಒಂದೇ ತಾಲೂಕಿನ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವ್ಯತ್ಯಾಸ ವಾಗುವುದರಿಂದ ಕೆಲವು ಕಡೆ ಲಾಭವಾಗಬಹುದು ಅಥವಾ ತೊಂದರೆಯೂ ಸಂಬಂಧಿಸಬಹುದು. ಈ ದೃಷ್ಟಿಯಿಂದ ತಾಲೂಕುಗಳನ್ನು ಅಥವಾ ತಾಲೂಕಿನ ಬೇರೆ ಬೇರೆ ಭಾಗಗಳನ್ನು ವಿವಿಧ ವರ್ಗಗಳಾಗಿ ವಿಂಗಡಿಸಬಹುದಾಗಿದೆ. ತೆರಿಗೆ ಸಂಗ್ರಹ ವಿಚಾರದಲ್ಲಿ ದುರ್ಬಲವಾಗಿರುವ ತಾಲೂಕು ಗಳು ಅಥವಾ ತಾಲೂಕಿನ ಭಾಗಗಳಿಗೆ ಹೆಚ್ಚಿನ ಅನುರೂಪ ನಿಧಿಗಳನ್ನು ಮಂಜೂರು ಮಾಡಬೇಕು. ಆದರೆ ಸಂಪನ್ಮೂಲ ಗಳನ್ನು ಹೆಚ್ಚಿಸಿಕೊಳ್ಳಲು ವಿಶೇಷ ತೆರಿಗೆಗಳನ್ನು ಸಂಗ್ರಹಿಸುವ ಪ್ರಯತ್ನಗಳನ್ನು ಮಾಡಬೇಕು.

99. 9.14 ಸಮುದಾಯ ಅಭಿವೃದ್ಧಿ ಯೋಜನೆಗಳಿಗೆ ಒದಗಿಸಿರುವ ನಿಧಿಗಳನ್ನು, ಯೋಜನಾತ್ಮಕ ಆಯವ್ಯಯಗಳನ್ನು ರಾಜ್ಯ ಮಟ್ಟದಲ್ಲಿ ಒಟ್ಟುಗೂಡಿಸಿ, ಯೋಜನಾತ್ಮಕ ಆಯವ್ಯಯ ವನ್ನು ಪರಿಗಣಿಸದೆ ತಾಲೂಕು ಅಭಿವೃದ್ಧಿ

ಮಂಡಲಿಗಳಿಗೆ ವಿತರಿಸತಕ್ಕದ್ದು. ಕೃಷಿ ಮತ್ತು ನೀರಾವರಿಗೆ ಸಂಬಂಧಿಸಿದಂತೆ ಮಾಡಿರುವ ಹಣಕಾಸಿನ ಅವಕಾಶಗಳನ್ನು ಒಟ್ಟುಗೂಡಿಸಿ ಸಂಬಂಧಪಟ್ಟ ಇಲಾಖೆಗಳು ಯೋಜನೆ ಮತ್ತು ಯೋಜನೇತರ ವೆಚ್ಚಗಳಿಗೆ ಮಾಡಿಕೊಂಡಿರುವ ವೆಚ್ಚದ ಅವಕಾಶಗಳಿಗೆ ಸಂವಾದಿಯಾಗಿ ಮತ್ತು ಸಮನಾಗಿ ಎಲ್ಲ ಬ್ಲಾಕುಗಳಿಗೂ ವಿತರಿಸತಕ್ಕದ್ದು. ಇವು ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳ ಸಮಗ್ರ ಆಯವ್ಯಯಕ್ಕೆ ಹೊಂದಿಕೆಯಾಗಿರಬೇಕು.

100. 9.15 ಸ್ಥಳೀಯ ಸಂಸ್ಥೆಗಳಿಗೆ ಸಕಾಲದಲ್ಲಿ ಹಣಕಾಸನ್ನು ವಿತರಣೆ ಮಾಡಬೇಕಾದರೆ ವಿವಿಧ ಇಲಾಖೆಗಳ ಪ್ರಸ್ತಾವಗಳನ್ನು ಆದಷ್ಟು ಮುಂಚಿತವಾಗಿ ತರಿಸಿಕೊಳ್ಳಬೇಕು. ಈ ಪ್ರಸ್ತಾವ ಗಳು ಪ್ರತಿ ಜಿಲ್ಲೆಯ ಇಲಾಖಾ ಪ್ರಸ್ತಾವಗಳಿಗೆ ಸಂಬಂಧಿಸಿದ ಶೇಕಡ ೭೫ರಷ್ಟು ಹಣಕಾಸಿನ ಅಗತ್ಯವನ್ನು ಒಳಗೊಂಡಿರ ಬೇಕು. ಉಳಿದ ಶೇಕಡ ೨೫ರಷ್ಟರ ಹಂಚಿಕೆಯನ್ನು ಇಲಾಖೆಗಳ ಮುಖ್ಯಸ್ಥರ ತೀರ್ಮಾನಕ್ಕೆ ಬಿಡಬಹುದು.

101. 9.16 ಜಿಲ್ಲಾ ಪರಿಷತ್ತು ಮತ್ತು ತಾಲೂಕು ಮಂಡಲಿಗಳ ನಿಧಿಯನ್ನು ಖಜಾನೆಗಳಲ್ಲಿ ಇಡಬೇಕು.

102 9.17 ಖಜಾನೆಗಳಿರುವ ಸ್ಥಳದಿಂದ ದೂರ ಇರುವ ಪಂಚಾಯಿತಿ ಗಳು ತಮ್ಮ ನಿತ್ಯದ ಖರ್ಚು ವೆಚ್ಚಗಳಿಗೆ ಅಗತ್ಯವಾದ ಹಣವನ್ನು ತಮ್ಮಲ್ಲೇ ಇಟ್ಟುಕೊಳ್ಳಲು ಅವಕಾಶ ಮಾಡ ಬಹುದು. ಇಂತಹ ಹಣವನ್ನು ಅಗತ್ಯವಿದ್ದಾಗ ಮಾತ್ರ ತೆಗೆದುಕೊಳ್ಳಬಹುದು. ಹೀಗೆ ಪಡೆಯುವ ಹಣವು ದಿನ ನಿತ್ಯದ ಕೆಲಸ ಕಾರ್ಯಗಳಿಗೆ ಅಗತ್ಯವಾದಷ್ಟು ಮಾತ್ರಕ್ಕೆ ಸೀಮಿತವಾಗಿರತಕ್ಕದ್ದು. ಆ ಹಣವು ಉದ್ದೇಶಿತ ನಿತ್ಯದ ಕೆಲಸಗಳಿಗೆ ಹೆಚ್ಚಾಗದಂತೆ ಅಥವಾ ಕಡಿಮೆಯಾಗದಂತೆ ಇರಬೇಕು. ಈ ನಿಯಮಗಳ ಅನುಸಾರ ತಾವು ಪಡೆದ ಹಣದ ಸ್ವಲ್ಪ ಭಾಗವನ್ನು ನಗದಾಗಿ ಷೆಡ್ಯೂಲ್ ಬ್ಯಾಂಕು ಗಳಲ್ಲಿ ಅಥವಾ ಪೋಸ್ಟಾಫೀಸುಗಳ ಶಿಲ್ಕು ಖಾತೆಯಲ್ಲಿ ಉಳಿಸಿಕೊಳ್ಳುವುದು ಅನುಕೂಲಕರವೆಂದು ಕಂಡುಬಂದಲ್ಲಿ ಹಾಗೆ ಮಾಡಲು ಯಾವುದೇ ಅಭ್ಯಂತರವಿಲ್ಲ.

103 9.19 ಸ್ಥಳೀಯ ಸಂಸ್ಥೆಗಳು, ಸಂಬಂಧಪಟ್ಟ ಕಾರ್ಯಕ್ರಮಗಳಿಗೆ ಕೊಡಮಾಡಿದ ಹಣವನ್ನು ಕ್ರಮವಾಗಿ ಮತ್ತು ಪೂರ್ತಿಯಾಗಿ ಪಡೆದುಕೊಳ್ಳುತ್ತಿವೆಯೆ ಎಂಬುದನ್ನು ಹಾಗೂ ಮತ್ತು ಆ ಹಣವನ್ನು ಬಿಡುಗಡೆ ಮಾಡುವುದಕ್ಕೆ ಮುಂಚೆ ಆ ಹಣಕಾಸಿಗೆ ಸಂಬಂಧಪಟ್ಟ ಪ್ರಸ್ತಾವಗಳನ್ನು ಸಮಗ್ರವಾಗಿ

ಪರಿಶೀಲಿಸಲಾಗಿದೆಯೆ ಎಂಬುದನ್ನೂ ಗಮನವಿಟ್ಟು ನೋಡಲು ಪ್ರತಿ ಜಿಲ್ಲಾ ಪರಿಷತ್ತಿನಲ್ಲೂ ಒಂದು ಸಮರ್ಥವಾದ ಲೆಕ್ಕಪತ್ರ ವಿಭಾಗವು ಇರುವುದು ಅಪೇಕ್ಷಣೀಯ.

104 9.21 ಪಂಚಾಯತಿಯ ಲೆಕ್ಕಪತ್ರಗಳನ್ನು ತಾಳೆನೋಡಿ ಪರಿಶೀಲಿಸುವುದು ಪಂಚಾಯತಿ ವಿಸ್ತರಣಾಧಿಕಾರಿಯ ಜವಾಬ್ದಾರಿಯಾಗಿರುತ್ತದೆ. ಜಿಲ್ಲಾ ಪರಿಷತ್ತುಗಳು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳ ಲೆಕ್ಕಪತ್ರಗಳನ್ನು ಪರಿಶೀಲಿಸುವುದು ರಾಜ್ಯ ಲೆಕ್ಕಪತ್ರ ಇಲಾಖೆಯ ನಿಯಂತ್ರಕನ ಜವಾಬ್ದಾರಿಯಾಗಿರುತ್ತದೆ.

105 9.24 ಪ್ರಜಾಪ್ರಭುತ್ವದ ಉದ್ದೇಶಿತ ಅಧಿಕಾರ ವಿಕೇಂದ್ರೀಕರಣದ ಪರಿಣಾಮವಾಗಿ ಸ್ಥಳೀಯ ನಿಧಿಗಳನ್ವಯ ಜಿಲ್ಲಾಮಟ್ಟದ ವಿವಿಧ ಸ್ಥಳೀಯ ಸಂಸ್ಥೆಗಳಿಗೆ ಹಣಕಾಸಿನ ನಿರ್ವಹಣೆಯ ಕೆಲಸವನ್ನು ಹೆಚ್ಚಿನ ಸಂಖ್ಯೆಯಲ್ಲಿ ವಹಿಸಿರುವುದರಿಂದ ಅಕೌಂಟೆಂಟ್ ಜನರಲ್‌ನ ಕೆಲಸವು ಸಾಕಷ್ಟು ರೀತಿಯಲ್ಲಿ ಕಡಿಮೆಯಾಗಿದೆ.

106 10.4 ಈ ಸಂಸ್ಥೆಗಳಿಗೆ ಸಿಬ್ಬಂದಿಯನ್ನು ನೇಮಿಸಿಕೊಳ್ಳಲು ರಾಜ್ಯ ಮಟ್ಟದಲ್ಲಿ ಅಥವಾ ಜಿಲ್ಲಾ ಮಟ್ಟದಲ್ಲಿ ಪ್ರತ್ಯೇಕವಾದ ಆಯ್ಕೆ ಮಂಡಲಿಗಳ ಅಗತ್ಯವಿರುವುದಿಲ್ಲ. ಪ್ರಾಥಮಿಕ ಶಾಲಾ ಶಿಕ್ಷಕರನ್ನು ಹೊರತುಪಡಿಸಿ, ಆಡಳಿತಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಹೊರತಾದ ಮೂರನೇ ದರ್ಜೆಯ ಸಿಬ್ಬಂದಿಯನ್ನು ರಾಜ್ಯ ಲೋಕಸೇವಾ ಆಯೋಗ, ರಾಜ್ಯಮಟ್ಟದ ನೇಮಕಾತಿ ಸಮಿತಿ ಹಾಗೂ ವಿಭಾಗ ಮಟ್ಟದ ನೇಮಕಾತಿ ಸಮಿತಿಗಳು ನೇಮಿಸಿಕೊಳ್ಳಬೇಕು. ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಯನ್ನು ಈ ಕೆಳಕಂಡವರನ್ನು ಒಳಗೊಂಡ ಜಿಲ್ಲಾಮಟ್ಟದ ನೇಮಕಾತಿ ಸಮಿತಿಯು ಮಾಡತಕ್ಕದ್ದು.

(1) ಅಧ್ಯಕ್ಷ, ಜಿಲ್ಲಾಧಿಕಾರಿ
(2) ಜಿಲ್ಲಾ ಪರಿಷತ್ತಿನ ಶಿಕ್ಷಣ ಸಮಿತಿಯ ಅಧ್ಯಕ್ಷ, ಮತ್ತು
(3) ಜಿಲ್ಲಾ ಶಿಕ್ಷಣಾಧಿಕಾರಿ

107. 10.5 ಸದ್ಯದಲ್ಲಿರುವ ಸ್ಥಳೀಯ ಸರ್ಕಾರಿ ನೌಕರರನ್ನು ಸರ್ಕಾರಿ ನೌಕರರೆಂದು ಪರಿಗಣಿಸತಕ್ಕದ್ದು. ಮತ್ತು ಆ ನೌಕರರ ಸಂಬಳಗಳನ್ನು ಸರ್ಕಾರಿ ನೌಕರರ ಸಂಬಳಗಳಿಗೆ ಸಮ ಗೊಳಿಸತಕ್ಕದ್ದು.

108. 10.7 ನಮ್ಮ ಶಿಫಾರಸುಗಳನ್ವಯ ಜಿಲ್ಲೆಯಲ್ಲಿರುವ ಎಲ್ಲ ನೌಕರರನ್ನು ಯಾವುದೇ ತಾರತಮ್ಯವಿಲ್ಲದೆ ಸರ್ಕಾರಿ ನೌಕರರೆಂದು ಪರಿಗಣಿಸುವುದರಿಂದ ನಿವೃತ್ತಿ

ವೇತನದ ಮೊತ್ತವು ಅತ್ಯಂತ ಹೆಚ್ಚಾಗುವ ಸಂಭವವುಂಟು. ಈ ಹಿನ್ನೆಲೆಯಲ್ಲಿ ಮೂರನೇ ದರ್ಜೆಯ ಎಲ್ಲ ನೌಕರರ ಸೇವಾವಧಿಯ ವಯೋಮಿತಿಯನ್ನು ೫೮ ವರ್ಷಗಳಿಗೆ ಏರಿಸತಕ್ಕದ್ದು ಮತ್ತು ಪ್ರಾಥಮಿಕ ಶಾಲಾ ಶಿಕ್ಷಕರ ಸಂಬಂಧದಲ್ಲಿ ಈ ವಯೋಮಿತಿಯು ೬೦ ವರ್ಷಗಳಿಗಿರತಕ್ಕದ್ದು.

109. 10.9 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಜಿಲ್ಲಾಧಿಕಾರಿಯ ದರ್ಜೆಯ ಅಧಿಕಾರಿಯಾಗಿರತಕ್ಕದ್ದು. ಈ ಹುದ್ದೆಗಳು ಸಿನೀಯರ್ ಟೈಮ್ ಸ್ಕೇಲ್ ಹುದ್ದೆಗಳಲ್ಲಿ ಸೇರತಕ್ಕದ್ದು. ಆದರೆ ಈ ಹುದ್ದೆಗಳಿಗೆ ಈ ದರ್ಜೆಯ ಅಗತ್ಯ ಸಂಖ್ಯೆಯ ಅಧಿಕಾರಿಗಳು ಲಭ್ಯವಿಲ್ಲದ ಸಂದರ್ಭ ಗಳಲ್ಲಿ ಎಂ.ಎ.ಎಸ್. ಅಧಿಕಾರಿಗಳನ್ನು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಾಗಿ ನೇಮಿಸಬಹುದು.

110. 10.10 ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಜಿಲ್ಲೆಯ ಸ್ಥಳೀಯ ಸರ್ಕಾರಿ ಆಡಳಿತದ ಸಂಪೂರ್ಣ ನಿರ್ವಹಣೆಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುವನು. ಹಾಗೆಯೇ ಜಿಲ್ಲಾ ಪರಿಷತ್ತಿನ ಎಲ್ಲ ಸಿಬ್ಬಂದಿಯೂ ಈ ಅಧಿಕಾರಿಯ ನಿಯಂತ್ರಣದಲ್ಲಿ ಕೆಲಸ ಮಾಡುವುದು. ಈ ಅಧಿಕಾರಿಗೆ ೩ ಮತ್ತು ೪ನೇ ದರ್ಜೆಯ ಸಿಬ್ಬಂದಿಯ ಮೇಲಿನ ಶಿಸ್ತುಬದ್ಧ ನಿಯಂತ್ರಣಕ್ಕೆ ಸಂಬಂಧಿಸಿ ಅಗತ್ಯವಾದ ಅಧಿಕಾರಗಳು ಇರತಕ್ಕದ್ದು. ೨ನೇ ವರ್ಗದ ಅಧಿಕಾರಿಗಳ ವಿಚಾರದಲ್ಲೂ ಚಿಕ್ಕಪುಟ್ಟ ಶಿಕ್ಷೆಗಳ ಸಂಬಂಧದಲ್ಲಿ ಪ್ರಾಥಮಿಕ ಹುಕುಂಗಳನ್ನು ಮಾಡುವ ಅಧಿಕಾರವೂ ಈ ಅಧಿಕಾರಿಗೇ ಇರುವುದು.

111 10.13 ೩ನೇ ದರ್ಜೆಯ ಪಂಚಾಯಿತಿಗಳಿಗೆ ಗ್ರಾಮಲೆಕ್ಕಿಗ ಪಂಚಾಯತಿ ಕಾರ್ಯದರ್ಶಿಗೆ ಬದಲಾಗಿ, ಈ ವರ್ಗದಲ್ಲಿ ಪ್ರತಿ ಪಂಚಾಯತಿಗೂ ಒಬ್ಬ ಪ್ರತ್ಯೇಕ ಪಂಚಾಯತಿ ಕಾರ್ಯದರ್ಶಿಯು ಇರಬಹುದು. ದೊಡ್ಡ ವ್ಯಾಪ್ತಿಯ ಪಂಚಾಯತಿಗಳಿಗೆ ಪೂರ್ಣಾವಧಿಯ ಕಾರ್ಯದರ್ಶಿಗಳೂ ಮತ್ತು ಚಿಕ್ಕ ವ್ಯಾಪ್ತಿಯ ಪಂಚಾಯತಿಗಳಿಗೆ ಅರೆಕಾಲಿಕ ಕಾರ್ಯದರ್ಶಿಗಳೂ ಇರತಕ್ಕದ್ದು. ಈ ಪಂಚಾಯತಿ ಕಾರ್ಯದರ್ಶಿಗಳು ಸರ್ಕಾರಿ ನೌಕರರಾಗಿರುವುದಿಲ್ಲ. ಇವರ ಸಂಬಳ ಮತ್ತು ಭತ್ಯೆಗಳನ್ನು ಸಂಬಂಧಪಟ್ಟ ಪಂಚಾಯಿತಿ ಗಳೇ ಭರಿಸತಕ್ಕದ್ದು.

112 10.14 ಕ್ಷೇತ್ರದ ದರ್ಜೆಗನುಗುಣವಾಗಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಒಂದು ಸಮನಾದ ಸಿಬ್ಬಂದಿ ಮಾದರಿಯು ಇರುವ ಅಗತ್ಯವಿದೆ.

113 10.18 ಡೆಪ್ಯುಟಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಹುದ್ದೆಯು ಹೆಚ್ಚುವರಿಯಾಗಿದ್ದಲ್ಲಿ, ಆ ಹುದ್ದೆಗಳನ್ನು ರದ್ದುಗೊಳಿಸ ಬೇಕು. ಯಾವುದೇ ತಾಲೂಕಿನಲ್ಲಿ ಒಂದು

ಅಥವಾ ಎರಡು ಬ್ಲಾಕುಗಳಿದ್ದಲ್ಲಿ ತಾಲೂಕು ಅಭಿವೃದ್ಧಿ ಅಧಿಕಾರಿಯ ಕಚೇರಿಯ ದೈನಂದಿನ ಆಡಳಿತ ಕಾರ್ಯಗಳಲ್ಲಿ ನೆರವಾಗಲು ತಾಲೂಕು ಶಿರಸ್ತೇದಾರ್ ದರ್ಜೆಯ ಓರ್ವ ಕಚೇರಿ ನಿರ್ವಾಹಕನನ್ನು ನೇಮಿಸಿಕೊಳ್ಳಬೇಕು. ಯಾವುದೇ ತಾಲೂಕಿ ನಲ್ಲಿ ೩ ಅಥವಾ ೪ ಬ್ಲಾಕುಗಳಿದ್ದಾಗ, ತಾಲೂಕು ಅಭಿವೃದ್ಧಿ ಅಧಿಕಾರಿ ಕಚೇರಿಯ ದೈನಂದಿನ ಕೆಲಸಗಳಲ್ಲಿ ನೆರವಾಗಲು ಡೆಪ್ಯುಟಿ ತಹಶೀಲ್ದಾರ್ ದರ್ಜೆಯ ಓರ್ವ ಸಹಾಯಕ ತಾಲೂಕು ಅಭಿವೃದ್ಧಿ ಅಧಿಕಾರಿಯನ್ನು ನೇಮಿಸಿಕೊಳ್ಳಬೇಕು.

114. 10.19 ಜಿಲ್ಲಾಧಿಕಾರಿಗಳ ಜಿಲ್ಲಾ ಅಭಿವೃದ್ಧಿ ಸಹಾಯಕರಾಗಿ ಮುಂಬಡ್ತಿಯ ಮೇರೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ಹಾಗೂ ಮುಂಬಯಿ ಪ್ರಾಂತದ ಸ್ಥಳೀಯ ಸರ್ಕಾರಿ ಸೇವೆಯ ಅಧಿಕಾರಿಗಳನ್ನು ಹೈದರಾಬಾದು ಮತ್ತು ಮದರಾಸು ರಾಜ್ಯಗಳ ಅಧಿಕಾರಗಳನ್ನು ನೇಮಿಸಿಕೊಳ್ಳತಕ್ಕದ್ದು. ಕೆಲವು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ಜಿಲ್ಲಾಧಿಕಾರಿಗಳ ಹಾಗೂ ವಿಭಾಗಾಧಿಕಾರಿಗಳ ಕಚೇರಿಗಳಲ್ಲಿ ಕಚೇರಿ ಸಹಾಯಕರು ಗಳಾಗಿ ನೇಮಿಸಿಕೊಳ್ಳಬಹುದು. ಇಷ್ಟಾದಮೇಲೂ ಉಳಿಯುವ ಹೆಚ್ಚಿನ ಸಿಬ್ಬಂದಿಯನ್ನು ಪುರಸಭೆಗಳ ಚೀಫ್ ಆಫೀಸರುಗಳಾಗಿ ನೇಮಿಸಿಕೊಳ್ಳಬಹುದು.

115. 10.20 ಒಂದು ಬ್ಲಾಕಿಗೆ ಒಬ್ಬರಂತೆ, ಅಲ್ಲಿ ನಿರ್ವಹಿಸ ಬಹುದಾದಷ್ಟು ಕೆಲಸಗಳು ಇದ್ದಲ್ಲಿ ಕೃಷಿ, ಗ್ರಾಮೀಣ ಇಂಜಿನಿಯರಿಂಗ್ ಮತ್ತು ಸಹಕಾರ ವಿಸ್ತರಣಾಧಿಕಾರಿಗಳ ಸೇವೆಯನ್ನು, ಅಂತಹ ಬ್ಲಾಕುಗಳಲ್ಲಿ ಮುಂದುವರಿಸ ತಕ್ಕದ್ದು.

116. 10.21 ಪ್ರತಿಯೊಂದು ಬ್ಲಾಕಿಗೂ ಒಬ್ಬ ಪಂಚಾಯಿತಿ ವಿಸ್ತರಣಾ ಅಧಿಕಾರಿಯೂ ಇರಬಹುದು.

117. 10.22 ಪಶುಸಂಗೋಪನಾ ವಿಸ್ತರಣಾಧಿಕಾರಿ ಹುದ್ದೆಗಳನ್ನು ರದ್ದು ಗೊಳಿಸಬಹುದು.

118. 10.23 ಯಾವ ಜಿಲ್ಲೆಗಳಲ್ಲಿ ಗ್ರಾಮೀಣ ಕೈಗಾರಿಕೆಗಳನ್ನು ಆರಂಭಿಸಲು ನಿರ್ದಿಷ್ಟ ವ್ಯಾಪ್ತಿಯ ಅವಕಾಶವಿದೆಯೊ ಅಂತಹ ಜಿಲ್ಲೆಗಳ ಕೈಗಾರಿಕೆ ಮತ್ತು ವಾಣಿಜ್ಯ ಸಹಾಯಕ ನಿರ್ದೇಶಕನ ಅಧೀನದಲ್ಲಿ ಒಂದು ಅಥವಾ ಎರಡು ಕೈಗಾರಿಕಾ ವಿಸ್ತರಣಾಧಿಕಾರಿಗಳ ಹುದ್ದೆಗಳು ಇರಬಹುದು. ಉಳಿದ ಎಲ್ಲ ಹುದ್ದೆಗಳನ್ನು ರದ್ದುಗೊಳಿಸಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಸೂಕ್ತ ಹುದ್ದೆಗಳಿಗೆ ನೇಮಿಸ ಬಹುದು.

119. 10.24 ಗ್ರಾಮಸೇವಕರ ಹುದ್ದೆಗಳನ್ನು ರಾಜ್ಯದ ಎಲ್ಲ ಬ್ಲಾಕು ಗಳಲ್ಲೂ ೧೦ರಿಂದ ೮ ಹುದ್ದೆಗಳಿಗೆ ಇಡೀ ರಾಜ್ಯಕ್ಕೆ ಸಮನಾಗುವಂತೆ ಕಡಿತಗೊಳಿಸಬಹುದು.

120. 10.25 ಮದ್ರಾಸ್ ಸಂಸ್ಥಾನದಲ್ಲಿರುವಂತೆ ಇಲ್ಲಿಯೂ ಒಬ್ಬ ಮಂತ್ರಿ ಅಥವಾ ಅಧಿಕಾರೇತರ ಮಹಿಳೆಯ ಅಧ್ಯಕ್ಷತೆಯಲ್ಲಿ ರಾಜ್ಯ, ಸಾಮಾಜಿಕ ಕ್ಷೇಮ ಸಲಹಾ ಮಂಡಲಿಯು ಇರತಕ್ಕದ್ದು. ಓರ್ವ ಮಹಿಳಾ ಅಧಿಕಾರಿಯು ನಿರ್ದೇಶಕರಾಗಿರುವ ಒಂದು ಪ್ರತ್ಯೇಕ ಇಲಾಖೆಯನ್ನು ಮಹಿಳಾ ಅಭಿವೃದ್ಧಿಗಾಗಿಯೇ ಸೃಷ್ಟಿಸತಕ್ಕದ್ದು. ಈ ನಿರ್ದೇಶಕಿಯು ರಾಜ್ಯ ಮಂಡಲಿಯ ಪದನಿಮಿತ್ತ ಕಾರ್ಯದರ್ಶಿಯಾಗಿಯೂ ಕೆಲಸ ನಿರ್ವಹಿಸುವರು. ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಕ್ಷೇಮಾಭ್ಯುದಯ ಕಾರ್ಯಕ್ರಮಗಳ ಹೊಣೆಯನ್ನು ನಿರ್ವಹಿಸಲು ಪ್ರತಿಜಿಲ್ಲೆಗೂ ಓರ್ವ ಮಹಿಳಾ ಕ್ಷೇಮಾಭ್ಯುದಯ ಅಧಿಕಾರಿಯು ಇರತಕ್ಕದ್ದು. ಈ ಇಲಾಖೆ ಯಲ್ಲಿ ಗ್ರಾಮಸೇವಕಿಯರು ಮತ್ತು ಮುಖ್ಯ ಸೇವಕಿಯರು ಇದ್ದು ಅವರ ಸಂಬಳ ಮತ್ತು ಭತ್ಯಗಳನ್ನು ಆ ಇಲಾಖೆಯೇ ಭರಿಸತಕ್ಕದ್ದು. ಗ್ರಾಮಸೇವಕಿಯರು ಮತ್ತು ಮುಖ್ಯ ಸೇವಕಿಯರ ಹುದ್ದೆಗಳನ್ನು ನೇಮಿಸಲು ಆಗದಿದ್ದಲ್ಲಿ ಸದರಿ ಹುದ್ದೆಗಳನ್ನು ರದ್ದುಗೊಳಿಸತಕ್ಕದ್ದು.

121. 10.27 ಸಮಾಜ ಶಿಕ್ಷಣಾಧಿಕಾರಿಗಳ ಹುದ್ದೆಗಳನ್ನು ರದ್ದುಗೊಳಿಸಿ, ಅವರನ್ನು ಅವರ ಸಾಮರ್ಥ್ಯಕ್ಕೆ ಅನುಗುಣವಾಗಿ ಶಿಕ್ಷಣ ಇಲಾಖೆಯ ಸೂಕ್ತ ಹುದ್ದೆಗಳಲ್ಲಿ ನೇಮಿಸತಕ್ಕದ್ದು.

122 10.29 ಸರ್ಕಾರವು ರೂಪಿಸಿರುವ ಕಾನೂನು ಕಾಯಿದೆಗಳನ್ವಯ ಈ ಕೆಳಕಂಡ ವಿವಿಧ ಇಲಾಖೆಗಳ ಜಿಲ್ಲಾಮಟ್ಟದ ಇಲಾಖೆಗಳ ಕಾರ್ಯಕ್ರಮಗಳನ್ನು ಜಿಲ್ಲಾ ಪರಿಷತ್ತಿಗೆ ವಹಿಸಿಕೊಡಬಹುದು.

(1) ಜಿಲ್ಲಾ ಕೃಷಿ ಅಧಿಕಾರಿ
(2) ಜಿಲ್ಲಾ ಆರೋಗ್ಯಾಧಿಕಾರಿ.
(3) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ
(4) ಓರ್ವ ಕಾರ್ಯಪಾಲಕ ಇಂಜಿನಿಯರ್
(5) ಜಿಲ್ಲಾ ಅಂಕಿಅಂಶಗಳ ಅಧಿಕಾರಿ
(6) ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್
(7) ಜಿಲ್ಲಾ ಶಿಕ್ಷಣಾಧಿಕಾರಿ

(8) ಕೈಗಾರಿಕೆ ಮತ್ತು ವಾಣಿಜ್ಯ ಸಹಾಯಕ ನಿರ್ದೇಶಕ

(9) ಜಿಲ್ಲಾ ಪಶುಸಂಗೋಪನಾಧಿಕಾರಿ

(10) ಭೂ ಸಂರಕ್ಷಣಾಧಿಕಾರಿ
(ಅಸ್ತಿತ್ವದಲ್ಲಿರುವಲ್ಲಿ ಮಾತ್ರ)

(11) ಜಿಲ್ಲಾ ಪ್ರಚಾರಾಧಿಕಾರಿ
(ಅಸ್ತಿತ್ವದಲ್ಲಿರುವಲ್ಲಿ ಮಾತ್ರ)

-ಈ ಇಲಾಖೆಗಳ ಕಾರ್ಯಕ್ರಮಗಳನ್ನು ಸರ್ಕಾರವು ಜಿಲ್ಲಾ ಪರಿಷತ್ತುಗಳಿಗೆ ವಹಿಸಿಕೊಡಬಹುದು.

123. 10.31 ಕೆಲಸ ಕಾರ್ಯಗಳ ವಿಕೇಂದ್ರೀಕರಣದಿಂದ ಎಲ್ಲ ಹಂತ ಗಳಲ್ಲೂ ಸಿಬ್ಬಂದಿಯನ್ನು ಕಡಿಮೆಗೊಳಿಸಲು ಅವಕಾಶ ವಿದೆ. ಜಿಲ್ಲಾ ಪರಿಷತ್ತುಗಳು ಮತ್ತು ತಾಲೂಕು ಮಂಡಲಿ ಗಳಿಗೆ ಸಂಬಂಧಿಸಿದ ವಿವಿಧ ಆಡಳಿತ ವಿವರಗಳನ್ನು ಗಣನೆಗೆ ತೆಗೆದುಕೊಳ್ಳುವುದು ಅಗತ್ಯವಾಗಿದೆ. ರಾಜ್ಯದ ಪ್ರತಿ ವಿಭಾಗಾಧಿಕಾರಿಗಳ ಅಧೀನದಲ್ಲಿ ಅಗತ್ಯವಾದ ಸಿಬ್ಬಂದಿಯ ವಿವರಗಳನ್ನು ಗಣನೆಗೆ ತೆಗೆದುಕೊಂಡು ಪಂಚಾಯತಿ ಮಂಡಲಿಗಳಿಗೆ ವರ್ಗಾಯಿಸಬೇಕಾದ ಎಲ್ಲ ಇಲಾಖೆಗಳ ಬಗ್ಗೆ ವಿವರ ಸಲ್ಲಿಸಲು ಓರ್ವ ಅನುಭವಿ ಅಸಿಸ್ಟೆಂಟ್ ಕಮೀಷನರನ್ನು ನಿಯೋಜಿಸಬಹುದು.

124. 10.32 ಜಿಲ್ಲಾ ಪರಿಷತ್ತು ಮತ್ತು ಇತರ ಸ್ಥಳೀಯ ಮಂಡಲಿಗಳ ಹಣಕಾಸು ವ್ಯವಹಾರಗಳ ವ್ಯಾಪ್ತಿಯು ಗಣನೀಯವಾಗಿ ಅಧಿಕವಾಗುವುದರಿಂದ ಪ್ರತಿಯೊಂದು ಜಿಲ್ಲಾ ಪರಿಷತ್ತಿಗೂ ಅಕೌಂಟೆಂಟ್ ಜನರಲ್ ಇಲಾಖೆಯಿಂದ ಓರ್ವ ಸಮರ್ಥ ಅಕೌಂಟ್ಸ್ ಆಫೀಸರನ ಸೇವೆಯನ್ನು ಒದಗಿಸುವುದು ಅಗತ್ಯ ವಾಗಿದೆ. ಹಾಗೆ ನೇಮಕಗೊಳ್ಳುವ ಅಧಿಕಾರಿಗೆ ಮುಖ್ಯ ಲೆಕ್ಕ ಪತ್ರಾಧಿಕಾರಿ ಮತ್ತು ಹಣಕಾಸು ಸಲಹೆಗಾರ ಎಂಬ ಪದನಾಮವನ್ನು ನೀಡತಕ್ಕದ್ದು.

125 10.23 ಯಾವುದೇ ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಯ ಸೇವೆಯನ್ನು ರಾಜ್ಯ ಸರ್ಕಾರವು ಹಿಂದಕ್ಕೆ ಪಡೆಯಲು ಅಧಿನಿಯಮದಲ್ಲಿ ಅವಕಾಶವಿರಬೇಕು. ಹೀಗೆ ಹಿಂದಕ್ಕೆ ಪಡೆಯುವ ಸಂದರ್ಭದಲ್ಲಿ ಜಿಲ್ಲಾ ಪರಿಷತ್ತಿನ ವಿಶೇಷ ಸಭೆಯಲ್ಲಿ ನಾಮಕರಣ ಸದಸ್ಯರನ್ನು ಹೊರತು ಪಡಿಸಿ, ಪರಿಷತ್ತಿನ ಒಟ್ಟು ಸದಸ್ಯರ 2/3 ಭಾಗದಷ್ಟು ಸದಸ್ಯರು ಒಪ್ಪಿಗೆಯ ಮತ ಸೂಚಿಸಿದಾಗ ಮಾತ್ರ ಈ ಬಗ್ಗೆ ಸದರಿ ಅಧಿಕಾರಿಯ ಸೇವೆಯನ್ನು ಹಿಂದಕ್ಕೆ ಪಡೆಯುವ ಬಗ್ಗೆ ಒಂದು ಠರಾವನ್ನು ಹೊರಡಿಸಬಹುದು.

| | | |
|---|---|---|
| 126. | 10.34 | ಯೋಜನೆಗಳು ಮತ್ತು ಕಾರ್ಯಕ್ರಮಗಳಿಗೆ ಅಗತ್ಯವಾದ ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾ ಪರಿಷತ್ತು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಯ ಅಧಿಕಾರಿಗಳಿಗೆ ಇರತಕ್ಕದ್ದು. |
| 127. | 11.5 | ಈ ಸಂಸ್ಥೆಗಳಲ್ಲಿ ಮೇಲ್ವಿಚಾರಣೆ, ತಪಾಸಣೆ ಮತ್ತು ನಿರ್ದೇಶನ ನೀಡುವ ಮುಖ್ಯ ಉದ್ದೇಶದ ಸಂಸ್ಥೆಗಳಲ್ಲಿ ಒಳ್ಳೆಯ ಸಂಪ್ರದಾಯ ಹಾಗೂ ನೌಕರ ಮತ್ತು ನೌಕರೇತರರ ನಡುವೆ ಒಳ್ಳೆಯ ಸಂಬಂಧ ಹಾಗೂ ಪರಸ್ಪರ ಚರ್ಚೆಯಿಂದ ಒಬ್ಬರೊಡನೊಬ್ಬರು ಸಹಕಾರದಿಂದ ನಡೆಯುವ ಆರೋಗ್ಯಾತ್ಮಕವಾದ ನಡತೆಯನ್ನು ವೃದ್ಧಿ ಪಡಿಸುವುದೇ ಆಗಿದೆ. |
| 128. | 11.9 | ಸರ್ಕಾರಿ ಅಧಿಕಾರಿಗಳ ಕಾರ್ಯವ್ಯಾಪ್ತಿಯಲ್ಲಿ ಮುನ್ನಡೆಯುವ ಪಂಚಾಯತ್ ರಾಜ್ ಸಂಸ್ಥೆಗಳ ಮೇಲಿನ ನಿಯಂತ್ರಣವನ್ನು ರಾಜ್ಯಸರ್ಕಾರವೇ ಹೊಂದಿರುತ್ತದೆ. ಮತ್ತು ಮೇಲ್ವಿಚಾರಣೆ ಮತ್ತು ನಿರ್ದೇಶನದ ಅಧಿಕಾರವು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲೇ ಇರುತ್ತದೆ. |
| !29. | 11.10 | ಪಂಚಾಯತಿಗಳ ಚಟುವಟಿಕೆಗಳಿಗೆ ಸಂಬಂಧಿಸಿದ ನಿರ್ದೇಶನ ಮತ್ತು ಮೇಲ್ವಿಚಾರಣೆಯ ಜವಾಬ್ದಾರಿಯು ಪ್ರಮುಖವಾಗಿ ತಾಲೂಕು ಅಭಿವೃದ್ಧಿ ಮಂಡಲಿಗಳಿಗೇ ಇರತಕ್ಕದ್ದು. |
| 130. | 11.12 | ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ತಾಲೂಕು ಅಭಿವೃದ್ಧಿ ಮಂಡಲಿಗಳ ಕಚೇರಿಗಳ ತಪಾಸಣೆ ಮಾಡಬಹುದು. |
| 131 | 11.13 | ಸಂಬಂಧಪಟ್ಟ ವಿಭಾಗಾಧಿಕಾರಿಯು ಜಿಲ್ಲಾ ಪರಿಷತ್ತಿನ ತಪಾಸಣೆಯನ್ನು ನಡೆಸಬಹುದು. |
| 132. | 11.14 | ಪಂಚಾಯತಿ ಸಂಸ್ಥೆಗಳ ಆಯವ್ಯಯವನ್ನು ಅದಕ್ಕಿಂತ ಮೇಲಿನ ಹಂತದ ಮಂಡಲಿಯು ಅನುಮೋದಿಸಬೇಕು. ಅಂತಹ ಅನುಮೋದನೆಗಳನ್ನು, ಕಾರ್ಯಕ್ರಮಗಳ ವಿವರ ಗಳನ್ನು ಹೊರತುಪಡಿಸಿ, ಮಂಡಲಿಯ ಹಂಚಿಕೆಗಾಗಿ ಸಾಂಪ್ರದಾಯಕವಾಗಿ ಕಳುಹಿಸಿಕೊಡತಕ್ಕದ್ದು. ಮೇಲಿನ ಹಂತದಲ್ಲಿ ಆಯವ್ಯಯಗಳಿಗೆ ಅನುಮೋದನೆಯು ಬರುವುದು ತಡವಾದ ಸಂದರ್ಭದಲ್ಲಿ ಪಂಚಾಯತಿಗಳು ಮತ್ತು ತಾಲೂಕು ಅಭಿವೃದ್ಧಿ ಮಂಡಲಿಗಳು ಅನುಮೋದನೆ ಯನ್ನು ಕಾಯ್ದಿರಿಸಿ, ನಿರಂತರ ಯೋಜನೆಗಳ ಅನುಷ್ಠಾನ ವನ್ನು ಕೈಗೊಂಡು, ಅದಕ್ಕೆ ಅಗತ್ಯವಾದ ವೆಚ್ಚಗಳನ್ನು ಮಾಡತಕ್ಕದ್ದು. |

133. 11.21 ಸರ್ಕಾರದ ನಿಯಂತ್ರಣ ಮತ್ತು ಆಜ್ಞೆಗಳಿಗೆ ಒಳಪಟ್ಟು ವಿಭಾಗಾಧಿಕಾರಿಯು ಈ ಮಂಡಲಿಗಳ ಆಡಳಿತಾತ್ಮಕ ವಿಚಾರಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ಮೇಲೂ ಹಿಡಿತ ಹೊಂದಿರುವ ಮುಖ್ಯ ನಿಯಂತ್ರಣ ಪ್ರಾಧಿಕಾರಿಯಾಗಿರಬಹುದು.

134. 11.22 ತುರ್ತು ಅಥವಾ ವಿಶೇಷ ಸನ್ನಿವೇಶಗಳಲ್ಲಿ ಜಿಲ್ಲಾ ಅಧಿಕಾರಿಯು ಕೆಲವು ಅಧಿಕಾರಗಳನ್ನು ಚಲಾಯಿಸುವ ಅಧಿಕಾರವನ್ನು ಹೊಂದಿರಬಹುದು.

135. 12.6 ಈಗ ಇರುವ ರಾಜ್ಯ ಅನೌಪಚಾರಿಕ ಸಮಾಲೋಚನಾ ಸಮಿತಿಗೆ ಬದಲಾಗಿ ಒಂದು ರಾಜ್ಯ ಪಂಚಾಯತಿ ರಾಜ್ ಸಮಿತಿಯನ್ನು ರಚಿಸಬಹುದು. ಈ ಸಮಿತಿಯು ಕೆಳಕಂಡ ಸದಸ್ಯರನ್ನು ಒಳಗೊಂಡಿರಬೇಕು.

(1) ಅಧ್ಯಕ್ಷ ಅಭಿವೃದ್ಧಿ ಇಲಾಖೆಯ ಮಂತ್ರಿ
(2) ಉಪಾಧ್ಯಕ್ಷ ಅಭಿವೃದ್ಧಿ ಇಲಾಖೆಯ ಉಪಮಂತ್ರಿ.
(3) ಜಿಲ್ಲಾ ಪರಿಷತ್ತುಗಳ ಅಧ್ಯಕ್ಷರುಗಳು
(4) ರಾಜ್ಯ ಸರ್ಕಾರದಿಂದ ನಾಮಕರಣಗೊಂಡ ಮೂವರು ಅಧಿಕಾರಿಗಳು
(5) ಕಾರ್ಯದರ್ಶಿ—ರಾಜ್ಯ ಸರ್ಕಾರವು ಸೂಕ್ತವೆಂದು ತೋರಿದ ಒಬ್ಬ ಅಧಿಕಾರಿ.

—ಸಮಿತಿಯ ಕಾರ್ಯಗಳು ಈ ಕೆಳಕಂಡಂತೆ ಇರತಕ್ಕದ್ದು.

(1) ಪಂಚಾಯತ್ ರಾಜ್ಯಕ್ಕೆ ಸಂಬಂಧಿಸಿದ ಎಲ್ಲ ಸಾಮಾನ್ಯ ಪ್ರಶ್ನೆಗಳಿಗೂ ರಾಜ್ಯ ಸರ್ಕಾರಕ್ಕೆ ತಿಳುವಳಿಕೆ ಕೊಡುವುದು.

(2) ಸ್ಥಳೀಯ ಮಂಡಲಿಗಳ ಆಡಳಿತವನ್ನು ಪರಾಮರ್ಶಿಸು ವುದು ಮತ್ತು ಸಮನ್ವಯ ಮಾರ್ಗಗಳ ಸಲಹೆ ಮಾಡುವುದು.

(3) ಈ ಮಂಡಲಿಗಳ ಹಣಕಾಸು ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳುವ ಮಾರ್ಗೋಪಾಯಗಳ ಸಲಹೆ ಮಾಡುವುದು.

(4) ಮಂಡಲಿಗಳು ಸೂಚಿಸಬಹುದಾದ ವಿಷಯಗಳ ಅಂಶಗಳನ್ನು ಸರ್ಕಾರದ ಅಭಿಪ್ರಾಯಕ್ಕಾಗಿ ವರದಿ ಮಾಡುವುದು.

136 12.7 ಜಿಲ್ಲಾ ಪರಿಷತ್ತುಗಳ ಆಡಳಿತ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸಬೇಕು.

137. 12.8 ಸದ್ಯಕ್ಕೆ ಕಂದಾಯ ವಸೂಲಿಯನ್ನು ರೆವಿನ್ಯೂ ಏಜನ್ಸಿಯು ಮಾಡಬಹುದು. ಮನೆಗಂದಾಯ ವಸೂಲಿಯನ್ನು ರೆವಿನ್ಯೂ ಏಜನ್ಸಿಗೇ ವಹಿಸಬಹುದು.

138. 12.9 ಅಭಿವೃದ್ಧಿ ಇಲಾಖೆಗಳ ಮುಖ್ಯಸ್ಥರಿಗೆ ವರ್ಗಾವಣೆಗಳು, ನೇಮಕಾತಿಗಳು, ಶಿಸ್ತುಕ್ರಮಗಳು ಮುಂತಾದ ಆಡಳಿತಾತ್ಮಕ ಕೆಲಸಗಳ ಹೆಚ್ಚಿನ ಹೊರೆ ಇರುವುದರಿಂದ ದ್ವಿತೀಯ ದರ್ಜೆಯ ಅಧಿಕಾರಿಗಳ ವರ್ಗಾವಣೆ ಕಾರ್ಯವನ್ನು ಹಿಂತೆಗೆದುಕೊಂಡು ರಾಜ್ಯ ಸರ್ಕಾರವೇ ಇಟ್ಟುಕೊಳ್ಳ ತಕ್ಕದ್ದು. ಮೂರನೇ ದರ್ಜೆಯ ತಾಂತ್ರಿಕ ಸಿಬ್ಬಂದಿಯ ನೇಮಕಾತಿಗಳಿಗೆ ಸಂಬಂಧಿಸಿದ ಕಾರ್ಯವನ್ನು ಅಭಿವೃದ್ಧಿ ಇಲಾಖೆಗಳ ಕಚೇರಿಗಳಲ್ಲಿರುವ ಒಬ್ಬ ಹಿರಿಯ ಅಧಿಕಾರಿಯು ನೋಡಿಕೊಳ್ಳಬಹುದು.

139. 12.10 ಸಚಿವಾಲಯ ಮಟ್ಟದಲ್ಲಿ ಅಭಿವೃದ್ಧಿ ಕಮಿಷನರಿಗೆ ನೆರವಾಗಲು ಜಂಟಿ ಅಭಿವೃದ್ಧಿ ಕಮಿಷನರ್ ಮತ್ತು ಸರ್ಕಾರದ ಹೆಚ್ಚಿನ ಕಾರ್ಯದರ್ಶಿ ಎಂಬ ಒಂದು ಹುದ್ದೆಯನ್ನು ಸೃಷ್ಟಿಸಬಹುದು. ಈ ಅಧಿಕಾರಿಯು ಸಮುದಾಯ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಆಡಳಿತದ ಎಲ್ಲ ಹೊಣೆಯನ್ನೂ ನಿರ್ವಹಿಸಬೇಕು. ಇದರ ಜೊತೆಗೆ ಕೆಲವು ಇತರ ಅಧಿಕಾರಿ ಹುದ್ದೆಗಳನ್ನು ಸೃಷ್ಟಿಸಬಹುದು.

140. 12.16 ಸಮಾಜದ ದುರ್ಬಲ ವರ್ಗಗಳವರಿಗೆ ಸಾಲಗಳನ್ನು ನೀಡಲು ಅಥವಾ ಅನುದಾನ ರೂಪದಲ್ಲಿ ಕೊಡಲು ಸಮುದಾಯ ಅಭಿವೃದ್ಧಿ ಮಂಡಲಿಗಳ ಆಯವ್ಯಯದಲ್ಲಿ ಒಂದು ನಿರ್ದಿಷ್ಟ ಮೊತ್ತದ ಹಣವನ್ನು ಕಾಯ್ದಿರಿಸಬಹುದು. ಸಮಾಜದ ದುರ್ಬಲ ವರ್ಗಗಳ ಕ್ಷೇಮಾಭ್ಯುದಯಕ್ಕಾಗಿ ಪಂಚಾಯತಿಗಳು ತಾಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಪರಿಷತ್ತುಗಳು ನಿರ್ದಿಷ್ಟಪಡಿಸಿದಷ್ಟು ಶೇಕಡಾವಾರು ನಿಧಿಯನ್ನು ಪ್ರತ್ಯೇಕವಾಗಿ ತೆಗೆದಿರಿಸ ಬಹುದು. ಹೀಗೆ ನೀಡುವ ಹಣಕಾಸಿನ ನೆರವಿನಿಂದ ದುರ್ಬಲ ವರ್ಗದ ಜನರು ಜೀವನೋಪಾಯಕ್ಕೆ ಮಾರ್ಗ ಗಳನ್ನು ರೂಪಿಸಿಕೊಳ್ಳುವಂತಹ ಆರ್ಥಿಕ ಸ್ವರೂಪದ ನೆರವುಗಳಾಗಿರಬೇಕು.

141. 12.17 ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳು ಮುಂತಾದ ಸಮಾಜದ ದುರ್ಬಲ ವರ್ಗದ ಜನತೆಗೆ ನೆರವಾಗುವಂತಹ ಎಲ್ಲ ಕಾರ್ಯಕ್ರಮಗಳ ಅನುಷ್ಠಾನದ ಉಸ್ತುವಾರಿಯನ್ನು ತಾಲೂಕು ಅಭಿವೃದ್ಧಿ ಮಂಡಲಿ ಮತ್ತು ಜಿಲ್ಲಾ ಪರಿಷತ್ತು ಗಳ ಸಂಬಂಧಪಟ್ಟ ಸಮಿತಿಗಳು ನೋಡಿಕೊಳ್ಳುವುದು ಅವುಗಳ ಪ್ರಾಥಮಿಕ ಹೊಣೆಯಾಗಿರುತ್ತದೆ.

142 12.25 ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರೇತರ ಸಿಬ್ಬಂದಿಗಳಿಗೆ ಒಂದು ಸಮಗ್ರ ತರಬೇತಿ ಕಾರ್ಯಕ್ರಮವು ಅತ್ಯಂತ ಅಗತ್ಯವಾಗಿದೆ. ಈ ಉದ್ದೇಶಕ್ಕಾಗಿ ಪ್ರಾಂತೀಯ ತರಬೇತಿ ಕೇಂದ್ರಗಳನ್ನು ವ್ಯವಸ್ಥೆ ಮಾಡುವುದಕ್ಕೆ ಬದಲಾಗಿ ಜಿಲ್ಲಾ ಪರಿಷತ್ತು ಮತ್ತು ತಾಲೂಕು ಮಂಡಲಿಗಳ ಸದಸ್ಯರಿಗೆ ನೆರವಾಗುವಂತಹ ಪುನರ್‌ಮನನ ತರಬೇತಿಗಳು ಅಥವಾ ವಿಚಾರಗೋಷ್ಠಿಗಳನ್ನು ಏರ್ಪಡಿಸಬಹುದು. ಗ್ರಾಮ ಪಂಚಾಯಿತಿಗಳ ಸದಸ್ಯರಿಗೆ ಸಂಚಾರಿ ತರಬೇತಿಯಂತಹ ತಿಳುವಳಿಕೆ ನೀಡುವ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಬಹುದು. ಹೊಣೆಗಾರಿಕೆಯನ್ನು ಜಿಲ್ಲಾ ಪರಿಷತ್ತುಗಳಿಗೆ ವಹಿಸಬಹುದು.

144 12.29 ಭೂ ಕಂದಾಯ ವಸೂಲಾತಿಯಲ್ಲದೆ ಪಂಚಾಯತಿಗಳು ವಿಧಿಸುವ ಮನೆಗಂದಾಯದ ವಸೂಲಾತಿಯ ಕೆಲಸವೂ ಸಹ ರೆವಿನ್ಯೂ ಏಜನ್ಸಿಯ ವ್ಯಾಪ್ತಿಗೇ ಸೇರಬೇಕು. ಅಂದರೆ ಅಸಿಸ್ಟೆಂಟ್ ಕಮಿಷನರುಗಳ ಹುದ್ದೆಗಳನ್ನು ರದ್ದು ಮಾಡುವಂತಿಲ್ಲ. ಆದಾಗ್ಯೂ ಅಭಿವೃದ್ಧಿಗೆ ಸಂಬಂಧಿಸಿದಂತೆ ಅಸಿಸ್ಟೆಂಟ್ ಕಮಿಷನರುಗಳ ಕೆಲಸವು ಕಡಿಮೆಯಾಗುವುದ ರಿಂದ ವಿಶೇಷ ಭೂಸ್ವಾಧೀನಾಧಿಕಾರಿಗಳ ಹುದ್ದೆಗಳನ್ನು (ಬೃಹತ್ ನೀರಾವರಿ ಯೋಜನೆಗಳನ್ನು ಹೊರತುಪಡಿಸಿ) ರದ್ದುಗೊಳಿಸಬಹುದು ಮತ್ತು ಭೂಸ್ವಾಧೀನ ಕೆಲಸವನ್ನು ಉಪವಿಭಾಗಗಳ ಅಸಿಸ್ಟೆಂಟ್ ಕಮಿಷನರುಗಳು ನೋಡಿ ಕೊಳ್ಳಬೇಕು.

# ಕಡೆಯ ನುಡಿ

ಕೊಂಡಜ್ಜಿಯವರು ರಾಜಕೀಯವನ್ನು ಒಪ್ಪಿ ಅಪ್ಪಿದವರಲ್ಲ. ಆದರೆ ಅದಕ್ಕೆ ಕಾಲಿರಿಸಿದ ಮೇಲೆ ಕಾರ್ಯನಿಷ್ಠೆಯಿಂದ ನಡೆಯಲೇಬೇಕಷ್ಟೆ. ತಪ್ಪಿದರೆ ಕಾಯಕಕ್ಕೆ ದ್ರೋಹ ಬಗೆದಂತೆ. ಆದ್ದರಿಂದ ಅವರು ಅದನ್ನು ಕಾಯಕವೆಂದು ಸ್ವೀಕರಿಸಿ, ಕರ್ತವ್ಯವೆಸಗಿದರೇ ಹೊರತು, ಅದರಿಂದ ಸಲ್ಲದ ಹಣ, ಕೀರ್ತಿ, ಪ್ರತಿಷ್ಠೆಗಳನ್ನು ಪಡೆದುಕೊಳ್ಳಲಿಲ್ಲ. ಸೇವೆ ಎಂಬ ಸದ್ಭಾವನೆಯಿಂದ ದುಡಿದರು. ಅವರ ಪಾರಿಶುದ್ಧ್ಯವೇ ಅವರನ್ನು ಅಮರರನ್ನಾಗಿ ಮಾಡಿತು. ತಾವು ಬದುಕಿದ್ದ ಕೇವಲ ಅರವತ್ತೇಳು ವರ್ಷಗಳಲ್ಲಿ ಯಾರೂ ಪಡೆಯದ ಗೌರವಕ್ಕೆ ಅವರು ಪಾತ್ರರಾದರು. ವ್ಯಕ್ತಿ ಎಷ್ಟು ವರ್ಷಗಳ ಕಾಲ ಬದುಕಿದ್ದ ಎಂಬುದು ದೊಡ್ಡದಲ್ಲ, ಇದ್ದ ದಿನಗಳಲ್ಲಿ ಹೇಗೆ ಬದುಕಿದ ಎಂಬುದು ಮುಖ್ಯ. ಅವನು ಹೋದಮೇಲೂ ಅವನ ಸವಿನೆನಪು ಜನಮನದಲ್ಲಿ ಸದಾ ಹಸಿರಾಗಿ ಉಳಿಯುವುದು ಅವನು ಮಾಡಿದ ಸೇವೆಯಿಂದ, ಅವನು ಬಿಟ್ಟುಹೋದ ಅನುಕರಣಯೋಗ್ಯ ಆದರ್ಶದಿಂದ, ಅವನು ಹಂಚಿಕೊಟ್ಟ ಗುಣವಿಶೇಷಗಳಿಂದ. ಕೊಂಡಜ್ಜಿಯವರು ಕರ್ನಾಟಕದ ಗಣ್ಯಪುರುಷರ ಮಾಲಿಕೆಯಲ್ಲಿ ಉಳಿದಿರುವುದಕ್ಕೆ ಮುಖ್ಯ ಕಾರಣ ಅವರ ಶೀಲ, ಚಾರಿತ್ರ್ಯ ಹಾಗೂ ಅವರು ಮಾಡಿದ ಪ್ರಜಾಹಿತ ಕಾರ್ಯ. ಅವರ ಸೇವೆ ಮತ್ತು ಸದ್ಗುಣಗಳ ಬಣ್ಣನೆಗೆ ಮಾತು ಸೋತಾವು, ಋತುಗಳು ಬಳಲಿಯಾವು. ಆದರೂ ಅದಕ್ಕೊಂದು ಮಡಿಮನದ ನುಡಿ ನುಡಿದಿದ್ದಾರೆ ನಾಡಿನ ಹಿರಿಯ ಮುತ್ಸದ್ದಿ ಶ್ರೀ ಎಸ್. ನಿಜಲಿಂಗಪ್ಪನವರು. ಅದನ್ನಷ್ಟೇ ಇಲ್ಲಿ ಉಲ್ಲೇಖಿಸಿದರೆ ಸಾಕು. ಕೇಳಿ—

'ಶ್ರೀ ಕೊಂಡಜ್ಜಿ ಬಸಪ್ಪನವರನ್ನು ಅವರು ದಾವಣಗೆರೆಯಲ್ಲಿ ವಕೀಲರಾದಾಗಿನಿಂದಲೂ ನಾನು ಬಲ್ಲೆ. ವಕೀಲ ವೃತ್ತಿಯಲ್ಲಿ ದಕ್ಷತೆ, ನಿಷ್ಠೆ ಮತ್ತು ಪ್ರಾಮಾಣಿಕತೆಗೆ ಅವರು ಹೆಸರಾಗಿದ್ದರು. ಅವರ ಸಭ್ಯತೆ, ಹಸನ್ಮುಖ ಸರ್ವರನ್ನೂ ಆಕರ್ಷಿಸಿದ್ದವು. ರಾಜಕೀಯಕ್ಕೆ ಬಂದಮೇಲೂ ಅವುಗಳಿಗೆ ಕೊರತೆ ಬರಲಿಲ್ಲ! ಇವು ಅವರ ವ್ಯಕ್ತಿತ್ವದ ವಿಶೇಷಗಳು.

ನನ್ನ ಸರ್ಕಾರದಲ್ಲಿ ಶ್ರೀ ಕೊಂಡಜ್ಜಿಯವರು ಉಪಮಂತ್ರಿಗಳಾಗಿದ್ದರು. ತಮಗೆ ವಹಿಸಿದ ಕೆಲಸಗಳನ್ನು ಅಚ್ಚುಕಟ್ಟಾಗಿ ಸಮರ್ಪಕವಾಗಿ ಯಾರ ಹಂಗಿಗೂ ಒಳಪಡದೆ, ಯಾವ ರೀತಿಯ ಆಕ್ಷೇಪಣೆಗಳಿಗೂ ಗುರಿಯಾಗದೆ ನಿರ್ವಹಿಸಿದರು. ಅದಕ್ಕಾಗಿ ಅವರ ವಿಚಾರದಲ್ಲಿ ನನಗೆ ತೃಪ್ತಿ ಹಾಗೂ ಸಮಾಧಾನವಿದೆ.

ಶ್ರೀ ಬಸಪ್ಪನವರ ರಾಜಕೀಯ ಜೀವನ ಸಮಾಧಾನವಾಗಿ ನಡೆದುಕೊಂಡು ಬಂದಿಲ್ಲ. ಅನೇಕ ಎಡರು ತೊಡರುಗಳನ್ನು ಅವರು ಎದುರಿಸಬೇಕಾಗಿ ಬಂದಿತು. ಬಹುಶಃ, ಇದು ನಮ್ಮ ದೇಶದ ರಾಜಕೀಯದ ದೊಡ್ಡ ನ್ಯೂನತೆ. ಶ್ರೀಯುತರು ಇದಕ್ಕೆ ಹೊರತಲ್ಲ. ಆದರೆ ಸಮಾಜ ಸೇವೆಯನ್ನು ನಾನಾ ಮುಖದಲ್ಲಿ ಸಲ್ಲಿಸಿದ್ದಾರೆ. ಅದಕ್ಕಾಗಿ ಅವರನ್ನು ಮೆಚ್ಚಬೇಕು.

ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಯಾರೂ ಎಲ್ಲರನ್ನೂ ಮೆಚ್ಚಿಸಲಾರರು. ಆದರೆ ಶ್ರೀ ಕೊಂಡಜ್ಜಿ ಬಸಪ್ಪನವರ ವೈಯಕ್ತಿಕ ಜೀವನ ಶುದ್ಧ ವಾದುದು; ಮೆಚ್ಚತಕ್ಕುದುದು ಎಲ್ಲರೂ ಒಪ್ಪತಕ್ಕದು ಕೂಡ. ಅವರ ದಾಂಪತ್ಯ ಜೀವನವಂತೂ ಅಚ್ಚುಮೆಚ್ಚು. ಅದು ಅವರ ಸುದೈವ. ಯೋಗ್ಯ ಮನೆತನದ ಅವರ ಕುಟುಂಬ ಶ್ರೀಮತಿ ಸರ್ವಮಂಗಳಮ್ಮನವರು ಈ ದೊಡ್ಡ ಸಂಸಾರದ ಹೊಣೆಯನ್ನು ಕಷ್ಟಸುಖ ಯಾವುದೇ ಬಂದರೂ ಸಮತೆಯಿಂದ, ಸಮರ್ಪಕವಾಗಿ, ಗಾಂಭೀರ್ಯ, ಗೌರವ ಮತ್ತು ಹೊಣೆಗಾರಿಕೆಯಿಂದ ನಡೆಸಿಕೊಂಡು ಬಂದಿದ್ದಾರೆ. ಈ ದೃಷ್ಟಿಯಿಂದ ಸತಿಪತಿಗಳಿಬ್ಬರೂ ತಮ್ಮ ಪರಸ್ಪರ ಸೌಹಾರ್ದ, ಸಹಕಾರಗಳಿಂದ ಎಲ್ಲರ ಮೆಚ್ಚುಗೆಯನ್ನು ಪಡೆದಿರುವ ಆದರ್ಶ ದಂಪತಿಗಳು. "ಎರಡು ಪಕ್ಷಿಗಳ ಸಂಸಾರದ್ದಂತಿರುವ ಇವರನ್ನು ಕಂಡಾಗಲೆಲ್ಲ ನನಗೆ ತುಂಬ ಆನಂದ.

ಕೊಂಡಜ್ಜಿ ಬಸಪ್ಪನವರ ಅತ್ಯಂತ ಪರಿಣಾಮಕಾರಿಯಾದ ಸರ್ವರಿಂದಲೂ ಮಾನ್ಯತೆ ಪಡೆದು ಮತ್ತು ಪಡೆಯುತ್ತಿರುವ ಸೇವೆ ನಡೆದಿರುವುದು ಸ್ಕೌಟ್ ಕ್ಷೇತ್ರದಲ್ಲಿ. ಕರ್ನಾಟಕದ ಚೀಫ್ ಸ್ಕೌಟ್ ಕಮಿಷನರ್ ಆಗಿ ಹಲವಾರು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಅವರು ಎಲ್ಲರ ಹೊಗಳಿಕೆಗೆ ಪಾತ್ರರಾಗಿದ್ದಾರೆ. ಸ್ಕೌಟ್ ಸಂಸ್ಥೆಗಾಗಿಯೇ ಮಾಡಿಬಂದವರಂತೆ ಕೆಲಸ ಮಾಡುತ್ತಿರುವುದು ಒಂದು ವಿಶೇಷ. ಸ್ಕೌಟ್ ಆದವನಿಗೆ ಇರಬೇಕಾದ ಒಂದು ಅವಶ್ಯ ಗುಣ ಹಸನ್ಮುಖಿಯಾಗಿರುವುದು. ಶ್ರೀ ಕೊಂಡಜ್ಜಿ ಬಸಪ್ಪನವರು ಗಂಟುಮುಖ ಹಾಕಿದ್ದನ್ನು ನಾನೆಂದೂ ನೋಡಲಿಲ್ಲ, ಸದಾ ನಗುಮುಖಿವೇ. ಅವರ ಅಚ್ಚುಮೆಚ್ಚಿನ ಸ್ಕೌಟ್ ಬಹುಕಾಲ ಬಾಳಲಿ. ಅರವತ್ತು ವರ್ಷಗಳು ತುಂಬಿದರೂ ನಲವತ್ತು ವರ್ಷದವರಂತೆ ಕಾಣುವ ಶ್ರೀ ಕೊಂಡಜ್ಜಿ ಬಸಪ್ಪನವರು ನೂರು ವರ್ಷ ಬಾಳಲಿ. ಅವರ ಸೇವೆ ಸದಾ ಸಮಾಜ ಮತ್ತು ರಾಷ್ಟ್ರಕ್ಕೆ ದೊರೆಯಲಿ.'

ಆದರೆ ಈ 'ನೂರ್ಕಾಲ ಬಾಳಲಿ' ಎಂಬ ಹರಕೆ ಆಶೀರ್ವಾದ ಫಲಕಾರಿ ಯಾಗಲಿಲ್ಲ. ಅವರು ಬದುಕಿದ್ದು ಅರವತ್ತೇಳು ವರ್ಷಗಳು ಮಾತ್ರ. ಅಷ್ಟೂ ದಿನಗಳು ಅವರು ಚೆಂದಾಗಿಯೇ ಬಾಳಿದರು, ಶುದ್ಧರಾಗಿಯೇ ಬದುಕಿದರು. ಜಾನಪದ ಕವಿತೆ ಯೊಂದು ಅಭಿವ್ಯಕ್ತಿಸುವಂತೆ

ಮಂದಿ ಮಕ್ಕಳೊಳಗೆ ಒಂದಾಗಿ ಇರಬೇಕ
ನಂದಿಯ ಶಿವನ ದಯದಿಂದ ಹೋಹಾಗ
ಮಂದಿಯ ಬಾಯಾಗ ಇರಬೇಕ.

ಈ ಅರ್ಥಪೂರ್ಣ ಹರಕೆ ಹಾರೈಕೆಯಂತೆ ಶ್ರೀ ಕೊಂಡಜ್ಜಿ ಬಸಪ್ಪನವರು 'ಲೋಕದಾಗಿರುವತನಕ ಬೇಕಾಗಿ ಬದುಕಿದರು, ಸಾಕಾಗಿ ಶಿವನ ಸದರಿಗೆ ಹೋಹಾಗ ನಾಕು ಮಂದಿಯ ಮನದಾಗೆ ನೆಲೆ ನಿಂತರು!

## ಅನುಬಂಧ ೧ :

# ಕೊಂಡಜ್ಜಿಯವರ ಜೀವನದ ಪ್ರಮುಖ ಘಟ್ಟಗಳು

| | |
|---|---|
| 1915 | ಜನನ |
| 1938 | ಬಿ.ಎಸ್ಸಿ. ಪದವಿ ಮತ್ತು ಶ್ರೀಮತಿ ಸರ್ವಮಂಗಳಮ್ಮನವರೊಡನೆ ವಿವಾಹ |
| 1940 | ಕಾನೂನು ಪದವಿ |
| 1941 | ವಕೀಲಿ ವೃತ್ತಿ ಆರಂಭ. |
| 1942 | ಸ್ಕೌಟ್ಸ್ ಮತ್ತು ಗೈಡ್ಸ್ ಸಹಾಯಕ ಕಮಿಷನರ್ |
| 1946 | ಚಿತ್ರದುರ್ಗ ಜಿಲ್ಲಾ ಬೋರ್ಡ್ ಅಧ್ಯಕ್ಷರು |
| 1948 | ಚಿತ್ರದುರ್ಗ ಜಿಲ್ಲಾ ಬೋರ್ಡ್ ಸದಸ್ಯರು |
| 1950 | ಮೈಸೂರು ವಿಶ್ವವಿದ್ಯಾನಿಲಯ ಆಡಳಿತ ಮಂಡಲಿ ಸದಸ್ಯರು |
| 1951 | ದಾವಣಗೆರೆ ಕೃಷಿ ಕೈಗಾರಿಕೆ ವಾಣಿಜ್ಯ ಮತ್ತು ಪರಿವರ್ತನಾ ಸಹಕಾರ ಸಂಘ ಸ್ಥಾಪನೆ |
| 1952 | ಆಸ್ಟ್ರಿಯ ದೇಶದಲ್ಲಿ ನಡೆದ ವಿಶ್ವ ಸ್ಕೌಟ್ ಮೇಳದಲ್ಲಿ ಭಾರತದ ಪ್ರತಿನಿಧಿ. |
| 1955 | ಸ್ಕೌಟ್ಸ್ ಮತ್ತು ಗೈಡ್ಸ್ ಸಹಾಯಕ ಸ್ಟೇಟ್ ಕಮಿಷನರ್, ಚಿತ್ರದುರ್ಗ ವಿಭಾಗ |
| 1962 | ವಿಧಾನಸಭೆಗೆ ಆಯ್ಕೆ ಮತ್ತು ಸಹಕಾರ ಶಾಖೆಯ ಉಪಸಚಿವರು |
| 1962 | ರಾಜ್ಯ ಸ್ಕೌಟ್‌ಗೈಡ್‌ನ ಅಧ್ಯಕ್ಷರು |
| 1963 | ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಜ್ಯ ಕಾರ್ಯದರ್ಶಿ |
| 1964 | ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯದ ಪ್ರಧಾನ ಕಮಿಷನರ್ |
| 1967 | ವಿಧಾನಸಭೆಗೆ ಪುನರಾಯ್ಕೆ: ವಾರ್ತಾ ಮತ್ತು ಅಬಕಾರಿ ಇಲಾಖೆ ಉಪಸಚಿವರು |

| | |
|---|---|
| 1969 | ಪ್ರದೇಶ ಕಾಂಗ್ರೆಸ್ ಸಮಿತಿ ಕಾರ್ಯದರ್ಶಿ |
| 1971 | ಭಾರತದ ಲೋಕಸಭೆಗೆ ಆಯ್ಕೆ ಮತ್ತು ಕೊಂಡಜ್ಜಿ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರದ ಅಭಿವೃದ್ಧಿ ಆರಂಭ. |
| 1972 | ಕೇಂದ್ರ ಆರೋಗ್ಯ ಮತ್ತು ಕುಟುಂಬ ಯೋಜನಾ ಖಾತೆಯ ಉಪಸಚಿವರು. |
| 1973 | ನೈರೋಬಿಯಲ್ಲಿ ನಡೆದ ವಿಶ್ವ ಸ್ಕೌಟ್ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿ. |
| 1974 | ಕುಟುಂಬ ಯೋಜನೆ ಕುರಿತು ಅಂತಾರಾಷ್ಟ್ರೀಯ ಸಮ್ಮೇಳನಕ್ಕೆ ಭಾರತ ತಂಡದ ನಾಯಕರಾಗಿ ಮಣಿಪಾಲಕ್ಕೆ. |
| 1976 | ಷಷ್ಠ್ಯಬ್ದಿ ಸಮಾರಂಭ |
| 1980 | ಸ್ವಗೃಹ ನಿರ್ಮಾಣ ಮತ್ತು ಪ್ರವೇಶ. |
| 1982 | ಕರ್ನಾಟಕ ಸರ್ಕಾರದ ಸಮಾಜ ಸೇವಾ ಪುರಸ್ಕಾರ. |
| 14.11.1982 | ನಿಧನ |

ನೀನು ಮುಗಿಲು ನಾನು ನೆಲ।
ನಿನ್ನ ಒಲವೆ ನನ್ನ ಬಲ।
ಒಳಗೆಲ್ಲ ಬೆಳಕನ್ನು। ಚೆಲ್ಲಿದವರಾರೋ।
ತುಂಬಿದ್ದ ಕತ್ತಲನು। ಕಳೆದವರು ಯಾರೋ।
ಹಮ್ಮು ಬಿಮ್ಮು ಒಂದೂ ಇಲ್ಲ।

-- ಡಾ. ಜಿ.ಎಸ್. ಶಿವರುದ್ರಪ್ಪ

## ಶ್ರೀ ಬಿ. ತಿಪ್ಪೇರುದ್ರಯ್ಯ

ದಕ್ಷ ಅಧಿಕಾರಿ ಬಿ. ತಿಪ್ಪೇರುದ್ರಯ್ಯನವರು ಹೇಳುತ್ತಾರೆ—'ಜಾತಿ, ಮತ, ಪಂಥಗಳ ಬೇಲಿಯನ್ನು ಮುರಿದು, ರಾಜ್ಯ ರಾಜ್ಯಗಳ ಗಡಿಯನ್ನು ಅಳಿಸಿ, ಸೇವೆ, ಪರೋಪಕಾರ, ಶಿಸ್ತು, ಸಂಯಮ ಮತ್ತು ಪ್ರಾಮಾಣಿಕತೆಗಳುಳ್ಳ ನಾಗರಿಕರನ್ನು ತಯಾರಿಸ ಹೊರಟ ಜಾಗತಿಕ ಚಳವಳಿಯಲ್ಲಿ ಸ್ಕೌಟ್ಸ್ ಅಂಡ್ ಗೈಡ್ಸ್‌ಗೆ ಅಗ್ರಸ್ಥಾನ. ಮೇಲ್ಕಂಡ ಸದ್ಗುಣಗಳನ್ನು ಹುಟ್ಟಿನೊಂದಿಗೇ ಪಡೆದುಕೊಂಡು ಬಂದಿದ್ದ ಕೊಂಡಜ್ಜಿ ಬಸಪ್ಪನವರನ್ನು 'ಸ್ಕೌಟ್ ಅಂಡ್ ಗೈಡ್ಸ್' ಸಂಸ್ಥೆ ಆಕರ್ಷಿಸಿದ್ದು ಸೋಜಿಗ ವೇನಲ್ಲ, ಸಹಜ. ಹೀಗೆ ನಿಜದ ಸ್ಕೌಟ್ ಆಗಿದ್ದ ಕೊಂಡಜ್ಜಿಯವರು ಬೆಳೆಬೆಳೆದು ರಾಜ್ಯದಲ್ಲಿ ಆ ಸಂಸ್ಥೆಯ ನೇತಾರರಾದರು. ಸಂಸ್ಥೆಯ ಅಂತಾರಾಷ್ಟ್ರೀಯ ಜಾಗತಿಕ ಸಭೆ ಸಮ್ಮೇಳನಗಳಲ್ಲಿ ಮುಖ್ಯ ಭಾಗವೆನಿಸಿದರು. ಸಂಸ್ಥೆಗೆ ಚೇತನಪ್ರಾಯರಾದರು. ಸಂಸ್ಥೆ ಅವರ ಜೀವನದ ಬಹುಮುಖ್ಯ ಭಾಗವೆನಿಸಿತು. ಇವರು "ಬಾಲ ಚಮೂ ಆಗಿದ್ದಾಗ ಅಗ್ನಿಶಿಬಿರ (Camp Fire)ಗಳಲ್ಲಿ ಮನರಂಜನೆಗೆಂದು ಧರಿಸಿದ್ದ 'ಕೋಲೇ ಬಸವನ ಪಾತ್ರವನ್ನು ಎಂದಿಗಾದರೂ ಮರೆಯಲು ಸಾಧ್ಯವೆ!"

## ಶ್ರೀ ಬಿ.ಆರ್. ಭಗತ್

ಲೋಕಸಭೆಯ ಸ್ಪೀಕರ್ ಆಗಿದ್ದ ಬಿ. ಆರ್. ಭಗತ್ ಹೇಳುತ್ತಾರೆ— "ಕೊಂಡಜ್ಜಿಯವರದು ವರ್ಣಮಯ ಬದುಕು. ಅವರು ಶಾಸಕರು, ಶಿಕ್ಷಣತಜ್ಞರು, ಸಂಸದರು, ಸಹಕಾರ ಮನೋಭಾವದವರು. ಎಲ್ಲಕ್ಕೂ ಮಿಗಿಲಾಗಿ ನಿಷ್ಠಾವಂತ ಸ್ಕೌಟ್! ಜನತೆ ಹಾಗೂ ಸಮುದಾಯ ಸೇವೆಯೇ ಅವರ ಬಾಳ ಗುರಿಯಾಗಿತ್ತು. ಸ್ಕೌಟ್ ಚಳವಳಿಯನ್ನು ರಾಷ್ಟ್ರಾದ್ಯಂತ ವ್ಯಾಪಕವಾಗಿ ಬೆಳೆಸಬೇಕು ಎಂಬ ಹಂಬಲ ಅವರಿಗಿತ್ತು. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಕುರಿತ ಹೊಸ ಹೊಸ ಯೋಜನೆಗಳನ್ನು ರೂಪಿಸುವಲ್ಲಿ, ಅವುಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಶ್ರೀಯುತರು ತುಂಬು ಯಶಸ್ವಿಗಳಾಗಿದ್ದರು" ಎಂದು.

## ಶ್ರೀ ಹೆಚ್. ಸಿದ್ದವೀರಪ್ಪ

'ಶಿಸ್ತು ಸೇವೆ ಮತ್ತು ಸಂಘಟನೆಗಳ ಸೂತ್ರವಾಗಿರುವ ಒಂದು ಅಂತಾರಾಷ್ಟ್ರೀಯ ಚಳವಳಿ ಸ್ಕೌಟ್ಸ್ ಮತ್ತು ಗೈಡ್ಸ್. ಈ ಚಳವಳಿಯೊಂದಿಗೆ ಕಳೆದ ನಾಲ್ಕು ದಶಕಗಳಿಂದ ಕೇಳಿಬರುತ್ತಿದ್ದ ಹೆಸರು ಕೊಂಡಜ್ಜಿ ಬಸಪ್ಪನವರದು. ಸಮಾಜ ಸೇವಾ ಮನೋಭಾವನೆಯನ್ನು ಬಾಲ್ಯದಿಂದಲೂ ಬೆಳೆಸಿಕೊಂಡು ಬಂದಿರುವ ಶ್ರೀ ಕೊಂಡಜ್ಜಿ ನನ್ನ ಜಿಲ್ಲೆಯವರೆಂಬ ಅಭಿಮಾನ ನನಗೆ'—ಹೀಗೆಂದು ಅಭಿಪ್ರಾಯ ಪಟ್ಟವರು ಅಂದಿನ ಆರೋಗ್ಯ ಸಚಿವರಾಗಿದ್ದ ಶ್ರೀ ಹೆಚ್. ಸಿದ್ಧವೀರಪ್ಪನವರು.

## ಶ್ರೀ ಟಿ.ಎ. ಪೈ

ಅವರ ಇತರ ಸೇವಾಕಾರ್ಯಗಳು ಎಷ್ಟೇ ಇರಲಿ, ಯಾವುದೇ ರೂಪದಲ್ಲಿರಲಿ, ಕೊಂಡಜ್ಜಿಯವರು ನಿಜಕ್ಕೂ ರಾಜ್ಯದಲ್ಲಿ ಸ್ಕೌಟ್ ಸಂಸ್ಥೆಯ ಮುಖ್ಯ ರೂವಾರಿ. ೧೯೪೧ರಿಂದಲೂ ಅವರು ಅದರೊಡನೆ ಸಂಬಂಧವಿಟ್ಟುಕೊಂಡಿದ್ದರು. ಇಂದೇನಾದರೂ ರಾಜ್ಯದ ಸ್ಕೌಟ್ ಸಂಸ್ಥೆಗೆ ಪ್ರಗತಿ ಪ್ರತಿಷ್ಠೆ ಮತ್ತು ಜನಪ್ರಿಯತೆಗಳು ಪ್ರಾಪ್ತವಾಗಿದ್ದರೆ ಅದರ ಎಲ್ಲ ಗೌರವವೂ ಕೊಂಡಜ್ಜಿಯವರಿಗೆ ಸಲ್ಲುತ್ತದೆ ಎಂದು ಮುಕ್ತ ಕಂಠದಿಂದ ಹೊಗಳಿದ್ದಾರೆ ಅಂದಿನ ಕೇಂದ್ರ ಮಂತ್ರಿ ಮಂಡಲದಲ್ಲಿ ಕೈಗಾರಿಕಾ ಮಂತ್ರಿಗಳಾಗಿದ್ದ ಶ್ರೀ ಟಿ. ಎ. ಪೈಯವರು.

## ಶ್ರೀ ಸಿ.ಡಿ. ನಟರಾಜನ್

'ಕರ್ನಾಟಕದಲ್ಲಿ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಭದ್ರ ಬುನಾದಿ ಹಾಕಿ ಉತ್ತಮ ಚಾಲನೆ ಕೊಟ್ಟ ಕೀರ್ತಿ ಶ್ರೀ ಕೊಂಡಜ್ಜಿ ಬಸಪ್ಪನವರಿಗೆ ಸಲ್ಲುತ್ತದೆ. ಅದರ ವಿಸ್ತರಣೆ ವಿಖ್ಯಾತಿಗಳಲ್ಲಿ ಅವರ ಸೇವೆ ಅಮೋಘ, ಅಮೇಯ. ಅವರ ಸಮರ್ಥ ನಾಯಕತ್ವದಲ್ಲಿ ಸ್ಕೌಟ್‌ಗೆ ಗಣನೀಯ ಪ್ರಗತಿ ಸಾಧಿತವಾಗಿದೆ ಎಂದು ಹೇಳಿಕೊಳ್ಳಲು ಹೆಮ್ಮೆ ಪಡುತ್ತೇನೆ'—ಎಂದು ಹಿಗ್ಗಿದವರು ಭಾರತ್ ಸ್ಕೌಟ್ಸ್‌ನ ಮುಖ್ಯ ಕಮೀಷನರಾಗಿದ್ದ ಶ್ರೀ ಸಿ. ಡಿ. ನಟರಾಜನ್.

ಕೊನೆ ಕೊನೆಯಲ್ಲಿ ಸ್ಕೌಟ್ ಕೊಂಡಜ್ಜಿಯವರ ಬಾಳಿನ ಸರ್ವಸ್ವವೇ ಆಯಿತು. ಅದರ ಪ್ರಭಾವದಿಂದಾಗಿ ಶ್ರೀಯುತರು ಮನೆ, ಮಠ, ಮಡದಿ, ಮಕ್ಕಳು ಎಲ್ಲವನ್ನೂ, ಎಲ್ಲರನ್ನೂ ಮರೆತು ಸ್ಕೌಟ್ ಸಾಗರದಲ್ಲಿ ಸಂಪೂರ್ಣವಾಗಿ ತಮ್ಮ ಉತ್ಸಾಹ ಉಲ್ಲಾಸ ಗಳ ದೋಣಿಯಾಟವಾಡಿದರು. ಕೊಂಡಜ್ಜಿಯವರು ತಮ್ಮ ಈ ಸ್ಕೌಟ್ ಮೋಹವನ್ನು ತಮ್ಮ ಹಿಂದೆಯೇ ತೆಗೆದುಕೊಂಡು ಹೋಗಲಿಲ್ಲ, ಅದನ್ನು ತಮ್ಮ ಮಗನಿಗೆ ಬಳುವಳಿಯಾಗಿ ಕೊಟ್ಟರು. ಅಂದರೆ ಅವರ ಮಗ ಕೊಂಡಜ್ಜಿ ಬಿ. ಷಣ್ಮುಖಪ್ಪನವರಿಗೆ ನಿರಂತರ ಸೇವಾ ತರಬೇತಿ ನೀಡಿ, ಅವರನ್ನು ಓರ್ವ ಆದರ್ಶ ಸ್ಕೌಟ್ ಆಗಿ ರೂಪಿಸಿದರು. ಷಣ್ಮುಖಪ್ಪನವರು ಬಿ. ಕಾಂ., ಎಲ್‌ಎಲ್.ಬಿ. ಪದವೀಧರರಾದರೂ ಲಾಯರ್ ಆಗಿ ಬೋರ್ಡ್ ಏರಿಸಲಿಲ್ಲ, ತಂದೆಯವರಂತೆ ಸ್ಕೌಟ್ ಚಳವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ತಂದೆಯವರ ನಿಷ್ಠೆ, ಪ್ರಾಮಾಣಿಕತೆ, ಶಾಂತ ಸ್ವಭಾವ ಮೊದಲಾದ ಸದ್ಗುಣಗಳು ಇವರಲ್ಲೂ ಇದ್ದು ವೃದ್ಧಿಗೊಂಡದ್ದರಿಂದ ಶ್ರೀಯುತರು ಇಂದು ರಾಜ್ಯದ ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯ ಮುಖ್ಯ ಆಯುಕ್ತರಾಗಿ ಕೆಲಸ ಮಾಡುತ್ತಿದ್ದಾರೆ. ಅದಕ್ಕೊಂದು ಚಾಲನೆ ನೀಡುವ ಆಶಾದೀಪವಾಗಿದ್ದಾರೆ. ಇದಕ್ಕೆ ಕೊಂಡಜ್ಜಿ ಬಸಪ್ಪನವರ ಆದರ್ಶ ಜೀವನವೇ ಮುಖ್ಯಕಾರಣ ಎನ್ನಬಹುದಾಗಿದೆ.

ಸ್ವಾರ್ಥ ರಹಿತನಾಗಿದ್ದು– ಹೃದಯಾಶುದ್ಧಿ ಹೊಂದಿರುವವನಿಗೆ,
ಎಲ್ಲವೂ ಒಳ್ಳೆಯದಾಗಿ ಪರಣಮಿಸುತ್ತದೆ.

**– ಜೇಮ್ಸ್ ಅಲನ್**



ಕೊಂಡಜ್ಜಿ ಬಸಪ್ಪ



ಸರ್ವಮಂಗಳಮ್ಮ ಕೊಂಡಜ್ಜಿ ಬಸಪ್ಪ



ಕೇಂದ್ರ ಸಚಿವ ಕೊಂಡಜ್ಜಿ ಬಸಪ್ಪ ತುಂಬು ಕುಟುಂಬ



ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಮತ್ತು ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸ್ ಅವರೊಂದಿಗೆ



ಸಮಾರಂಭದಲ್ಲಿ ಕೆಂಗಲ್ ಹನುಮಂತಯ್ಯ, ಎನ್. ಲಕ್ಷಣರಾವ್ ಎ.ಆರ್. ಬದರಿನಾರಾಯಣ್
ಮತ್ತು ಡಾ. ಎಚ್. ನರಸಿಂಹಯ್ಯ ಅವರೊಂದಿಗೆ



ಕೊಂಡಜ್ಜಿ ಬಸಪ್ಪ (ಪೇಟಧಾರಿ) ರಾಜ್ಯದ ಸ್ಕೌಟ್ ನಾಯಕರುಗಳೊಂದಿಗೆ ನವದೆಹಲಿಯಲ್ಲಿ ನಡೆದ ರಾಷ್ಟ್ರೀಯ ಜಾಂಬೋರಿಯಲ್ಲಿ ಭಾರತದ ಪ್ರಧಾನಿ ಪಂಡಿತ್ ಜವಹರಲಾಲ್ ನೆಹರೂ ಅವರು ಶಿಬಿರಕ್ಕೆ ಭೇಟಿ ನೀಡಿದಾಗ



ಸ್ಕೌಟ್ ಸೇನಾನಿ - ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಮುಖ್ಯ ಆಯುಕ್ತರಾಗಿ



ನ.ಸು. ಹರ್ಡೇಕರ್ ಅವರೊಡನೆ ಕೊಂಡಜ್ಜಿ ಬಸಪ್ಪ, ಕೆ.ಎಫ್. ಪಾಟೀಲ್ ಮತ್ತು ಕೆ.ಎಚ್. ಪಾಟೀಲ್



ನವದೆಹಲಿಯಲ್ಲಿ ನಡೆದ ಸ್ಕೌಟ್ ಸಮಾರಂಭದಲ್ಲಿ ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್ ಅವರೊಂದಿಗೆ



ರಾಷ್ಟ್ರಪತಿ ಡಾ|| ಸರ್ವಪಲ್ಲಿ ರಾಧಕೃಷ್ಣನ್ ಅವರೊಂದಿಗೆ



ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪ ಅವರೊಂದಿಗೆ



ಕೊಂಡಜ್ಜಿ ಶಿಬಿರದಲ್ಲಿ ಉಪರಾಷ್ಟ್ರಪತಿ ಡಾ|| ಬಿ.ಡಿ. ಜತ್ತಿ ಅವರೊಂದಿಗೆ



ರಾಜ್ಯಪಾಲ ಶ್ರೀ ಮೋಹನ್ ಲಾಲ್ ಸುಖಾಡಿಯ ಹಾಗೂ ಮುಖ್ಯಮಂತ್ರಿ ಶ್ರೀ ಡಿ. ದೇವರಾಜ್ ಅರಸ್, ಧರ್ಮರತ್ನಾಕರ ಶ್ರೀ ಆರ್. ಮದ್ದೂರಾಯಪ್ಪ ಅವರೊಂದಿಗೆ ಕೊಂಡಜ್ಜಿ ಶಿಬಿರದಲ್ಲಿ



ಸಕಲೇಶಪುರದ ಜಾಂಬೋರೇಟ್‌ನಲ್ಲಿ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಅವರೊಂದಿಗೆ



ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಉಪಸಚಿವರಾಗಿ ಇಲಾಖೆಯ
ಮುಖ್ಯಸ್ಥರನ್ನು ಉದ್ದೇಶಿಸಿ ಮಾತನಾಡುತ್ತಿರುವುದು.



1951ರಲ್ಲಿ ಆಸ್ಟ್ರಿಯಾದಲ್ಲಿ ಜರುಗಿದ 7ನೇ ವಿಶ್ವಸ್ಕೌಟ್ ಜಾಂಬೋರಿಯಲ್ಲಿ ಬಾಲಚಮೂದಳದೊಂದಿಗೆ



ಮುಖ್ಯಮಂತ್ರಿ ಆರ್. ಗುಂಡೂರಾವ್ ಅವರನ್ನು ರಾಜ್ಯ ಸಂಸ್ಥೆ ಅಧ್ಯಕ್ಷರನ್ನಾಗಿ ಗೌರವಿಸಿದ ಸಂದರ್ಭದಲ್ಲಿ
ಸಚಿವ ಶ್ರೀ ಕಾಗೋಡು ತಿಮ್ಮಪ್ಪ ಅವರೊಂದಿಗೆ ಬೆಸೆಂಟ್ ಪಾರ್ಕ್‌ನಲ್ಲಿ



ಮೈಸೂರಿನ ರಾಷ್ಟ್ರೀಯ ವಾಕ್ ಮತ್ತು ಶ್ರವಣ ಸಂಸ್ಥೆಯಲ್ಲಿ ಕೇಂದ್ರ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಸಚಿವ ಡಾ. ಕರಣ್ ಸಿಂಗ್ ಅವರೊಂದಿಗೆ



ಕೇಂದ್ರ ಸಚಿವರಾದ ಶ್ರೀ ಕೆ. ಬ್ರಹ್ಮಾನಂದ ರೆಡ್ಡಿ ಮತ್ತು ಡಾ. ಕರಣ್‌ಸಿಂಗ್‌ರೊಂದಿಗೆ



ಕೊಂಡಜ್ಜಿ ಶಿಬಿರದಲ್ಲಿ ರಾಜ್ಯಪಾಲ ಶ್ರೀ ಧರ್ಮವೀರ, ಎಂ.ಕೆ. ಪಾಣಿ ಅವರೊಂದಿಗೆ



ಕೇಂದ್ರ ಶಿಕ್ಷಣ ಸಚಿವ ಶ್ರೀ ಎಂ.ಸಿ. ಚಾಗ್ಲಾ ಅವರೊಂದಿಗೆ



ಕೇಂದ್ರ ಸಾರಿಗೆ ಸಚಿವ ಶ್ರೀ ರಾಜ್‌ಬಹದ್ದೂರ್, ರಾಜ್ಯ ಲೋಕೋಪಯೋಗಿ
ಸಚಿವ ಶ್ರೀ ಹೆಚ್.ಎಂ. ಚನ್ನಬಸಪ್ಪ ಮತ್ತು ಶ್ರೀ ಐ.ಜಿ. ಸನದಿ ಅವರೊಂದಿಗೆ



ಶಿಕ್ಷಣ ಸಚಿವ ಎಸ್.ಎಂ. ಯಾಹ್ಯಾ, ಜೆ.ಬಿ. ಮಲ್ಲಾರಾಧ್ಯ, ಎನ್. ಲಕ್ಷ್ಮಣ್‌ರಾವ್
ಮತ್ತು ಗಾಡಿ ಚಲುವರಾಯ ಚೆಟ್ಟಿಯವರೊಂದಿಗೆ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ|| ಎಸ್.ಜಿ. ಪಂಗಣ್ಣಾಯ್ಯ ಹಾಗೂ ಇತರರು | 20-00 |
| 2. | ಎಸ್. ನಿಜಲಿಂಗಪ್ಪ | ಡಾ|| ಸಂದೀಪ್ ಶಾಸ್ತ್ರಿ | 15-00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ|| ಎಸ್.ಜಿ. ಪಂಗಣ್ಣಾಯ್ಯ | 15-00 |
| 4. | ವೈಕುಂಠ ಬಾಳಿಗಾ | ಡಾ|| ಪಿ. ಜೀವನ್ ಕುಮಾರ್ | 20-00 |
| 5. | ವೀರೇಂದ್ರ ಪಾಟೀಲ್ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 20-00 |
| 6. | ಕಡಿದಾಳ್ ಮಂಜಪ್ಪ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 15-00 |
| 7. | ಜಿ.ಪಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15-00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ|| ಎಸ್.ಜಿ. ಪಂಗಣ್ಣಾಯ್ಯ ಹಾಗೂ ಇತರರು | 15-00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15-00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15-00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15-00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20-00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15-00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಜಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚನ್ನಬಸಪ್ಪ | ಪ್ರೊ|| ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಜಯ್ಯ | ಸಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ಸಮೋಶಿ | ಡಾ. ಕಪಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂಪಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರ್ಯೋಗದ್ದೆ ಉಷಾ<br>ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ಪಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20-00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20-00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20-00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20-00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20-00 |
| 59. | ಮೊಹಮ್ಮದ್ ಅಲಿ | ಪ್ರೊ|| ಶಿವರಾಜ ಪಾಟೀಲ | 20-00 |
| 60. | ಪಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20-00 |
| 61. | ಶಂಕರರೆಡ್ಡಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20-00 |
| 62. | ಸದಾಶಿವ.ಎಸ್.ಶೆಟ್ಟರ್ | ನಾರಾಯಣ ಘಳಗಿ | 20-00 |
| 63. | ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರಿಮನಿ | 25-00 |
| 64. | ಎಸ್.ವ್ಹಿ. ಪಾಟೀಲ | ಡಾ. ಎಂ.ಎಸ್. ಪಾಟೀಲ್ | 20-00 |
| 65. | ವ್ಹಿ. ರಾಮಚಂದ್ರ | ಪ್ರೊ. ಚಿಕ್ಕಣ್ಣ | 20-00 |
| 66. | ಕೆ.ಬಿ. ರೇವಣಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20-00 |
| 67 | ವ್ಹಿ.ಕೆ. ರಾಮಯ್ಯ | ಡಾ. ಬಿ.ಡಿ. ಶಿವಲಿಂಗಯ್ಯ | 20-00 |
| 68. | ಸೊರಟೂರು ಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20-00 |
| 69. | ಎಂ.ಪಿ. ಪ್ರಕಾಶ್ | [illegible] | 20-00 |
| 70. | ಎಂ.ಬಿ. ಪಾಟೀಲ್ | ಡಾ. ಗುರುಪಾದ ಮರಿಗುದ್ದಿ | 20-00 |
| 71. | ಎಸ್.ಬಿ. ಶಿವಳಗಿ | ಡಾ. ಡಿ.ಎಸ್. ಜಯಪ್ಪಗೌಡ | 20-00 |
| 72. | ಡಾ|| ಎಂ.ಆರ್. ತಂಗಾ | ಎಸ್. ಸುರೇಶ್ ಕುಮಾರ್ | 25-00 |
| 73. | ಹೆಚ್.ಎಲ್. ನಾಗೇಗೌಡ | ಪ್ರೊ. ಬಿ.ಎಸ್. ಮುದ್ದೇಗೌಡ | 20-00 |
| 74. | ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20-00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20-00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15-00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20-00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20-00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15-00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಮುದುಗಿ | 20-00 |
| 7. | ಭೂಪೇಶ್ ಗುಪ್ತ | ಆರ್.ಕೆ. ಮುದುಗಿ | 20-00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15-00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20-00 |
| 10. | ಡಾ॥ ಚಿಂತಾಮಣಿ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20-00 |
| 11. | ಪನಂಪಿಳ್ಳಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15-00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15-00 |
| 13. | ಎಸ್.ಎಂ. ಜೋಶಿ | ಕೆ.ಹೆಚ್. ಸಾವಿತ್ರಿ | 15-00 |
| 14. | ಡಾ॥ ಲಂಕಾ ಸುಂದರಂ | [illegible] | 15-00 |

